# ಮುನ್ನುಡಿ

ಪದ್ಮಮಹಾಪುರಾಣದಲ್ಲಿ ಇದು ನಾಲ್ಕನೆಯದಾದ ಪಾತಾಳಖಂಡವು. ಈ ಖಂಡದಲ್ಲಿ ರಾಮಾಯಣದ ಅಂಶವೇ ವಿಶೇಷವಾಗಿ ನಿರೂಪಿತವಾಗಿದೆ. ರಾಮನು ತಾನು ಕೊಂದ ರಾವಣನೆಂಬುವನು ಬ್ರಾಹ್ಮಣನಾದುದರಿಂದ ಅದರಿಂದ ತನಗೆ ಬ್ರಹ್ಮಹತ್ಯೆ ಬಂದಿತೆಂದು ತಿಳಿದು ಅದಕ್ಕೋಸ್ಕರ ಅಶ್ವಮೇಧಯಾಗವನ್ನು ಮೊದಲು ಮಾಡಿ ಕುದುರೆಯನ್ನು ಬಿಡುವುದು, ಆ ಕುದುರೆಗೆ ಬಂದ ಅನೇಕ ತೊಂದರೆಗಳು, ಅವನ್ನು ನಾನಾ ಬಗೆಯಲ್ಲಿ ಪರಿಹರಿಸಿಕೊಳ್ಳುವುದು, ಇದೆಲ್ಲವೂ ಹೇಳಲ್ಪಟ್ಟಿವೆ. ರಾಜನಿಗೆ ಯುದ್ಧಮಾಡುವುದೇ ಪರಮಧರ್ಮವೆಂದೂ, ಅದರಿಂದಲೇ ತಾನು ಸಾಧಿಸಬೇಕಾದುದನ್ನು ಹೊಂದಬೇಕೆಂದೂ ವಿವರಿಸಲ್ಪಟ್ಟಿದೆ. ಆದರೆ ಈ ಖಂಡದಲ್ಲಿ ಭಕ್ತಿಯೋಗಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ರಾಮನಲ್ಲಿ ಭಕ್ತಿಯುಳ್ಳವರಿಗೆ ಎಲ್ಲವೂ ಸುಲಭಸಾಧ್ಯವೆಂದೂ ವಿವರಿಸಿದೆ. ಆದರೆ ಆಯಾ ವರ್ಣಗಳ ನಡತೆಗೆ ತಕ್ಕಂತೆ ಅವರವರು ಭಕ್ತಿಯನ್ನಿಡಬೇಕು. ಅದನ್ನು ಮರೆಯಬಾರದೆಂದು ಒತ್ತಿ ಒತ್ತಿ ಹೇಳಿದೆ. ಅನೇಕ ಜನ ಶೂರರಾದ ರಾಜರು ಇದ್ದರೂ ಅವರು ರಾಮನಿಗೆ ಅಧೀನರಲ್ಲದಿದ್ದು ರಾಮನನ್ನೇ ಧ್ಯಾನಿಸುತ್ತ ಅವನಿಗಿಂತ ಹೆಚ್ಚು ಶಕ್ತಿಯನ್ನು ಪಡೆದಿದ್ದರೆಂದೂ ಉದಾಹೃತವಾಗಿದೆ. ಅಂತಹ ಭಕ್ತರನ್ನು ರಾಮನು ಬಂದು ಕಾದಿರುವುದರಿಂದ ಆತನು ಭಕ್ತಾಧೀನನೆಂಬುದೂ, ಸರ್ವವ್ಯಾಪಿಯಾದ ಪರಮಾತ್ಮನೆಂಬುದೂ ವಿವರಿಸಲ್ಪಟ್ಟಿದೆ. ಇದರಿಂದ ರಾಮನು ಎಲ್ಲರಂತೆಯೂ ಕೇವಲ ಮನುಷ್ಯನಲ್ಲ. ಮನುಷ್ಯರಂತೆ ನಟಿಸುವ ದೇವದೇವನೆಂಬುದನ್ನು ಮನಗಾಣಿಸಿದೆ. ಮತ್ತು ಲೋಕದಲ್ಲಿ ಕೀರ್ತಿಗೋಸ್ಕರ ಹೆಂಡತಿಯನ್ನು ಬಿಟ್ಟನೆಂಬುದನ್ನು ತೋರಿಸಿ ಲೋಕದ ನಡತೆಯನ್ನು ತಿದ್ದಿರುವನು. ಆ ಸೀತೆಯೂ ಕೂಡ ಪತಿಭಕ್ತಿಯನ್ನು ಎಷ್ಟರಮಟ್ಟಿಗೆ ಎತ್ತಿ ಹಿಡಿದಿರುವಳೆಂಬುದು ವರ್ಣಿತವಾಗಿದೆ. ಲೋಕದಲ್ಲಿ ಕಟ್ಟುಗುಣಕ್ಕಿಂತ ಹುಟ್ಟುಗುಣವು ಸ್ಥಿರವಾದುದೆಂಬುವನ್ನು ಲವಕುಶರಿಂದ ತೋರ್ಪಡಿಸಲಾಗಿದೆ. ಕೊನೆಗೆ ಸೀತೆಯನ್ನು ತಾನು ಪರಿಗ್ರಹಿಸಿದ ವಿಚಾರದಲ್ಲಿ ಗಂಡಹೆಂಡರಿಗೆ ಭಿನ್ನಾಭಿಪ್ರಾಯವಿಲ್ಲವೆಂಬುದನ್ನು ಮನಗಾಣಬಹುದು. ಅಲ್ಲದೆ ರಾಮನೇ ಪ್ರಪಂಚದಲ್ಲಿ ದೊಡ್ಡ ದೈವವೆಂಬುದನ್ನು, ಶಿವನು ರಾಮಸ್ಮರಣೆಮಾಡುತ್ತಿರುವನೆಂಬುದರಿಂದ ತೋರಿಸಿದೆ. ಅಲ್ಲದೆ ಈ ರಾಮಾಯಣವು ಅನೇಕ ಯುಗಗಳಿಂದಲೂ ಬಂದಿರುವುದಲ್ಲದೆ ಈಗ ಮಾತ್ರವಲ್ಲವೆಂಬುದೂ ತಿಳಿದುಬರುತ್ತದೆ. ರಾಮನೂ ಸೀತೆಯೂ ಅಗಲಿದ ಮೇಲೆ ಮತ್ತೆ ಸೇರಿ ಬಹುಕಾಲವಿದ್ದು ಅನೇಕ ಯಜ್ಞಯಾಗಗಳನ್ನು ಮಾಡಿದರೆಂದು ಹೇಳಿರುವನು. ಇದನ್ನು ವಿಮರ್ಶಿಸಿದರೆ ರಾಮನು ಜನರ ನಡತೆಯನ್ನು ತಿದ್ದಲು ಅವತರಿಸಿದ ಸ್ವಾಮಿಯೆಂದೂ, ಸೀತೆಯು ಪತಿಭಕ್ತಿಯನ್ನು ತೋರ್ಪಡಿಸಲು ಅವತರಿಸಿದ ಲಕ್ಷ್ಮಿಯೆಂದೂ ತೋರದಿರಲಾರದು.

ಅವರಂತೆಯೇ ಕೃಷ್ಣಚರಿತೆಯನ್ನು ಮೊದಲುಮಾಡಿ ಗೋವುಗಳ ಮತ್ತು ಗೋಪಿಯರ ಪ್ರಭಾವವನ್ನು ವಿವರಿಸಿರುವನು. ಆ ಗೋಪಿಯರು ಕೃಷ್ಣನಲ್ಲಿ ಎಷ್ಟು ಭಕ್ತಿಯನ್ನಿಟ್ಟಿದ್ದರೆಂಬುದನ್ನು, ಭಕ್ತನಾದ ಅರ್ಜುನನನ್ನೂ ನಾರದನನ್ನೂ ಹೆಂಗಸನ್ನಾಗಿ ಮಾರ್ಪಡಿಸಿ ಅವರಿಗೆ ಅಲ್ಲಿನ ವಿಷಯಗಳನ್ನು ತೋರಿಸಿರುವುದರಿಂದ ತಿಳಿದು ಬರುವುದು. ಈ ಕೃಷ್ಣಚರಿತೆಯನ್ನು ಹೇಳುವಾಗ ಅನೇಕ ಪಾಪನಾಶಕ ಧರ್ಮಗಳನ್ನೂ ವ್ರತಗಳನ್ನೂ ಹೇಳಿರುವುದು ಮನೋಹರವಾಗಿದೆ.

ರಾಮನಿಗೆ ಪುರಾಣ ಕೇಳಬೇಕೆಂಬ ಇಚ್ಛೆಬಂದಾಗ ಶಂಭುವು ಬ್ರಾಹ್ಮಣನಾಗಿ ಬಂದು ಪುರಾಣವನ್ನೂ ಅದರ ಧರ್ಮಗಳನ್ನೂ ಹೇಳಿರುವನು. ಆಗ ಹಿಂದಿನ ಕಥೆಗಳೂ ಮುಂದಿನ ಕಥೆಗಳೂ ಎಲ್ಲವೂ ಬರುತ್ತಿರುವಂತೆ ರಾಮಚರಿತೆಯೂ ಬರಲು ರಾಮನಿಗೆ ಸಂದೇಹ ಬಂದಿತು. ಕಲ್ಪಭೇದದಿಂದ ಅವತಾರಭೇದವೆಂಬುದನ್ನೂ, ಹಿಂದಿನಂತೆಯೇ ಈಗಲೂ ನಡೆಯುತ್ತಿರುವುದೆಂಬುದನ್ನೂ, ಸ್ವಲ್ಪ ವಿಷಯಗಳಲ್ಲಿ ವ್ಯತ್ಯಾಸವುಂಟೆಂಬುದನ್ನು ನಿರೂಪಣೆಮಾಡಿರುತ್ತಾರೆ.

ಒಟ್ಟಿನಲ್ಲಿ ಈ ಖಂಡದಲ್ಲಿ ಭಕ್ತಿಯೋಗವೇ ಪ್ರಪಂಚದಲ್ಲಿ ಪ್ರಧಾನವೂ ಮುಖ್ಯವೂ ಸುಲಭವೂ ಆದುದು. ಅದರಿಂದ ಏನನ್ನು ಬೇಕಾದರೂ ಸಾಧಿಸಬಹುದು ಎಂಬುದನ್ನು ರಾಮಚರಿತ್ರೆಯಿಂದಲೂ ಕೃಷ್ಣಚರಿತ್ರೆಯಿಂದಲೂ ವಿಶದಮಾಡಿದ್ದಾನೆ.

**ಏವಂ ಕೃಷ್ಣೇ ಭಗವತಿ ಮಾಯಾಮನುಜ ಈಶ್ವರೇ ॥**
**ವೈರೇಣ ಪೂತಪಾಪ್ಮಾನಸ್ತಮಾಪುರನುಚಿಂತಯಾ ॥**
**ಕಾಮಾದ್ದ್ವೇಷಾದ್ಭಯಾತ್ ಸ್ನೇಹಾದ್ಯಥಾ ಭಕ್ತ್ಯೇಶ್ವರೇ ಮನಃ ॥**
**ಆವೇಶ್ಯ ತದಘಂ ಹಿತ್ವಾ ಬಹವಸ್ತದ್ಗತಿಂ ಗತಾಃ ॥**
**ಗೋಪ್ಯಃ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋನೃಪಾಃ ॥**
**ಸಂಬಂಧಾದ್ವೃಷ್ಣಯಸ್ಸ್ನೇಹಾದ್ಯೂಯಂ ಭಕ್ತ್ಯಾ ವಯಂ ನೃಪ ॥**
**ತಸ್ಮಾತ್ಕೇನಾಪ್ಯುಪಾಯೇನ ಮನಃ ಕೃಷ್ಣೇ ನಿವೇಶಯೇತ್ ॥**

ದಾನವರೆಲ್ಲರೂ ವಿಷ್ಣುವಿನಲ್ಲಿ ವೈರವನ್ನಿಟ್ಟಿದ್ದರೂ ಅವರು ಮೋಕ್ಷವನ್ನು ಹೊಂದಿದರು. ವಿಷ್ಣುವಿನಲ್ಲಿ ಕಾಮ, ದ್ವೇಷ, ಭಯ, ಸ್ನೇಹ, ಭಕ್ತಿ ಯಾವುದನ್ನು ಇಟ್ಟಿದ್ದರೂ ಅವನು ಮುಕ್ತಿಯನ್ನು ಹೊಂದುತ್ತಾನೆ ಎಂದು ಹೇಳಿ ಕಾಮದಿಂದ ಗೋಪಿಯರೂ, ಭಯದಿಂದ ಕಂಸನೂ, ದ್ವೇಷದಿಂದ ಶಿಶುಪಾಲನೂ, ಬಂಧುತ್ವದಿಂದ ಯಾದವರೂ, ಸ್ನೇಹದಿಂದ ಪಾಂಡವರೂ, ಭಕ್ತಿಯಿಂದ ನಮ್ಮಂತಹ ಋಷಿಗಳೂ ಆತನನ್ನೇ ಧ್ಯಾನಿಸುತ್ತಿದ್ದು ಮುಕ್ತಿಯನ್ನು ಹೊಂದಿದ ವಿಷಯವನ್ನು ಉದಾಹರಿಸಿರು

ವುದನ್ನು ನೋಡಿದರೆ ಯಾವರೀತಿಯಲ್ಲಾದರೂ ಆ ಸ್ವಾಮಿಯ ಸಾಕ್ಷಾತ್ಕಾರಣೆಯು ಮುಖ್ಯವೆಂದು ಉದಾಹರಣೆಯಿಂದ ದೃಢಮಾಡಿರುವನು. ಅಲ್ಲದೆ ಮತ್ತೊಂದು ವಿಷಯವನ್ನು ಇಲ್ಲಿ ಮರೆಯಲಾಗುವುದಿಲ್ಲ.

**ನಾಲಂ ದ್ವಿಜತ್ವಂ ದೇವತ್ವಮೃಷಿತ್ವಂ ವಾಸುರಾತ್ಮಜಾಃ ॥**
**ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥**
**ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ॥**
**ಪ್ರೀಯತೇಽ ಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಂ ॥**
**ತತೋ ಹರೌ ಭಗವತಿ ಭಕ್ತಿಂ ಕುರುತ ದಾನವಾಃ ॥**

ಹರಿಯನ್ನು ಸಂತೋಷಪಡಿಸಲು ಅನೇಕ ದಾರಿಗಳಿವೆ. ಅವುಗಳಲ್ಲಿ ಮುಖ್ಯ ವಾದುವು ಕೆಲವು. ದ್ವಿಜನು ಆಚಾರವನ್ನು ಬಿಡದೆ ಪಾಲಿಸುತ್ತ ಬಂದರೂ ಆ ಧರ್ಮಾನುಷ್ಠಾನದಿಂದ ಪ್ರೀತನಾಗಬಹುದು. ದೇವತೆಗಳು ಅವನ ಅನುಚರರಾಗಿ ಪ್ರೀತಿಯನ್ನು ಪಡೆಯಬಹುದು. ಋಷಿಗಳು ತಪಸ್ಸನ್ನು ಮಾಡಿ ವಿಷ್ಣುವಿನ ಸಾಕ್ಷಾತ್ಕಾರವನ್ನು ಹೊಂದಬಹುದು. ಒಳ್ಳೆ ಆಚಾರದಿಂದ ಸ್ವಾಮಿಯನ್ನು ತೃಪ್ತಿ ಪಡಿಸಬಹುದು. ಉತ್ತಮವಾದ ಜ್ಞಾನವನ್ನು ಹೊಂದಿ ದೇವರನ್ನು ಸಾಕ್ಷಾತ್ಕರಿಸಿ ಕೊಳ್ಳಬಹುದು. ದಾನ, ತಪಸ್ಸು, ಯಾಗ, ಶುಚಿತ್ವ, ವ್ರತಗಳು ಇವನ್ನು ಮಾಡಿ ಪರಮಪದವನ್ನು ಹೊಂದಬಹುದು. ಆದರೆ ಉತ್ತಮವಾದ ಭಕ್ತಿಯಿಂದ ವಿಷ್ಣುವು ಸಂತೋಷಪಡುವಂತೆ ಇವುಗಳೊಂದರಿಂದಲೂ ಸಂತೋಷಪಡಲಾರನು ಎಂದು ದಾನವ ಹೀಗೆಶುಕ್ರಾಚಾರ್ಯರು ಹೇಳಿರುವುದನ್ನು ನೋಡಿದರೆ, ಅದರಲ್ಲಿಯೂ ವೈರಿಗಳ ಬಾಯಲ್ಲಿ ಈ ಮಾತು ಬರಬೇಕಾದರೆ ಭಕ್ತಿಯೋಗದ ಪ್ರಾಶಸ್ತ್ಯವೆಷ್ಟರ ಅಂತಸ್ತಿನದು ಎಂಬುದು ತಿಳಿಯಬರುತ್ತದೆ. ಈ ರೀತಿಯಾಗಿ ಶ್ರೀರಾಮನಲ್ಲಿಯೂ ಶ್ರೀಕೃಷ್ಣನಲ್ಲಿಯೂ ಭಕ್ತಿ ಯನ್ನು ಈ ಖಂಡದಲ್ಲಿ ಪ್ರತಿಪಾದಿಸಿ, ಜನಗಳಿಗೆ ಮೇಲ್ಪಂಕ್ತಿ ಹಾಕಿರುವುದು ಉತ್ತಮ ವಾದ ವಿಚಾರವು.

ನ್ಯಾಯವಾಗಿ ಸಂಪಾದಿಸಿದ ವಸ್ತುವಿನಿಂದ ಮಾಡಿದುವೆಲ್ಲವೂ ಸಾರ್ಥಕವಾಗಿ ಅನಂತಫಲಗಳನ್ನು ಕೊಡುವುದೆಂದೂ ಅನ್ಯಾಯದಿಂದ ಸಂಪಾದಿಸಿದ ವಸ್ತುವಿನಿಂದ ಅದಕ್ಕೆ ಹೇಳಿರುವಷ್ಟು ಫಲವು ಬರುವುದಿಲ್ಲವೆಂದೂ ಉಪಷ್ಟಂಭಕವಾಗಿ ಹೇಳಿರುವುದು ಸ್ಪಷ್ಟವೂ ಒಪ್ಪಿತವೂ ಆಗಿದೆ.

ಈ ಖಂಡದಲ್ಲಿರುವ ವಿಷಯಗಳನ್ನು ವಿಮರ್ಶಿಸಿದರೆ ಇದರಿಂದ ತಿಳಿದುಬರುವ ವಿಷಯವೇನೆಂಬುದನ್ನು ದೂರದೃಷ್ಟಿಯಿಂದ, ಬಹು ಆಳದಿಂದ, ಕಂಡುಹಿಡಿಯಬೇಕಾ ಗಿರುವುದರಿಂದ ಇದಕ್ಕೆ ಪಾತಾಳಖಂಡವೆಂದು ಹೆಸರು ಬಂದಿರುವುದು ಯುಕ್ತ ವಾಗಿಯೇ ಇದೆ.

ಈ ರೀತಿಯಾಗಿ ಪುರಾಣಗಳನ್ನು ಬರೆಯಲು ಪ್ರೋತ್ಸಾಹ ಕೊಡುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಿಗೆ ಸಕಲ ಸೌಭಾಗ್ಯಗಳನ್ನು ಸರ್ವೇಶ್ವರನು ದಯಪಾಲಿಸಲೆಂದು ಒಂದೇ ಮನಸ್ಸಿನಿಂದ ಪ್ರಾರ್ಥಿಸುತ್ತೇನೆ.

ಪರಿವರ್ತಕ,

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ,**

ಸಾಹಿತ್ಯವಿದ್ವಾನ್

ಕನ್ನಡಪಂಡಿತ (ಮೈಸೂರು) ಕನ್ನಡವಿದ್ವಾನ್ (ಮದ್ರಾಸ್)

ಮೈಸೂರು,
ಜನವರಿ, 1945



**ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಮೊದಲನೆಯ ಭಾಗದ**

# ವಿಷಯಾನುಕ್ರಮಣಿಕೆ.



ಪುಟ ಸಂಖ್ಯೆ

॥ ಶ್ರೀಃ ॥

ಮಹಾಮುನಿ ಶ್ರೀವ್ಯಾಸಪ್ರಣೀತಂ

# ॥ ಪದ್ಮ ಮಹಾಪುರಾಣಂ ॥

---

## ಚತುರ್ಥಂ ಪಾತಾಳಖಂಡಂ

---

## ॥ ಪ್ರಥಮೋಽಧ್ಯಾಯಃ ॥

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೧ ॥**

**॥ ಋಷಯ ಊಚುಃ ॥**

**ಶ್ರುತಂ ಸರ್ವಂ ಮಹಾಭಾಗ ಸ್ವರ್ಗಖಂಡಂ ಮನೋಹರಂ ।**
**ತ್ವತ್ತೋಽಧುನಾ ವದಾಯುಷ್ಮನ್ ಶ್ರೀರಾಮಚರಿತಂ ಹಿ ನಃ ॥ ೨ ॥**

---

### ಮೊದಲನೆಯ ಅಧ್ಯಾಯವು

೧. ನಾರಾಯಣನನ್ನೂ, ನರನಾದ ಅರ್ಜುನನನ್ನೂ, ಸರಸ್ವತೀ ವ್ಯಾಸರನ್ನೂ ನಮಸ್ಕರಿಸಿ ಆ ಮೇಲೆ ಜಯಕಾರವನ್ನುಚ್ಚರಿಸಿ ಗ್ರಂಥಾರಂಭವನ್ನು ಮಾಡುವೆವು.

೨. ಋಷಿಗಳು ಹೇಳಿದರು :—ಮನೋಹರವಾದ ಸ್ವರ್ಗಖಂಡವನ್ನು ನೀನು ಹೇಳಿದುದನ್ನು ಕೇಳಿದೆವು. ಈಗ ಶ್ರೀ ರಾಮಚರಿತ್ರೆಯನ್ನು ಹೇಳು. ಎಂದು ಕೇಳಿದರು.

॥ ಸೂತ ಉವಾಚ ॥

**ಅಥೈಕದಾ ಧರಾಧಾರಂ ಪೃಷ್ಟವಾನ್ನೃಜಗೇಶ್ವರಂ ।**
**ವಾತ್ಸ್ಯಾಯನೋ ಮುನಿವರಃ ಕಥಾಮೇತಾಂ ಸುನಿರ್ಮಲಾಂ ॥ ೩ ॥**

॥ ಶ್ರೀವಾತ್ಸ್ಯಾಯನ ಉವಾಚ ॥

**ಶೇಷಾಶೇಷಕಥಾಸ್ತ್ವತ್ತೋ ಜಗತ್ಸರ್ಗಲಯಾದಿಕಾಃ ।**
**ಭೂಗೋಳಶ್ಚ ಖಗೋಳಶ್ಚ ಜ್ಯೋತಿಶ್ಚಕ್ರವಿನಿರ್ಣಯಃ ॥ ೪ ॥**

**ಮಹತ್ತತ್ತ್ವಾದಿಸೃಷ್ಟೀನಾಂ ಪೃಥಕ್ತತ್ತ್ವವಿನಿರ್ಣಯಃ ।**
**ನಾನಾರಾಜಚರಿತ್ರಾಣಿ ಕಥಿತಾನಿ ತ್ವಯಾನಘ ॥ ೫ ॥**

**ಸೂರ್ಯವಂಶಭವಾನಾಂ ಚ ರಾಜ್ಞಾಂ ಚಾರಿತ್ರಮದ್ಭುತಂ ।**
**ತತ್ರಾನೇಕಮಹಾಪಾಪಹರಾ ರಾಮಕಥಾ ಕೃತಾ ॥ ೬ ॥**

**ತಸ್ಯ ವೀರಸ್ಯ ರಾಮಸ್ಯ ಹಯಮೇಧಕಥಾ ಶ್ರುತಾ ।**
**ಸಂಕ್ಷೇಪತೋ ಮಯಾ ತ್ವತ್ತಸ್ತಾಮಿಚ್ಛಾಮಿ ಸವಿಸ್ತರಂ ॥ ೭ ॥**

---

೩. ಸೂತನು ಹೇಳಿದನು:—ಹಿಂದೆ ಒಂದುಸಾರಿ ವಾತ್ಸ್ಯಾಯನನು ಭೂಭಾರವನ್ನು ಹೊತ್ತಿರುವ ಶೇಷನನ್ನು ಈ ಕಥೆಯನ್ನು ಹೇಳೆಂದು ಕೇಳಿದನು. ಅದನ್ನೇ ಈಗ ನಿಮಗೆ ಹೇಳುವೆನು.

೪-೫. ವಾತ್ಸ್ಯಾಯನನು ಕೇಳಿದನು:—ಎಲೈ ಶೇಷನೇ, ಜಗತ್ತಿನ ಸಮೂಹಗಳ ನಿರ್ಣಯ, ಭೂಗೋಳ, ಖಗೋಳ, ಜ್ಯೋತಿಶ್ಚಕ್ರಗಳ ನಿರ್ಣಯ, ಮಹದಾದಿ ತತ್ತ್ವಗಳ ಸೃಷ್ಟಿ, ಪೃಥಕ್ತತ್ವಗಳ ನಿರ್ಣಯ, ನಾನಾ ರಾಜರ ಚರಿತ್ರೆಗಳು ಇವುಗಳೆಲ್ಲವನ್ನೂ ನಿನ್ನಿಂದ ಕೇಳಿದುದಾಯಿತು.

೬. ಸೂರ್ಯವಂಶದಲ್ಲಿ ಹುಟ್ಟಿದ ರಾಜರ ಚರಿತ್ರೆಯು ಅದ್ಭುತವಾದುದು. ಅದರಲ್ಲಿಯೂ ರಾಮನ ಕಥೆಯು ಅನೇಕ ಪಾಪಗಳನ್ನು ಪರಿಹರಿಸುವುದಾಗಿರುವುದು.

೭. ಆ ವೀರನಾದ ರಾಮನು ಅಶ್ವಮೇಧಯಾಗವನ್ನು ಮಾಡಿದ ಕಥೆಯನ್ನು ಕೇಳಿದ್ದೇನೆ. ಅದನ್ನು ಹಿಂದೆ ಸಂಕ್ಷೇಪವಾಗಿ ಹೇಳಿದೆ. ಈಗ ಅದನ್ನು ವಿಸ್ತಾರವಾಗಿ ಹೇಳು.

**ಯಾ ಶ್ರುತಾ ಸಂಸ್ಮೃತಾ ಚೋಕ್ತಾ ಮಹಾಪಾತಕಹಾರಿಣೀ ।**
**ಚಿಂತಿತಾರ್ಥಪ್ರದಾತ್ರೀಚ ಭಕ್ತಚಿತ್ತಪ್ರಸಾದಿಕಾ　　　　॥ ೮ ॥**

**॥ ಶೇಷ ಉವಾಚ ॥**

**ಧನ್ಯೋಽಸಿ ದ್ವಿಜವರ್ಯಸ್ತ್ವಂ ಯಸ್ಯ ತೇ ಮತಿರೀದೃಶೀ ।**
**ರಘುವೀರಪದದ್ವಂದ್ವಮಕರಂದಸ್ಪೃಹಾವತೀ　　　　॥ ೯ ॥**

**ವದಂತಿ ಮುನಯಸ್ಸರ್ವೇ ಸಾಧೂನಾಂ ಸಂಗಮಂ ವರಂ ।**
**ಯಸ್ಮಾತ್ಪಾಪಕ್ಷಯಕರೀ ರಘುನಾಥಕಥಾ ಭವೇತ್　　　　॥ ೧೦ ॥**

**ತ್ವಯಾ ಮೇಽನುಗ್ರಹಃ ಸೃಷ್ಟೋ ಯದ್ರಾಮಃ ಸ್ಮಾರಿತಃ ಪುನಃ ।**
**ಸುರಾಸುರಕಿರೀಟೌಘಮಣಿನೀರಾಜಿತಾಂಘ್ರಿಕಃ　　　　॥ ೧೧ ॥**

**ರಾವಣಾರಿಕಥಾವಾರ್ಧೌ ಮಶಕೋ ಮಾದೃಶಃ ಕಿಯಾನ್ ।**
**ಯತ್ರ ಬ್ರಹ್ಮಾದಯೋ ದೇವಾ ಮೋಹಿತಾ ನ ವಿದಂತ್ಯಪಿ　　　　॥ ೧೨ ॥**

---

೮. ನಾನು ಕೇಳಿದುದನ್ನು ಜ್ಞಾಪಿಸಿಕೊಳ್ಳುತ್ತೇನೆ. ಅದು ಪಾಪಹಾರಕವಾಗಿದೆ. ಚಿಂತಿತವಾದುದನ್ನು ಕೊಡುತ್ತದೆ. ಭಕ್ತರ ಚಿತ್ತವನ್ನು ಸಂತೋಷಪಡಿಸುತ್ತದೆ. ಆದುದರಿಂದ ಅದನ್ನು ವಿಸ್ತಾರವಾಗಿ ಹೇಳು ಎಂದನು.

೯. ಶೇಷನು ಹೇಳಿದನು :—ಅಯ್ಯಾ, ವಾತ್ಸ್ಯಾಯನನೇ, ನೀನೇ ಧನ್ಯನು. ಆದ್ದರಿಂದಲೇ ನಿನಗೆ ಈ ರೀತಿಯಾದ ರಾಮನ ಪದದ್ವಂದ್ವದಲ್ಲಿ ಆಸಕ್ತವಾದ ಮನಸ್ಸು ಹುಟ್ಟಿದೆ.

೧೦. ಸಾಧುಗಳ ಸಂಗಮವು ಉತ್ತಮವೆಂದು ಋಷಿಗಳು ಹೇಳಿದ್ದಾರೆ. ಆದ್ದರಿಂದಲೇ ಶ್ರೀರಾಮನ ಕಥೆಯು ಪಾಪನಾಶಕವು. ರಾಮನು ಸಾಧುಪುರುಷನು.

೧೧. ಅಯ್ಯಾ, ರಾಮನನ್ನು ಜ್ಞಾಪಿಸುವುದರಿಂದ ನೀನು ನನಗೆ ಅನುಗ್ರಹ ಮಾಡಿದಂತಾಯಿತು. ಅವನು ದೇವದಾನವರಿಂದ ನಮಸ್ಕೃತನಾದವನಲ್ಲವೇ ?

೧೨. ರಾವಣಾರಿಯ ಕಥೆಯಲ್ಲಿ ಬ್ರಹ್ಮಾದಿದೇವತೆಗಳೂ ಮೋಹಗೊಂಡು ಎಲ್ಲ ವಿಷಯವನ್ನೂ ತಿಳಿಸಲಸಮರ್ಥರಾಗಿರುವರು. ಹೀಗಿರುವಾಗ ಸೊಳ್ಳೆಯಂತೆ ಅತ್ಯಲ್ಪನಾದ ನಾನು ಎಷ್ಟರವನು ?

ತಥಾಪಿ ಚ ಮಯಾ ತುಭ್ಯಂ ವಕ್ತವ್ಯಂ ಸ್ವೀಯಶಕ್ತಿತಃ ।
ಪಕ್ಷಿಣಃ ಸ್ವಗತಿಪ್ರಾಯಂ ಖೇ ಗಚ್ಛಂತಿ ಸುವಿಸ್ತರೇ ॥ ೧೩ ॥

ಚರಿತಂ ರಘುನಾಥಸ್ಯ ಶತಕೋಟಿಸುವಿಸ್ತರಂ ।
ಯೇಷಾಂ ವೈ ಯಾದೃಶೀ ಬುದ್ಧಿಸ್ತೇ ವದ್ಯಂತ್ಯೇವ ತಾದೃಶಂ ॥ ೧೪ ॥

ರಘುನಾಥಸತೀ ಕೀರ್ತಿರ್ಮದ್ಬುದ್ಧಿಂ ನಿರ್ಮಲೀಮಸಾಂ ।
ಕರಿಷ್ಯತ್ಯಗ್ನಿಸಂಪರ್ಕಾತ್ಕಸಕಂ ತ್ವಮಲಂ ಯಥಾ ॥ ೧೫ ॥

॥ ಸೂತ ಉವಾಚ ॥

ಏವಮುಕ್ತ್ವಾ ಮುನಿವರಂ ಧ್ಯಾನಸ್ತಿಮಿತಲೋಚನಃ ।
ಜ್ಞಾನೇನಾಲೋಕಯಾಂ ಚಕ್ರೇ ಕಥಾಂ ಲೋಕೋತ್ತರಾಂ ಶುಭಾಂ ॥ ೧೬ ॥

ಗದ್ಗದಸ್ವರಸಂಯುಕ್ತೋ ಮಹಾಹರ್ಷಾಂಕಿತಾಂಗಕಃ ।
ಕಥಯಾಮಾಸ ವಿಶದಾಂ ಕಥಾಂ ದಾಶರಥೇಃ ಪುನಃ ॥ ೧೭ ॥

---

೧೩. ಆದಾಗ್ಯೂ ಪಕ್ಷಿಗಳು ವಿಸ್ತಾರವಾದ ಆಕಾಶದಲ್ಲಿ ತಮ್ಮ ಯೋಗ್ಯತೆಗೆ ತಕ್ಕಂತೆ ಓಡಾಡುವಂತೆ, ನಾನು ನನ್ನ ಶಕ್ತಿಯಿದ್ದಂತೆ ಹೇಳುತ್ತೇನೆ.

೧೪. ರಘುನಾಥನ ಚರಿತ್ರೆಯು ನೂರುಕೋಟಿ ಗ್ರಂಥದಷ್ಟು ವಿಸ್ತಾರವುಳ್ಳದ್ದು. ಯಾರಿಗೆ ಎಷ್ಟರಮಟ್ಟಿನ ಬುದ್ಧಿಯಿದೆಯೋ ಅವರು ಅಷ್ಟನ್ನೇ ಹೇಳುತ್ತಾರೆ.

೧೫. ಚಿನ್ನವು ಅಗ್ನಿಸಂಪರ್ಕದಿಂದ ನಿರ್ಮಲವಾಗುವಂತೆ ಸೀತೆಯ ವೃತ್ತಾಂತವು ನನ್ನ ಬುದ್ಧಿಯನ್ನು ನಿರ್ಮಲವನ್ನಾಗಿ ಮಾಡುತ್ತದೆ.

೧೬-೧೭. ಸೂತನು ಮತ್ತೆ ಹೇಳಿದನು:—ಈ ರೀತಿ ಹೇಳಿ ಧ್ಯಾನದಿಂದ ಉಂಟಾದ ಜ್ಞಾನದಿಂದ ಆ ಉತ್ತಮವಾದ ಕಥೆಯನ್ನೆಲ್ಲಾ ಜ್ಞಾಪಿಸಿಕೊಂಡು, ಹರ್ಷದಿಂದ ರೋಮಾಂಚವುಳ್ಳವನಾಗಿ ಗದ್ಗದಸ್ವರದಿಂದ ದಾಶರಥಿಯ ಕಥೆಯನ್ನು ಹೇಳಲು ಪ್ರಾರಂಭಿಸಿದನು.

॥ ಶೇಷ ಉವಾಚ ॥

ಲಂಕೇಶ್ವರೇ ವಿನಿಹತೇ ದೇವದಾನವದುಃಖದೇ ।
ಅಪ್ಸರೋಗಣವಕ್ತ್ರಾಬ್ಜಚಂದ್ರಮಃಕಾಂತಿಹರ್ತರಿ ॥ ೧೮ ॥

ಸುರಾಸ್ಸರ್ವೇ ಸುಖಂ ಪ್ರಾಪುರಿಂದ್ರಪ್ರಭೃತಯಸ್ತದಾ ।
ಸುಖಂ ಪ್ರಾಪ್ತಾಸ್ತುತಿಂ ಚಕ್ರುರ್ದಾಸವತ್ಪ್ರಣತಿಂ ಗತಾಃ ॥ ೧೯ ॥

ಲಂಕಾಯಾಂ ಚ ಪ್ರತಿಷ್ಠಾಪ್ಯ ಧರ್ಮಯುಕ್ತಂ ವಿಭೀಷಣಂ ।
ಸೀತಯಾ ಸಹಿತೋ ರಾಮಃ ಪುಷ್ಪಕಂ ಸಮುಪಾಶ್ರಿತಃ ॥ ೨೦ ॥

ಸುಗ್ರೀವಹನುಮತ್ಸೀತಾಲಕ್ಷ್ಮಣೈಸ್ಸಂಯುತಸ್ತದಾ ।
ವಿಭೀಷಣೋಽಪಿ ಸಚಿವೈರನ್ವಗಾದ್ವಿರಹೋತ್ಸುಕಃ ॥ ೨೧ ॥

ಲಂಕಾಂ ಸ ಪಶ್ಯನ್ಬಹುಧಾ ಭಗ್ನಪ್ರಾಕಾರತೋರಣಾಂ ।
ದೃಷ್ಟ್ವಾಽಶೋಕವನಂ ತತ್ರ ಸೀತಾಸ್ಥಾನಂ ಮುಮೂರ್ಛ ಹಂ ॥ ೨೨ ॥

---

೧೮-೧೯. ಶೇಷನು ಹೇಳಿದನು:—ಅಪ್ಸರಸ್ತ್ರೀಯರ ಮುಖಕಾಂತಿಯನ್ನು ತಿರಸ್ಕರಿಸುವ, ದೇವದಾನವರಿಗೆ ದುಃಖವನ್ನುಂಟುಮಾಡುವ ಲಂಕೇಶ್ವರನು ಕೊಲ್ಲಲ್ಪಡಲಾಗಿ, ಇಂದ್ರಾದಿಗಳಾದ ಎಲ್ಲರೂ ಸುಖವನ್ನು ಹೊಂದಿ ಆ ರಾಮನನ್ನು ದಾಸರಂತೆ ನಮಸ್ಕರಿಸಿ ಸ್ತೋತ್ರಮಾಡಿದರು.

೨೦. ರಾಮನು ರಾವಣನನ್ನು ಸಂಹರಿಸಿದ ಮೇಲೆ ಲಂಕೆಯಲ್ಲಿ ಧರ್ಮಿಷ್ಠನಾದ ವಿಭೀಷಣನನ್ನು ಅಭಿಷೇಕಮಾಡಿ ಸೀತೆಯೊಡನೆ ಪುಷ್ಪಕವಿಮಾನವನ್ನು ಹತ್ತಿ,

೨೧. ಸುಗ್ರೀವ, ಹನುಮಂತ, ಸೀತಾಲಕ್ಷ್ಮಣರೊಂದಿಗೆ ಹೊರಟನು. ವಿಭೀಷಣನೂ ಕೂಡ ಆ ರಾಮನನ್ನು ಬಿಡಲಾರದೆ ಅನುಸರಿಸಿ ಹೊರಟನು.

೨೨. ಕೆಡವಲ್ಪಟ್ಟ ಕೋಟೆ, ಧ್ವಂಸಮಾಡಲ್ಪಟ್ಟ ಅಶೋಕವನ, ಅಲ್ಲಿ ಸೀತೆಯಿದ್ದ ಸ್ಥಳ, ಇವೆಲ್ಲವನ್ನೂ ನೋಡಿ ದುಃಖದಿಂದ ಮೂರ್ಛಿತನಾದನು.

ಶಿಂಶಿಪಾಂ ತತ್ರ ವೃಕ್ಷಾಂಶ್ಚ ಪುಷ್ಪಿತಾನ್ ಕೋರಕೈರ್ಯುತಾನ್ ।
ರಾಕ್ಷಸೀಭಿಸ್ಸಮಾಕೀರ್ಣಾನ್ ಮೃತಾಭಿರ್ಹನುಮದ್ಭಯಾತ್ ॥ ೨೩ ॥

ಇತ್ಥಂ ಸರ್ವಂ ವಿಲೋಕ್ಯಾಶು ರಾಮಃ ಪ್ರಾಯಾತ್ಪುರೀಂ ಪ್ರತಿ ।
ಬ್ರಹ್ಮಾದಿದೇವೈಸ್ಸಹಿತಃ ಸ್ವೀಯಸ್ವೀಯವಿಮಾನಗೈಃ ॥ ೨೪ ॥

ದೇವದುಂದುಭಿನಿರ್ಘೋಷಾನ್ ಶೃಣ್ವನ್ ಶ್ರೋತ್ರಸುಖಾವಹಾನ್ ।
ತಥೈವಾಪ್ಸರಸಾಂ ನೃತ್ಯೈಃ ಪೂಜ್ಯಮಾನೋ ರಘೂತ್ತಮಃ ॥ ೨೫ ॥

ಸೀತಾಯೈ ದರ್ಶಯನ್ ಮಾರ್ಗೇ ತೀರ್ಥಾನ್ಯಾಶ್ರಮವಂತಿ ಚ ।
ಮುನೀಂಶ್ಚ ಮುನಿಪುತ್ರಾಂಶ್ಚ ಮುನಿಪತ್ನೀಃ ಪತಿವ್ರತಾಃ ॥ ೨೬ ॥

ಯತ್ರ ಯತ್ರ ಕೃತಾವಾಸಾಃ ಪೂರ್ವಂ ರಾಮೇಣ ಧೀಮತಾ ।
ತತ್ಸರ್ವಂ ದರ್ಶಯಾಮಾಸ ಲಕ್ಷ್ಮಣೇನ ಸಮನ್ವಿತಃ ॥ ೨೭ ॥

ಇತ್ಯೇವಂ ದರ್ಶಯಂಸ್ತಸ್ಯೈ ರಾಮೋಽದ್ರಾಕ್ಷೀತ್ ಸ್ವಕಾಂ ಪುರೀಂ ।
ತಸ್ಯಾಃ ಪುನಸ್ಸಮೀಪೇ ತು ನಂದಿಗ್ರಾಮಂ ದದರ್ಶ ಹ ॥ ೨೮ ॥

---

೨೩. ಹಾಗೆಯೇ ಹೂ ಮೊಗ್ಗುಗಳನ್ನು ಬಿಟ್ಟಿರುವ ಶಿಂಶುಪಾವೃಕ್ಷಗಳನ್ನೂ ಅಲ್ಲಿ ಹನುಮಂತನ ಭಯದಿಂದಲೇ ಸತ್ತು ಬಿದ್ದಿರುವ ರಾಕ್ಷಸಿಯರನ್ನು ನೋಡಿದನು

೨೪. ಈ ರೀತಿ ಆ ಲಂಕೆಯನ್ನು ನೋಡುತ್ತ ತಮ್ಮ ತಮ್ಮ ವಿಮಾನದಲ್ಲಿ ಅನುಸರಿಸುತ್ತಿರುವ ಬ್ರಹ್ಮಾದಿ ದೇವತೆಗಳೊಂದಿಗೆ ರಾಮನು ತನ್ನ ಊರನ್ನು ಕುರಿತು ಹೊರಟನು.

೨೫-೨೬. ದೇವದುಂದುಭಿಯ ಧ್ವನಿಗಳಿಂದಲೂ, ಅಪ್ಸರಸ್ತ್ರೀಯರ ನೃತ್ಯದಿಂದಲೂ ಸಂತೋಷಪಡುತ್ತ ಹೊರಟು, ದಾರಿಯಲ್ಲಿ ಆಶ್ರಮದ ತೀರ್ಥಗಳನ್ನೂ, ಮುನಿಗಳನ್ನೂ, ಮುನಿಪುತ್ರರನ್ನೂ, ಪತಿವ್ರತೆಯರಾದ ಮುನಿಪತ್ನಿಯರನ್ನೂ ಸೀತೆಗೆ ತೋರಿಸುತ್ತ ರಾಮನು ಹೊರಟನು.

೨೭-೨೮. ತಾನು ಹಿಂದೆ ಎಲ್ಲಿ ಎಲ್ಲಿ ಇದ್ದನೋ ಅದೆಲ್ಲವನ್ನೂ ಲಕ್ಷ್ಮಣನೊಡನೆ ಸೀತೆಗೆ ತೋರಿಸುತ್ತ ತನ್ನ ರಾಜಧಾನಿಯಾದ ಅಯೋಧ್ಯೆಯನ್ನೂ, ಅದರ ಸಮೀಪದಲ್ಲಿ ನಂದಿ ಗ್ರಾಮವನ್ನೂ ನೋಡಿದನು.

ಯತ್ರ ವೈ ಭರತೋ ರಾಜಾ ಪಾಲಯನ್ಧರ್ಮಮಾಸ್ಥಿತಃ ।
ಭ್ರಾತುರ್ವಿಯೋಗಜನಿತಂ ದುಃಖಚಿಹ್ನಂ ವಹಸ್ಸದಾ ॥ ೨೯ ॥

ಗರ್ತಶಾಯೀ ಬ್ರಹ್ಮಚಾರೀ ಜಟಾವಲ್ಕಲಸಂಯುತಃ ।
ಕೃಶಾಂಗಯಷ್ಟಿರ್ದುಃಖಾರ್ತಃ ಕುರ್ವನ್ರಾಮಕಥಾಂ ಮುಹುಃ ॥ ೩೦ ॥

ಯವಾನ್ನಮಪಿ ನೋ ಭುಂಕ್ತೇ ಜಲಂ ಪಿಬತಿ ನೋ ಮುಹುಃ ।
ಉದ್ಯಂತಂ ಯಃ ಸವಿತಾರಂ ನಮಸ್ಕೃತ್ಯ ಬ್ರವೀತಿ ಚ ॥ ೩೧ ॥

ಜಗನ್ನೇತ್ರ ಸುರಸ್ವಾಮಿನ್ ಹರ ಮೇ ದುಷ್ಕೃತಂ ಮಹತ್ ।
ಮದರ್ಥೇ ರಾಮಚಂದ್ರೋಽಪಿ ಜಗತ್ಪೂಜ್ಯೋ ವನಂ ಯಯೌ ॥ ೩೨ ॥

ಸೀತಯಾ ಸುಕುಮಾರಾಂಗ್ಯಾ ಸೇವ್ಯಮಾನೋಽಟವೀಂ ಗತಃ ।
ಯಾ ಸೀತಾ ಪುಷ್ಪಪರ್ಯಂಕೇ ವೃಂತಮಾಸಾದ್ಯ ದುಃಖಿತಾ ॥ ೩೩ ॥

ಯಾ ಸೀತಾ ರವಿಸಂತಾಪಂ ಕದಾಪಿ ಪ್ರಾಪ ನೋ ಸತೀ ।
ಮದರ್ಥೇ ಜಾನಕೀ ಸಾ ಚ ಪ್ರತ್ಯರಣ್ಯಂ ಭ್ರಮತ್ಯಹೋ ॥ ೩೪ ॥

---

೨೯-೩೦. ಅಲ್ಲಿ ಭರತನು ಅಣ್ಣನಾದ ರಾಮನ ವಿರಹದಿಂದ ಶೋಕಾಕುಲನಾಗಿ ಧರ್ಮದಿಂದ ಪ್ರಜಾಪಾಲನಮಾಡುತ್ತಿದ್ದನು. ರಾಜ್ಯಭಾರಮಾಡುತ್ತಿದ್ದರೂ ಸುಖವನ್ನು ಅನುಭವಿಸುತ್ತಿರಲಿಲ್ಲ. ಹಳ್ಳತಿಟ್ಟುಗಳುಳ್ಳ ನೆಲದ ಮೇಲೆಯೇ ಮಲಗುವನು. ಬ್ರಹ್ಮಚಾರಿಯಾಗಿ ಜಟೆ ನಾರುಮುಡಿಗಳನ್ನು ಧರಿಸಿ ಬಡವಾಗಿ ದುಃಖದಿಂದ ಕೂಡಿ, ರಾಮಧ್ಯಾನವನ್ನೇ ಸದಾ ಮಾಡುತ್ತಿರುವನು.

೩೧-೩೪. ಬತ್ತದ ಅಕ್ಕಿಯ ಅನ್ನವನ್ನು ಊಟಮಾಡುತ್ತಿರಲಿಲ್ಲ. ನೀರನ್ನು ಕೂಡ ಅತ್ಯಲ್ಪವಾಗಿ ಕುಡಿಯುವನು. ಉದಯಿಸುತ್ತಿರುವ ಸೂರ್ಯನನ್ನು ಕುರಿತು ಓ ಜಗನ್ನೇತ್ರನೇ, ದೇವದೇವನೇ, ನನ್ನ ಪಾಪವು ಬಹು ಹೆಚ್ಚಾದುದು. ಅದನ್ನು ನಾಶಮಾಡು. ನನಗೋಸ್ಕರ ಜಗತ್ಪೂಜ್ಯನಾದ ರಾಮಚಂದ್ರನು ಸೀತೆಯಿಂದ ಸೇವಿತನಾಗಿ ಕಾಡಿಗೆ ಹೋದನು. ಯಾವ ಸೀತೆಯು ಹೂವಿನ ಹಾಸಿಗೆಯಲ್ಲಿ ಹೂ ತೊಟ್ಟು ಸಿಕ್ಕಿದರೆ ದುಃಖಿಸುತ್ತಿದ್ದಳೋ, ಯಾವಳು ಸೂರ್ಯನ ತಾಪವನ್ನು ಯಾವಾಗಲೂ ಅನುಭವಿಸಿರಲಿಲ್ಲವೋ, ಆಕೆಯು ನನಗೋಸ್ಕರ ಪ್ರತಿಯೊಂದು ಕಾಡಿನಲ್ಲೂ ಕಷ್ಟದಿಂದ ಸುತ್ತುತ್ತಿದ್ದಾಳೆ.

ಯಾ ಸೀತಾ ರಾಜಪುತ್ರೈಶ್ಚ ನ ದೃಷ್ಟಾ ನಯನೈಃ ಕದಾ ।
ಸಾ ಸೀತಾ ದೃಶ್ಯತೇ ನೂನಂ ಕಿರಾತೈಃ ಕಾಲರೂಪಿಭಿಃ ॥ ೩೫ ॥

ಯಾ ಸೀತಾ ಮಧುರಂ ತ್ವನ್ನಂ ಭೋಜಿತಾ ನ ಬುಭುಕ್ಷತಿ ।
ಸಾ ಸೀತಾದ್ಯ ವನಸ್ಥಾನಿ ಫಲಾನಿ ಪ್ರಾರ್ಥಯತ್ಯಹೋ ॥ ೩೬ ॥

ಇತ್ಯೇವಮನ್ವಹಂ ಸೂರ್ಯಮುಪಸ್ಥಾಯ ವದತ್ಯದಃ ।
ಪ್ರಾತಃ ಪ್ರಾತರ್ಮಹಾರಾಜೋ ಭರತೋ ರಾಮವತ್ಸಲಃ ॥ ೩೭ ॥

ಯಶ್ಚೋಚ್ಯಮಾನಃ ಸಚಿವೈಃ ಸಮದುಃಖಸುಖೈರ್ಬುಧೈಃ ।
ನೀತಿಜ್ಞೈಃ ಶಾಸ್ತ್ರನಿಪುಣೈರಿತಿ ಪ್ರೋವಾಚ ತಾನ್ನೃಪಃ ॥ ೩೮ ॥

ಅಮಾತ್ಯಾ ದುರ್ಭಗಂ ಮಾಂ ಕಿಂ ಪ್ರಬೂತ ಪುರುಷಾಧಮಂ ।
ಯದರ್ಥಮಗ್ರಜೋ ರಾಮೋ ವನಂ ಪ್ರಾಪ್ಯಾವಸೀದತಿ ॥ ೩೯ ॥

---

೩೫. ಯಾವ ಸೀತೆಯನ್ನು ರಾಜರುಗಳೂ ಕೂಡ ಒಮ್ಮೆಯಾದರೂ ನೋಡುತ್ತಿರಲಿಲ್ಲವೋ, ಆ ಸೀತೆಯು ಕಾಲರೂಪಿಗಳಾದ ಕಿರಾತಕರಿಂದ ನೋಡಲ್ಪಡುತ್ತಿದ್ದಾಳೆ.

೩೬. ಯಾವ ಸೀತೆಯು ರುಚಿಯಾದ ಅನ್ನವನ್ನು ಊಟಮಾಡಿ ಹಸಿವನ್ನೇ ಕಂಡರಿಯಳೋ ಅಂತಹ ಸೀತೆಯು ಈಗ ಹಸಿವು ತಡೆಯಲಾರದೆ ಕಾಡಿನಲ್ಲಿರುವ ಫಲಮೂಲಾದಿಗಳು ಸಿಕ್ಕಿದರೆ ಸಾಕೆಂದು ಹಂಬಲಿಸುವಳು. ಅಯ್ಯೋ ಏನು ದುಃಖಬಂತಪ್ಪಾ!

೩೭. ಈ ರೀತಿ ಬೆಳಗ್ಗೆ, ಸೂರ್ಯೋಪಸ್ಥಾನದಲ್ಲಿ ರಾಮನಲ್ಲಿ ಪ್ರೀತಿಯುಳ್ಳ ಭರತನು ನಿತ್ಯವೂ ಹೇಳುತ್ತಿರುವನು.

೩೮. ಸುಖದುಃಖಗಳನ್ನು ಸಮವೆಂದು ತಿಳಿದಿರುವ ಮತ್ತು ನೀತಿಯನ್ನೂ, ಶಾಸ್ತ್ರವನ್ನೂ ಬಲ್ಲ ಮಂತ್ರಿಗಳು ಏನನ್ನಾದರೂ ಸಮಾಧಾನ ಹೇಳಿದರೆ ಅವರಿಗೆ ಹೀಗೆ ಹೇಳುವನು.

೩೯. ಎಲೈ ಅಮಾತ್ಯರೇ, ನನ್ನ ಸಲುವಾಗಿಯೇ ಅಣ್ಣನಾದ ರಾಮನು ಕಾಡಿಗೆ ಹೋಗಿ ದುಃಖಿಸುತ್ತಿರುವನು. ಅಂತಹ ಪುರುಷಾಧಮನಾದ ನನಗೆ ಏಕೆ ಸಮಾಧಾನ ಹೇಳುತ್ತೀರಿ?

ದುರ್ಭಗಸ್ಯ ಮಮ ಪ್ರಾಪ್ತಂ ಸ್ವಾಘಮಾರ್ಜನಮಾದರಾತ್ ।
ಕರೋಮಿ ರಾಮಚಂದ್ರಾಂಘ್ರಿಂ ಸ್ಮಾರಂ ಸ್ಮಾರಂ ಸುಮಂತ್ರಿಣಃ ॥ ೪೦ ॥

ಧನ್ಯಾ ಸುಮಿತ್ರಾ ಸುತರಾಂ ವೀರಸೂಃ ಸ್ವಪತಿಪ್ರಿಯಾ ।
ಯಸ್ಯಾಸ್ತನೂಜೋ ರಾಮಸ್ಯ ಚರಣೌ ಸೇವತೇಽನ್ವಹಂ ॥ ೪೧ ॥

ಯತ್ರ ಗ್ರಾಮೇ ಸ್ಥಿತೋ ನೂನಂ ಭರತೋ ಭ್ರಾತೃವತ್ಸಲಃ ।
ವಿಲಾಪಂ ಪ್ರಕರೋತ್ಯುಚ್ಚೈಸ್ತಂ ಗ್ರಾಮಂ ಸ ದದರ್ಶ ಹ ॥ ೪೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಘುನಾಥಸ್ಯ ಭರತಾಧಿಷ್ಠಿತನಂದಿಗ್ರಾಮದರ್ಶನಂ ನಾಮ ಪ್ರಥಮೋಽಧ್ಯಾಯಃ



---

೪೦. ಆದ್ದರಿಂದ ಅಯೋಗ್ಯನಾದ ನನಗೆ ಬಂದಿರುವ ಪಾಪವನ್ನು ನಾಶ ಮಾಡಿಕೊಳ್ಳಲು ವಿಶ್ವಾಸದಿಂದ ರಾಮಚಂದ್ರಾಂಘ್ರಿಯನ್ನು ಯಾವಾಗಲೂ ಸ್ಮರಿಸುತ್ತಾ ಇರುತ್ತೇನೆ.

೪೧. ಲಕ್ಷ್ಮಣನನ್ನು ಹೆತ್ತ ಸುಮಿತ್ರೆಯು ಧನ್ಯಳು. ವೀರಮಾತೆಯು, ಪತಿಪ್ರಿಯೆಯು. ಏಕೆಂದರೆ, ಆಕೆಯ ಮಗನು ಯಾವಾಗಲೂ ರಾಮಚಂದ್ರನ ಚರಣಗಳನ್ನು ಸೇವಿಸುತ್ತಾನೆ.

೪೨. ಹೀಗೆಂದು ಭ್ರಾತೃವತ್ಸಲನಾದ ಭರತನು ಯಾವ ಗ್ರಾಮದಲ್ಲಿದ್ದು ಬಹುವಾಗಿ ದುಃಖಪಡುತ್ತಿದ್ದನೋ ಅಂತಹ ನಂದಿಗ್ರಾಮವನ್ನು ರಾಮನು ನೋಡಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ. ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವಿತಿಯೋಽಧ್ಯಾಯಃ

---

॥ ಶೇಷ ಉವಾಚ ॥

ಅಥ ತದ್ದರ್ಶನೋತ್ಕಂಠಾವಿಹ್ವಲೀಕೃತಚೇತಸಾ ।
ಪುನಃ ಪುನಃ ಸ್ಮೃತೋ ಭ್ರಾತಾ ಭರತೋ ಧಾರ್ಮಿಕಾಗ್ರಣೀಃ ॥ ೧ ॥

ಉವಾಚ ಹನುಮಂತಂ ಚ ಬಲವಂತಂ ಸಮೀರಜಂ ।
ಪ್ರಸ್ಫುರದ್ದಶನವ್ಯಾಜಚಂದ್ರಕಾಂತಿಹತಾಂಧಕಃ ॥ ೨ ॥

ಶೃಣು ವೀರ ಹನೂಮಂಸ್ತ್ವಂ ಮದ್ಗಿರಂ ಭ್ರಾತೃನೋದಿತಾಂ ।
ಚಿರಂತನವಿಯೋಗೇನ ಗದ್ಗದೀಕೃತವಿಗ್ರಹಂ ॥ ೩ ॥

ಗಚ್ಛ ತ್ವಂ ಭ್ರಾತರಂ ವೀರ ಸಮೀರಣತನೂದ್ಭವ ।
ಮದ್ವಿಯೋಗಕೃಶಾಂ ಯಷ್ಟಿಂ ವಪುಷೋ ಬಿಭ್ರತಂ ಬಲಾತ್ ॥ ೪ ॥

---

## ಎರಡನೆಯ ಅಧ್ಯಾಯವು

೧. ಶೇಷನು ಹೇಳಿದನು:—ಆಮೇಲೆ ಆ ನಂದಿಗ್ರಾಮವನ್ನು ನೋಡಿದುದರಿಂದ ವ್ಯಥೆಗೊಂಡು ರಾಮನು ಧಾರ್ಮಿಕನಾದ ಭರತನನ್ನು ಪದೇ ಪದೇ ಸ್ಮರಿಸಿಕೊಂಡನು.

೨. ಶುದ್ಧವಾದ ದಂತಪಂಕ್ತಿಯಿಂದ ಮನೋಹರವಾದ ಮಂದಹಾಸವನ್ನು ಸೂಸುತ್ತಾ ರಾಮನು ಹನುಮಂತನನ್ನು ಕುರಿತು,

೩-೪. ಎಲೈ ಹನುಮಂತನೇ, ಭರತನು ಬಹುಕಾಲದಿಂದಲೂ ನನ್ನ ವಿಯೋಗದಿಂದ ದುಃಖಿತನಾಗಿ ಕೃಶವಾಗಿರುವನು.

ಯೋ ವಲ್ಕಲಂ ಪರಿಧತ್ತೇ ಜಟಾಂ ಧತ್ತೇ ಶಿರೋರುಹೇ ।
ಫಲಾನಾಂ ಭಕ್ಷಣಮಪಿ ನ ಕುರ್ಯಾದ್ವಿರಹಾತ್ತತಃ ॥ ೫ ॥

ಪರಸ್ತ್ರೀ ಯಸ್ಯ ಮಾತೇವ ಲೋಷ್ಟವತ್ಕಾಂಚನಂ ಪುನಃ ।
ಪ್ರಜಾಃ ಪುತ್ರಾನಿವೇಕ್ಷೇದ್ಯೋ ಬಾಂಧವೋ ಮಮ ಧರ್ಮವಿತ್ ॥ ೬ ॥

ಮದ್ವಿಯೋಗಜದುಃಖಾಗ್ನಿಜ್ವಾಲಾದಗ್ಧಕಳೇಬರಂ ।
ಮದಾಗಮನಸಂದೇಶಪಯೋವೃಷ್ಟ್ಯಾಶು ಸಿಂಚ ತಂ ॥ ೭ ॥

ಸೀತಯಾ ಸಹಿತಂ ರಾಮಂ ಲಕ್ಷ್ಮಣೇನ ಸಮನ್ವಿತಂ ।
ಸುಗ್ರೀವಾದಿಕಪೀಂದ್ರೈಶ್ಚ ರಕ್ಷೋಭಿಸ್ಸವಿಭೀಷಣೈಃ ॥ ೮ ॥

ಪ್ರಾಪ್ತಂ ನಿವೇದಯ ಸುಖಾತ್ಪುಷ್ಪಕಾಸನಸಂಸ್ಥಿತಂ ।
ಯೇನ ಮೇ ಸೋಽನುಜಶ್ಶೀಘ್ರಂ ಸುಖಮೇತಿ ಮದಾಗಮಾತ್ ॥ ೯ ॥

ಇತಿ ಶ್ರುತ್ವಾ ತತೋ ವಾಕ್ಯಂ ರಘುವೀರಸ್ಯ ಧೀಮತಃ ।
ಜಗಾಮ ಭರತಾವಾಸಂ ನಂದಿಗ್ರಾಮಂ ನಿದೇಶಕೃತ್ ॥ ೧೦ ॥

---

೫. ನನ್ನ ವಿಯೋಗದುಃಖದಿಂದಲೇ ಅವನು ನಾರುಬಟ್ಟೆಯನ್ನುಟ್ಟು ತಲೆಯಲ್ಲಿ ಜಟೆಯನ್ನು ಬೆಳೆಸಿ, ಫಲಗಳನ್ನು ಸಹ ತಿನ್ನದೆ ಕಾಲಹರಣಮಾಡುತ್ತಿರುವನು.

೬-೭. ಪರರ ಹೆಂಡತಿಯನ್ನು ತಾಯಿಯಂತೆಯೂ, ಪರಸ್ವತ್ತನ್ನು ಮಣ್ಣಿನಂತೆಯೂ ಕಾಣುತ್ತ, ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಿರುವನು. ಈಗ ನೀನು ಅವನ ಬಳಿಗೆ ಹೋಗಿ ನನ್ನ ವಿಯೋಗವೆಂಬ ದುಃಖಾಗ್ನಿಜ್ವಾಲೆಯಿಂದ ಸುಟ್ಟ ಶರೀರವುಳ್ಳ ಅವನನ್ನು ನಾನು ಬರುವೆನೆಂಬ ನೀರಿನ ಮಳೆಯಿಂದ ಚುಮುಕಿಸು.

೮-೯. ಸೀತೆ, ಲಕ್ಷ್ಮಣ, ಸುಗ್ರೀವಾದಿ ಕಪೀಂದ್ರರು, ವಿಭಿಷಣನೇ ಮೊದಲಾದ ರಾಕ್ಷಸರೊಡನೆ ಕೂಡಿ ಪುಷ್ಪಕವಿಮಾನದಲ್ಲಿ ಬರುತ್ತಿರುವೆನೆಂದು ಅವನಿಗೆ ತಿಳಿಸು. ಅದನ್ನು ಕೇಳುವುದರಿಂದ ನನ್ನ ತಮ್ಮನು ಜಾಗ್ರತೆಯಾಗಿ ಸುಖಿಯಾಗುವನು ಎಂದು ಹೇಳಿ ಆ ಹನುಮಂತನನ್ನು ಭರತನ ಬಳಿಗೆ ಕಳುಹಿಸಿದನು.

೧೦-೧೧. ರಘುವೀರನ ಈ ಮಾತನ್ನು ಕೇಳಿ ಸೇವಕನಾದ ಹನುಮಂತನು ಭರತನ ವಾಸಸ್ಥಾನವಾದ ಮತ್ತು ಉತ್ತಮ ಮಂತ್ರಿಗಳಿಂದ ಕೂಡಿದ ಆ ನಂದಿ

ಗತ್ವಾ ಸ ನಂದಿಗ್ರಾಮಂ ತಂ ಮಂತ್ರಿವೃದ್ಧೈಸ್ಸಸಂಯುತಂ ।
ಭರತಂ ಭ್ರಾತೃವಿರಹಾಕ್ಲಿನ್ನಂ ಧೀಮಾನ್ ದದರ್ಶ ಹ ॥ ೧೧ ॥

ಕಥಯಂತಂ ಮಂತ್ರಿವೃದ್ಧಾರ್ಥ ರಾಮಚಂದ್ರಕಥಾನಕಂ ।
ತದೀಯಪದಪಾಥೋಜಮಕರಂದಸುನಿರ್ಭರಂ ॥ ೧೨ ॥

ನಮಶ್ಚಕಾರ ಭರತಂ ಧರ್ಮಂ ಮೂರ್ತಿಯುತಂ ಕಿಲ ।
ವಿಧಾತ್ರಾ ಸಕಲಾಂಶೇನ ಸತ್ತ್ವೇನೇವ ವಿನಿರ್ಮಿತಂ ॥ ೧೩ ॥

ತಂ ದೃಷ್ಟ್ವಾ ಭರತಶ್ಶೀಘ್ರಂ ಪ್ರತ್ಯುತ್ಥಾಯ ಕೃತಾಂಜಲಿಃ ।
ಸ್ವಾಗತಂ ಚೇತಿ ಹೋವಾಚ ರಾಮಸ್ಯ ಕುಶಲಂ ವದ ॥ ೧೪ ॥

ಇತ್ಯೇವಂ ವದತಸ್ತಸ್ಯ ಭುಜೋ ದಕ್ಷಿಣತೋಽಸ್ಫುರತ್ ।
ಹೃದಯಾಚ್ಚ ಗತಶ್ಶೋಕೋ ಹರ್ಷಾಸ್ರೈಃ ಪೂರಿತಾನನಃ ॥ ೧೫ ॥

ವಿಲೋಕ್ಯ ತಾದೃಶಂ ಭೂತಂ ಪ್ರತ್ಯುವಾಚ ಕಪೀಶ್ವರಃ ।
ನಿಕಟೇ ಹಿ ಪುರಃ ಪ್ರಾಪ್ತಂ ವಿದ್ಧಿ ರಾಮಂ ಸಲಕ್ಷ್ಮಣಂ ॥ ೧೬ ॥

---

ಗ್ರಾಮಕ್ಕೆ ಹೋಗಿ ರಾಮನ ವಿರಹದಿಂದ ಬೇಯುತ್ತಿರುವ ಆ ಭರತನನ್ನು ನೋಡಿದನು.

೧೨. ಆಗ ಭರತನು ಮಂತ್ರಿವೃದ್ಧರಿಗೆ ರಾಮಚಂದ್ರನ ಕಥೆಯನ್ನು ಹೇಳುತ್ತಾ ರಾಮಚಂದ್ರನ ಪಾದಪಂಕಜದ ಮಧುವಿನಿಂದಲೇ ತೃಪ್ತನಾಗಿದ್ದನು.

೧೩. ಧರ್ಮದ ಮೂರ್ತಿಯೇ ಆದ, ಸತ್ವಾಂಶದಿಂದಲೇ ಬ್ರಹ್ಮನು ನಿರ್ಮಾಣ ಮಾಡಿರುವ ಆ ಭರತನಿಗೆ ನಮಸ್ಕರಿಸಿದನು.

೧೪. ಭರತನು ಹನುಮಂತನನ್ನು ನೋಡಿ ಎದುರುಗೊಂಡು, ಕೈಮುಗಿದು ಕೊಂಡು ಸ್ವಾಗತವನ್ನು ಹೇಳಿ ರಾಮನ ಕುಶಲವನ್ನು ಹೇಳೆಂದನು.

೧೫. ಇಂತು ಹೇಳುತ್ತಿರುವ ಅವನಿಗೆ ಬಲಭುಜವು ಹಾರಿತು. ಹೃದಯದಿಂದ ದುಃಖವು ಹೋಯಿತು. ಹರ್ಷದಿಂದ ಕಣ್ಣೀರು ಸೂಸಿತು.

೧೬. ಆ ರೀತಿಯಾದ ಶುಭಶಕುನಗಳನ್ನು ಕಂಡ ಭರತನನ್ನು ನೋಡಿ ಕಪೀಶ್ವರನು. ಇಗೋ, ಹತ್ತಿರದಲ್ಲಿಯೇ ಲಕ್ಷ್ಮಣ ಸಹಿತನಾದ ರಾಮನು ಬಂದಿದ್ದಾನೆಂದು ತಿಳಿ ಎಂದನು.

ರಾಮಾಗಮನಸಂದೇಶಾಮೃತಸಿಕ್ತಕಳೇಬರಃ ।
ಪ್ರಾಪ ಯದ್ಧರ್ಷಪೂರಂ ಹಿ ಸಹಸ್ರಾಕ್ಷೋ ನ ವೇದ್ಮ್ಯಹಂ ॥ ೧೭ ॥

ಜಗಾದ ಮಮ ತನ್ನಾಸ್ತಿ ಯತ್ತುಭ್ಯಂ ದೀಯತೇ ಮಯಾ ।
ದಾಸೋಽಸ್ಮಿ ಜನ್ಮಪರ್ಯಂತಂ ರಾಮಸಂದೇಶಹಾರಕ ॥ ೧೮ ॥

ವಸಿಷ್ಠೋಽಪಿ ಗೃಹೀತ್ವಾರ್ಘ್ಯಂ ಮಂತ್ರಿವೃದ್ಧಾಸ್ಸಹರ್ಷಿತಾಃ ।
ಜಗ್ಮುಸ್ತೇ ರಾಮವರ್ತ್ಮಾನಂ ಹನುಮದ್ದರ್ಶಿತಾಧ್ವನಾ ॥ ೧೯ ॥

ದೃಷ್ಟ್ವಾ ದೂರಾತ್ಸಮಾಯಾಂತಂ ರಾಮಚಂದ್ರಂ ಮನೋರಮಂ ।
ಪುಷ್ಪಕಾಸನಮಧ್ಯಸ್ಥಂ ಸಸೀತಂ ಸಹಲಕ್ಷ್ಮಣಂ ॥ ೨೦ ॥

ರಾಮೋಽಪಿ ದೃಷ್ಟ್ವಾ ಭರತಂ ಪಾದಚಾರೇಣ ಸಂಗತಂ ।
ಜಟಾವಲ್ಕಲಕೌಪೀನಪರಿಧಾನಸಮನ್ವಿತಂ ॥ ೨೧ ॥

ಅಮಾತ್ಯಾನ್ ಭ್ರಾತೃವೇಶೇನ ಸಮವೇಷಾನ್ ಜಟಾಧರಾನ್ ।
ನಿತ್ಯಂ ತಪಃಕ್ಲಿಷ್ಟತಯಾ ಕೃಶರೂಪಾನ್ ದದರ್ಶ ಹ ॥ ೨೨ ॥

---

೧೭. ರಾಮನು ಬರುವನೆಂಬ ಮಾತನ್ನು ಕೇಳಿದೊಡನೆಯೇ ಭರತನು ಆಗ ಹೊಂದಿದ ಸಂತೋಷಪ್ರವಾಹವನ್ನು ನಾನು ಸಹಸ್ರಾಕ್ಷನಾದರೂ ತಿಳಿಯಲಾರೆನು.

೧೮. ಎಲೈ ಇಂತಹ ಶುಭವಾರ್ತೆಯಾದ ರಾಮಸಂದೇಶವನ್ನು ತಂದವನೇ, ನಿನಗೆ ಕೊಡುವಷ್ಟು ಬೆಲೆಯುಳ್ಳ ಪದಾರ್ಥವು ನನ್ನಲ್ಲಿ ಯಾವುದೂ ಇಲ್ಲ. ಆದುದ ರಿಂದ ನನ್ನ ಜನ್ಮಪರ್ಯಂತವೂ ನಿನಗೆ ದಾಸನಾಗಿರುತ್ತೇನೆ ಎಂದನು.

೧೯-೨೦. ಬಳಿಕ ವಸಿಷ್ಠನ ಕೈಯಲ್ಲಿ ಅರ್ಘ್ಯದ ನೀರನ್ನು ತೆಗೆಸಿಕೊಂಡು ಮಂತ್ರಿಗಳು, ಹನುಮಂತನು ತೋರಿಸಿದ ದಾರಿಯಿಂದ ರಾಮನ ದಾರಿಯನ್ನು ಕುರಿತು ಅವನನ್ನು ಎದುರುಗೊಳ್ಳಲು ಹೊರಟು, ದೂರದಲ್ಲೇ ಬರುತ್ತಿರುವ ಪುಷ್ಪಕವಿಮಾನದ ಮಧ್ಯದಲ್ಲಿ ಸೀತಾಲಕ್ಷ್ಮಣರೊಡನೆ ಕೂಡಿರುವ ರಾಮನನ್ನು ನೋಡಿದನು.

೨೧. ಜಟೆ, ನಾರುಬಟ್ಟೆ, ಕೌಪೀನಗಳನ್ನು ಧರಿಸಿ ಬರೀಕಾಲಿನಲ್ಲೇ ನಡೆದು ಬರುತ್ತಿರುವ ಭರತನನ್ನು ರಾಮನು ನೋಡಿದನು.

೨೨-೨೫. ಅಮಾತ್ಯರು ಸಹ ಭರತನಿಗೆ ಸಮಾನವಾದ ವೇಷವುಳ್ಳವರಾಗಿ ದ್ದರು. ಎಂದರೆ ಜಟೆಗಳನ್ನು ಧರಿಸಿ ತಪಸ್ಸಿನಿಂದ ಕ್ಲೇಶಗೊಂಡು ಕೃಶರಾಗಿದ್ದರು.

ರಾಮೋऽಪಿ ಚಿಂತಯಾಮಾಸ ದೃಷ್ಟ್ವಾ ಚೈತಾದೃಶಂ ನೃಪಂ ।
ಅಹೋ ದಶರಥಸ್ಯಾಯಂ ರಾಜರಾಜಸ್ಯ ಧೀಮತಃ ॥ ೨೩ ॥

ಪುತ್ರಃ ಪದಾತಿರಾಯಾತಿ ಜಟಾವಲ್ಕಲವೇಷಧೃಕ್ ।
ನ ದುಃಖಂ ತಾದೃಶಂ ಮಹ್ಯಂ ವನಮಧ್ಯಗತಸ್ಯ ಭೋಃ ॥ ೨೪ ॥

ಯಾದೃಶಂ ಮದ್ವಿಯೋಗೇನ ಚೈತಸ್ಯ ಪರಿವರ್ತತೇ ।
ಅಹೋ ಪಶ್ಯತ ಮೇ ಭ್ರಾತಾ ಪ್ರಾಣಾತ್ಪ್ರಿಯತರಸ್ಸುಹೃತ್ ॥ ೨೫ ॥

ಶ್ರುತ್ವಾ ಮಾಂ ನಿಕಟೇ ಪ್ರಾಪ್ತಂ ಮಂತ್ರಿವೃದ್ಧೈಸ್ಸುಹರ್ಷಿತೈಃ ।
ದ್ರಷ್ಟುಂ ಮಾಂ ಭರತೋऽಭ್ಯೇತಿ ವಸಿಷ್ಠೇನ ಸಮನ್ವಿತಃ ॥ ೨೬ ॥

ಇತಿ ಬ್ರುವನ್ನರಪತಿಃ ಪುಷ್ಪಕಾನ್ನಭಸೋಂಗಣಾತ್ ।
ವಿಭೀಷಣಹನೂಮದ್ಭ್ಯಾಂ ಲಕ್ಷ್ಮಣೇನ ಕೃತಾದರಃ ॥ ೨೭ ॥

ಯಾನಾದವತತಾರಾಶು ವಿರಹಕ್ಲಿನ್ನಮಾನಸಃ ।
ಭ್ರಾತರ್ಭ್ರಾತಃ ಪುನರ್ಭ್ರಾತರ್ಭ್ರಾತರ್ಭ್ರಾತರ್ವದನ್ ಮುಹುಃ ॥ ೨೮ ॥

---

ಇಂತಹ ಅಮಾತ್ಯರನ್ನೂ ಈ ರೀತಿಯಾದ ರಾಜನಾದ ಭರತನನ್ನೂ ನೋಡಿ ರಾಮನು ಅಯ್ಯೋ, ರಾಜರಾಜನಾದ ದಶರಥನ ಮಗನಾಗಿದ್ದರೂ ಜಟಾವಲ್ಕಲಗಳನ್ನು ಧರಿಸಿ, ಕಾಲಿನಲ್ಲಿ ನಡೆದು ಬರುತ್ತಾನಲ್ಲ! ನನ್ನ ವಿಯೋಗದಿಂದ ಭರತನಿಗಿರುವಷ್ಟು ದುಃಖವು ವನವಾಸವನ್ನು ಮಾಡಿದ ನನಗೇ ಇಲ್ಲ. ನೋಡಿರಿ. ಇಂತಹ ನನ್ನ ಸಹೋದರನು ನನಗೆ ಪ್ರಾಣಕ್ಕಿಂತಲೂ ಮಿಗಿಲಾದ ಸ್ನೇಹಿತನು.

೨೬. ನಾನು ಸಮೀಪಕ್ಕೆ ಬಂದುದನ್ನು ಕೇಳಿ ಸಂತೋಷಗೊಂಡು ಮಂತ್ರಿ ವೃದ್ಧರಿಂದಲೂ ವಸಿಷ್ಠನಿಂದಲೂ ಸಹಿತನಾಗಿ ನನ್ನನ್ನು ನೋಡಲು ಬರುತ್ತಿದ್ದಾನೆ.

೨೭-೨೮. ಹೀಗೆಂದು ಹೇಳುತ್ತ ಸೋದರನ ವಿರಹದಿಂದ ಖೇದಗೊಂಡ ಮನಸ್ಸುಳ್ಳವನಾಗಿ, ಭ್ರಾತನೇ, ಭ್ರಾತನೇ, ಎಂದು ಪದೇ ಪದೇ ಹೇಳುತ್ತ ವಿಭೀಷಣ, ಹನುಮಂತ, ಸೀತಾಲಕ್ಷ್ಮಣರೊಂದಿಗೆ ಪುಷ್ಪಕದಿಂದಿಳಿದನು.

ದೃಷ್ಟ್ವಾ ಸಮುತ್ತೀರ್ಣಮಿಮಂ ರಾಮಚಂದ್ರಂ ಸ ತ್ವೈರ್ಯುತಂ ।
ಹರ್ಷಾಶ್ರೂಣಿ ಪ್ರಮುಂಚಂಶ್ಚ ದಂಡವತ್ಪ್ರಣನಾಮ ಹ ॥ ೨೯ ॥

ರಘುನಾಥೋಽಪಿ ತಂ ದೃಷ್ಟ್ವಾ ದಂಡವದ್ಭುವಿಸಂಸ್ಥಿತಂ ।
ಉತ್ಥಾಪ್ಯ ಜಗೃಹೇ ದೋರ್ಭ್ಯಾಂ ಹರ್ಷಾಲೋಕಸಮನ್ವಿತಃ ॥ ೩೦ ॥

ಉತ್ಥಾಪಿತೋಽಪಿ ಚ ಭೃಶಂ ನೋದತಿಷ್ಠದ್ರುರ್ದ ಮುಹುಃ ।
ರಾಮಚಂದ್ರಪದಾಂಭೋಜಗ್ರಹಣಾಸಕ್ತಬಾಹುಭೃತ್ ॥ ೩೧ ॥

॥ ಭರತ ಉವಾಚ ॥

ದುರಾಚಾರಸ್ಯ ದುಷ್ಟಸ್ಯ ಪಾಪಿನೋ ಮೇ ಕೃಪಾಂ ಕುರು ।
ರಾಮಚಂದ್ರ ಮಹಾಬಾಹೋ ಕಾರುಣ್ಯಾತ್ಕರುಣಾನಿಧೆ ॥ ೩೨ ॥

ಯಸ್ತೇ ವಿದೇಹಜಾಪಾಣಿಸ್ಪರ್ಶಂ ಕ್ರೂರಮಮನ್ಯತ ।
ಸ ಏವ ಚರಣೌ ರಾಮ ವನೇ ಬಭ್ರಾಮ ಮತ್ಕೃತೇ ॥ ೩೩ ॥

---

೨೯. ಅವರೊಡನೆ ಕೂಡಿ ಪುಷ್ಪಕದಿಂದಿಳಿದ ರಾಮಚಂದ್ರನನ್ನು ನೋಡಿ ಹರ್ಷದ ಕಣ್ಣೀರನ್ನು ಸುರಿಸುತ್ತಾ ಭರತನು ದಂಡಪ್ರಣಾಮಮಾಡಿದನು.

೩೦. ದಂಡಪ್ರಣಾಮಮಾಡಿದ ಭರತನನ್ನು ರಾಮನು ನೋಡಿ ಮೇಲಕ್ಕೆಬ್ಬಿಸಿ ಸಂತೋಷದಿಂದ ಆಲಿಂಗಿಸಿಕೊಂಡನು.

೩೧. ರಾಮಚಂದ್ರನ ಪಾದಗಳನ್ನು ಕೈಗಳಿಂದ ಬಲವಾಗಿ ಹಿಡಿದುಕೊಂಡು ರಾಮನು ಎಬ್ಬಿಸಿದರೂ ದುಃಖಪಡುತ್ತ ಏಳಲೇ ಇಲ್ಲ.

೩೨. ಭರತನು ಹೇಳಿದನು:—ಓ ರಾಮಚಂದ್ರನೇ, ಮಹಾಬಾಹುವೇ, ಕರುಣಾನಿಧಿಯೇ, ದುರಾಚಾರನೂ, ದುಷ್ಟನೂ ಆದ ನನ್ನ ಮೇಲೆ ಕೃಪೆಮಾಡು.

೩೩. ಸೀತೆಯ ಕೈಗಳು ಮುಟ್ಟಿದರೆ ನೋವಾಗುವುದೆಂದು ಹೇಳಿಕೊಳ್ಳುತ್ತಿದ್ದ ಈ ನಿನ್ನ ಕೋಮಲವಾದ ಪಾದಗಳು ನನ್ನ ದೆಸೆಯಿಂದ ಕಾಡಿನಲ್ಲೆಲ್ಲಾ ಅಲೆದವು.

ಇತ್ಯುಕ್ತ್ವಾ ತ್ರುಮುಖೋ ದೀನಃ ಪರಿರಭ್ಯ ಪುನಃ ಪುನಃ ।
ಪ್ರಾಂಜಲಿಃ ಪುರತಸ್ತಸ್ಥೌ ಹರ್ಷವಿಹ್ವಲಿತಾನನಃ ॥ ೩೪ ॥

ರಘುನಾಥಸ್ತಮನುಜಂ ಪರಿಷ್ವಜ್ಯ ಕೃಪಾನಿಧಿಃ ।
ಪ್ರಣಮ್ಯ ಚ ಮಹಾಮಂತ್ರಿಮುಖ್ಯಾನ್ ಪಪ್ರಚ್ಛ ಸಾದರಂ ॥ ೩೫ ॥

ಭರತೇನ ಸಮಂ ಭ್ರಾತ್ರಾ ಪುಷ್ಪಕಾಸನಮಾಸ್ಥಿತಃ ।
ಸೀತಾಂ ದದರ್ಶ ಭರತೋ ಭ್ರಾತೃಪತ್ನೀಮನಿಂದಿತಾಂ ॥ ೩೬ ॥

ಅನಸೂಯಾಮಿವಾತ್ರೇಃ ಕಿಂ ಲೋಪಾಮುದ್ರಾಂ ಘಟೋದ್ಭವಃ ।
ಪತಿವ್ರತಾಂ ಜನಕಜಾಮನುಮನ್ಯತ ನನಾಮ ಚ ॥ ೩೭ ॥

ಮಾತಃ ಕ್ಷಮಸ್ವ ಯದಘಂ ಮಯಾ ಕೃತಮಬುದ್ಧಿನಾ ।
ತತ್ಸದೃಶ್ಯಃ ಪತಿಪರಾಃ ಸರ್ವೇಷಾಂ ಸಾಧುಕಾರಿಕಾಃ ॥ ೩೮ ॥

ಜಾನಕ್ಯಪಿ ಮಹಾಭಾಗಾ ದೇವರಂ ವೀಕ್ಷ್ಯ ಸಾದರಂ ।
ಆಶೀರ್ಭಿರಭಿಯುಜ್ಯಾಥ ಪರ್ಯಪೃಚ್ಛದನಾಮಯಂ ॥ ೩೯ ॥

---

೩೪. ಹೀಗೆಂದು ಹೇಳಿ ಕಣ್ಣೀರು ಸುರಿಸುತ್ತಾ ಪದೇ ಪದೇ ಆಲಿಂಗಿಸುತ್ತಾ ಹರ್ಷದಿಂದ ಕೈಮುಗಿದುಕೊಂಡು ಎದುರಿಗೆ ನಿಂತನು.

೩೫. ರಾಮನು ತಮ್ಮನನ್ನು ಆಲಿಂಗಿಸಿ, ಮಂತ್ರಿಮುಖ್ಯರಿಗೆ ನಮಸ್ಕರಿಸಿ, ಪ್ರೀತಿಯಿಂದ ಕುಶಲಪ್ರಶ್ನೆಮಾಡಿ, ಭರತನೊಡನೆ ಪುಷ್ಪಕದಲ್ಲಿಯೇ ಮತ್ತೆ ಕುಳಿತನು.

೩೬–೩೭. ಬಳಿಕ ಭರತನು, ಅತ್ರಿಗೆ ಅನುಸೂಯೆಯಂತೆಯೂ, ಅಗಸ್ತ್ಯನಿಗೆ ಲೋಪಾಮುದ್ರೆಯಂತೆಯೂ, ಇರುವ ಭಾತೃಪತ್ನಿಯಾದ ಸೀತೆಯನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ,

೩೮. ಎಲೌ ತಾಯಿಯೇ, ನಿನ್ನಂತೆ ಪತಿವ್ರತೆಯರಾದ ಸ್ತ್ರೀಯರು ಎಲ್ಲರಿಗೂ ಒಳ್ಳೆಯದನ್ನೇ ಮಾಡುತ್ತಾರೆ. ದಡ್ಡನಾದ ನಾನು ಮಾಡಿದ ತಪ್ಪನ್ನು ಕ್ಷಮಿಸು ಎಂದು ಪ್ರಾರ್ಥಿಸಿದನು.

೩೯. ಸೀತೆಯೂ ಕೂಡ ಆ ಮೈದುನನನ್ನು ಆದರದಿಂದ ನೋಡಿ ಆಶೀರ್ವದಿಸಿ ಕ್ಷೇಮವನ್ನು ವಿಚಾರಿಸಿದಳು.

**ವಿಮಾನವರಮಾರೂಢಾಸ್ತೇ ಸರ್ವೇ ನಭಸೋಂಗಣೇ ।**
**ಕ್ಷಣಾದಾಲೋಕಯಾಂಚಕ್ರೇ ನಿಕಟೇ ಸ್ವಪಿತುಃ ಪುರೀಂ ॥ ೪೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮರಾಜಧಾನೀದರ್ಶನಂ ನಾಮ ದ್ವಿತೀಯೋಽಧ್ಯಾಯಃ**



---

೪೦. ಅನಂತರ ಅವರೆಲ್ಲರೂ ವಿಮಾನವನ್ನು ಹತ್ತಿ ಆಕಾಶಮಾರ್ಗದಿಂದ ಹೊರಟು ಕ್ಷಣಕಾಲದಲ್ಲಿ ಅಯೋಧ್ಯಾಪಟ್ಟಣದ ಸಮೀಪಕ್ಕೆ ಬಂದರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮರಾಜಧಾನೀದರ್ಶನವೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತೃತೀಯೋಽಧ್ಯಾಯಃ

॥ ಶೇಷ ಉವಾಚ ॥

ದೃಷ್ಟ್ವಾ ರಾಮೋ ರಾಜಧಾನೀಂ ನಿಜಲೋಕನಿವಾಸಿತಾಂ ।
ಜಹರ್ಷ ಮತಿಮಾನ್ವೀರಶ್ಚಿರಾದ್ದರ್ಶನಲಾಲಸಃ ॥ ೧ ॥

ಭರತೋಽಪಿ ಸ್ವಕಂ ಮಿತ್ರಂ ಸುಮುಖಂ ನಗರಂ ಪ್ರತಿ ।
ಪ್ರೇಷಯಾಮಾಸ ಸಚಿವಂ ನಗರೋತ್ಸವಸಿದ್ಧಯೇ ॥ ೨ ॥

॥ ಭರತ ಉವಾಚ ॥

ಕುರ್ವಂತು ಲೋಕಾಸ್ತ್ವರಿತಂ ರಘುನಾಥಾಗಮೋತ್ಸವಂ ।
ಮಂದಿರೇ ಮಂದಿರೇ ರಮ್ಯಂ ಕೃತಕೌತುಕಚಿತ್ರಕಂ ॥ ೩ ॥

---

## ಮೂರನೆಯ ಅಧ್ಯಾಯವು

೧. ಶೇಷನು ಹೇಳಿದನು:—ತನ್ನ ಜನರು ವಾಸವಾಗಿರುವ ರಾಜಧಾನಿಯನ್ನು ರಾಮನು ನೋಡಿ, ಬಹಳ ದಿನಗಳಿಂದ ನೋಡದಿದ್ದ ಅವನ್ನು ನೋಡಿದುದರಿಂದ ಸಂತೋಷಗೊಂಡನು.

೨. ಭರತನೂ ಕೂಡ ತನ್ನ ಮಿತ್ರನಾದ ಒಬ್ಬ ಮಂತ್ರಿಯನ್ನು ನಗರವಲ್ಲಿ ಉತ್ಸವಾದಿಗಳನ್ನು ಸಿದ್ಧಪಡಿಸಲೂ, ಪುರವನ್ನು ಅಲಂಕರಿಸಲೂ ಕಳುಹಿಸಿದನು.

೩. ಭರತನು ಹೇಳಿದನು :—ರಘುನಾಥನು ಪಟ್ಟಣಕ್ಕೆ ಬರುತ್ತಾನಾದ್ದರಿಂದ ಮನೆಮನೆಯಲ್ಲೂ ಚಿತ್ರವಿಚಿತ್ರವಾದ ಅಲಂಕಾರಗಳನ್ನು ಜಾಗ್ರತೆಯಾಗಿ ಮಾಡಬೇಕು.

ನಿಪಾಂಶುಕಾ ರಾಜಮಾರ್ಗಾ ಶ್ಚಂದನದ್ರವಸೇಚಿತಾಃ ।
ಪ್ರಸೂನಭರಸಂಕ್ಲೃಪ್ತಾ ಹೃಷ್ಟಪುಷ್ಟಜನಾವೃತಾಃ ॥ ೪ ॥

ವಿಚಿತ್ರವರ್ಣಧ್ವಜಭಾ ಚಿತ್ರಿತಾಖಿಲಸ್ವಾಂಗಣಾಃ ।
ಮೇಘಾಗಮೇ ಧನುರಿವ ಪಶ್ಯಂತ್ಯೇವ ವಲೀಮುಖಾಃ ॥ ೫ ॥

ಪ್ರತಿಗೇಹಂ ಚ ಲೋಕಾನಾಂ ಕಾರಯಂತ್ವಗುರೂಕ್ಷಣಂ ।
ಯದ್ಧೂಮಂ ವೀಕ್ಷ್ಯ ಶಿಖಿನೋ ನೃತ್ಯಂ ಕುರ್ವಂತು ಲೀಲಯಾ ॥ ೬ ॥

ಹಸ್ತಿನೋ ಮಮ ಶೈಲಾಭಾನಾಧೋರಣಸುಯಂತ್ರಿತಾರ್ ।
ವಿಚಿತ್ರಯಂತು ಬಹುಶೋ ಗೈರಿಕಾದಿಕಧಾತುಭಿಃ ॥ ೭ ॥

ವಾಜಿನಶ್ಚ ಚಿತ್ರಯಂತು ಶೀಲಯಂತು ಮನೋಜವಾಃ ।
ಯದ್ವೇಗವೀಕ್ಷಣಾದೇವ ಗರ್ವಂ ತ್ಯಜಂತು ಸ್ವರ್ಹಯಾಃ ॥ ೮ ॥

---

೪. ರಾಜಧಾನಿಯ ಮಾರ್ಗಗಳು ಧೂಳಿಲ್ಲದಂತಿರಬೇಕು. ಚಂದನದ ನೀರನ್ನು ಚುಮುಕಿಸಿ ಹೂಗಳನ್ನು ಅಲ್ಲಲ್ಲಿ ಹಾಕಿರಬೇಕು. ಜನರು ಸಂತೋಷದಿಂದ ಅಲ್ಲಲ್ಲಿರಬೇಕು.

೫. ನಾನಾಬಗೆಯಾದ ಧ್ವಜಗಳನ್ನೂ, ಚಿತ್ರಗಳನ್ನೂ ಸೇರಿಸಿ ಗೃಹಾಂಗಣಗಳನ್ನು ಅಲಂಕರಿಸಿರಬೇಕು. ಅದನ್ನು ಕಪಿಗಳು ಮೇಘೋದಯವಲ್ಲಿ ಕಾಮನ ಬಿಲ್ಲಿನಂತೆ ನೋಡುತ್ತಿದ್ದವು.

೬. ಅಗರುವಿನ ಧೂಪವನ್ನು ಪ್ರತಿ ಮನೆಯಲ್ಲೂ ಹಾಕಿಸಬೇಕು. ಅದರ ಹೊಗೆಯನ್ನು ನೋಡಿದ ನವಿಲುಗಳು ಮೇಘವೆಂದು ತಿಳಿದು ನರ್ತಿಸಬೇಕು. ಹಾಗೆ ಮಾಡಿಸು.

೭. ಮಾವುತರಿಂದ ಶಿಕ್ಷಿತವಾದ, ಬೆಟ್ಟದಂತಿರುವ ನನ್ನ ಆನೆಗಳ ಶರೀರದ ಮೇಲೆ ಗೈರಿಕಾದಿಧಾತುಗಳಿಂದ ಬಹು ವಿಚಿತ್ರವಾಗಿರುವಂತೆ ಚಿತ್ರಿಸಿ ಬರೆಯಿರಿ.

೮. ಕುದುರೆಗಳನ್ನು ಅಲಂಕರಿಸಿರಿ. ಮನೋವೇಗವುಳ್ಳ ಕುದುರೆಗಳನ್ನು ಪರೀಕ್ಷಿಸಿ ಬೇರೆ ಇಡಿರಿ. ಅವುಗಳ ವೇಗವನ್ನು ನೋಡಿ ದೇವಲೋಕದ ಕುದುರೆಗಳು ತನ್ನ ಗರ್ವವನ್ನು ಬಿಡಲಿ.

ಕನ್ಯಾ ಸಹಸ್ರಶೋ ರಮ್ಯಾಃ ಸರ್ವಾಭರಣಭೂಷಿತಾಃ ।
ಗಜೋಪರಿಸಮಾರೂಢಾಃ ಮುಕ್ತಾಭಿರ್ವಿಕಿರಂತು ಚ ॥ ೯ ॥

ಬ್ರಾಹ್ಮಣ್ಯಃ ಪಾತ್ರಹಸ್ತಾಶ್ಚ ದೂರ್ವಾಹಾರಿದ್ರಸಂಯುತಾಃ ।
ಸುವಾಸಿನ್ಯೋ ಮಹಾರಾಜಂ ರಾಮಂ ನೀರಾಜಯಂತು ತಾಃ ॥ ೧೦ ॥

ಕೌಸಲ್ಯಾ ಪುತ್ರಸಂಯೋಗಸಂದೇಶವಿಧುರಾ ಸತೀ ।
ಹರ್ಷಂ ಪ್ರಾಪ್ನೋತು ಸುಕೃಶಾ ತದೀಕ್ಷಣಸುಲಾಲಸಾ ॥ ೧೧ ॥

ಇತ್ಯೇವಮಾದಿರಚನಾಂ ಪುರಶೋಭಾವಿಧಾಯಿಕಾಂ ।
ಪ್ರಕುರ್ವಂತು ಜನಾ ಹೃಷ್ಟಾ ರಾಮಸ್ಯಾಗಮನಂ ಪ್ರತಿ ॥ ೧೨ ॥

॥ ಶೇಷ ಉವಾಚ ॥

ಇತಿ ಶ್ರುತ್ವಾ ತತೋ ವಾಕ್ಯಂ ಸುಮುಖೋ ಮಂತ್ರವಿತ್ತಮಃ ।
ಪ್ರಯಯೌ ನಗರೀಂ ಕರ್ತುಂ ಬಹುಕೌತುಕತೋರಣಾಂ ॥ ೧೩ ॥

---

೯. ಸಾವಿರಾರು ಕನ್ಯೆಯರು ಸರ್ವಾಲಂಕಾರಗಳಿಂದ ಕೂಡಿ ಆನೆಯ ಮೇಲೆ ಕುಳಿತು ಮುತ್ತುಗಳನ್ನು ಚೆಲ್ಲುತ್ತಿರಲಿ.

೧೦. ಬ್ರಾಹ್ಮಣ ಸುವಾಸಿನಿಯರು ಗರಿಕೆ, ಅರಿಸಿನ ಕುಂಕುಮ ಮೊದಲಾದ ಮಂಗಳದ್ರವ್ಯಗಳನ್ನು ತೆಗೆದುಕೊಂಡು ಮಹಾರಾಜನಾದ ರಾಮನನ್ನು ಆರತಿಯಿಂದ ಬೆಳಗಲಿ.

೧೧. ಕೌಸಲ್ಯೆಯು ಪುತ್ರನ ಆಗಮನ ವೃತ್ತಾಂತವನ್ನು ಕೇಳದೆ ಬಡವಾಗಿದ್ದಾಳೆ. ಅವಳು ಆ ರಾಮನನ್ನು ನೋಡುವುದರಿಂದ ಸಂತೋಷಪಡಲಿ.

೧೨. ಪಟ್ಟಣದ ಅಲಂಕಾರಗಳನ್ನು ಮಾಡಿ ಮೇಲೆ ಹೇಳಿದ ರೀತಿಯಲ್ಲಿ ಜನಗಳು ರಾಮನ ಬರುವಿಕೆಯಿಂದ ಸಂತೋಷಗೊಂಡು ಉತ್ಸಾಹದಿಂದಿರಲಿ.

೧೩-೧೪. ಶೇಷನು ಹೇಳಿದನು:— ಮಂತ್ರಿಶ್ರೇಷ್ಠನಾದ ಸುಮುಖನು ಇದನ್ನು

ಗತ್ವಾಥ ನಗರೀಂ ತಾಂ ವೈ ಮಂತ್ರೀ ತು ಸುಮುಖಾಭಿಧಃ ।
ಖ್ಯಾಪಯಾಮಾಸ ಲೋಕಾನಾಂ ರಾಮಾಗಮಮಹೋತ್ಸವಂ ॥ ೧೪ ॥

ಲೋಕಾಶ್ಶ್ರುತ್ವಾ ಪುರೀಂ ಪ್ರಾಪ್ತಂ ರಘುನಾಥಂ ಸುಹರ್ಷಿತಾಃ ।
ಪೂರ್ವಂ ತದೀಯವಿರಹಾತ್ತ್ಯಕ್ತಭೋಗಸುಖಾದಯಃ ॥ ೧೫ ॥

ಬ್ರಾಹ್ಮಣಾ ವೇದಸಂಪನ್ನಾಃ ಪವಿತ್ರಾ ದರ್ಭಪಾಣಯಃ ।
ಧೌತೋತ್ತರೀಯವಲಿತಾ ಜಗ್ಮುಃ ಶ್ರೀ ರಘುನಾಯಕಂ ॥ ೧೬ ॥

ಕ್ಷತ್ರಿಯಾ ಯೇ ಶೂರತಮಾ ಧನುರ್ಬಾಣಧರಾ ವರಾಃ ।
ಸಂಗ್ರಾಮೇ ಬಹುಶೋ ವೀರಾಞ್ಜೇತಾರೋ ಯಯುರಪ್ಯಮುಂ ॥ ೧೭ ॥

ವೈಶ್ಯಾ ಧನಸಮೃದ್ಧಾಶ್ಚ ಮುದ್ರಾಶೋಭಿತಪಾಣಯಃ ।
ಶುಭವಸ್ತ್ರಪರೀಧಾನಾ ಅಭಿಜಗ್ಮುರ್ನರೇಶ್ವರಂ ॥ ೧೮ ॥

ಶೂದ್ರಾ ದ್ವಿಜೇಷು ಯೇ ಭಕ್ತಾಃ ಸ್ವೀಯಾಚಾರಸುನಿಷ್ಠಿತಾಃ ।
ವೇದಾಚಾರರತಾ ಯೇ ವೈ ತೇಽಪಿ ಜಗ್ಮುಃ ಪುರೀಪತಿಂ ॥ ೧೯ ॥

---

ಕೇಳಿ ಪಟ್ಟಣವನ್ನು ಅಲಂಕರಿಸಲು ಹೊರಟು, ಅಯೋಧ್ಯಾನಗರವನ್ನೈದಿ, ರಾಮಾಗಮನದ ಉತ್ಸವವನ್ನು ಮಾಡುವಂತೆ ಪ್ರಜೆಗಳಿಗೆ ತಿಳಿಸಿದನು.

೧೫. ರಾಮನ ಅಗಲುವಿಕೆಯಿಂದ ಸುಖಗಳನ್ನೂ, ಭೋಗಗಳನ್ನೂ ಬಿಟ್ಟಿದ್ದ ಪ್ರಜೆಗಳು ರಾಮನು ಊರಿಗೆ ಬರುವುದನ್ನು ಕೇಳಿ ಸಂತೋಷಗೊಂಡರು.

೧೬—೧೯. ವೇದಸಂಪನ್ನರಾದ ಬ್ರಾಹ್ಮಣರು ಮಡಿಬಟ್ಟೆಯನ್ನುಟ್ಟುಕೊಂಡು ದರ್ಭೆಯ ಪವಿತ್ರಗಳನ್ನಿಟ್ಟುಕೊಂಡೂ, ಯುದ್ಧದಲ್ಲಿ ಜಯಶಾಲಿಗಳಾದ ಶೂರರಾದ ಕ್ಷತ್ರಿಯರು ಕೈಗಳಲ್ಲಿ ಧನುರ್ಬಾಣಗಳನ್ನು ಧರಿಸಿಯೂ, ಧನಿಗಳಾದ ವೈಶ್ಯರು ಕೈಯಲ್ಲಿ ಮುದ್ರೆಯನ್ನು ಹಿಡಿದುಕೊಂಡೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳ, ವೇದಾಚಾರವನ್ನು ಅನುಸರಿಸುವ ಶೂದ್ರರೂ ಸಹ ರಾಜನಾದ ರಾಮನನ್ನು ಎದುರುಗೊಳ್ಳಲು ಹೋದರು.

ಯೇ ಯೇ ವೃತ್ತಿಕರಾ ಲೋಕಾಃ ಸ್ವೇ ಸ್ವೇ ಕರ್ಮಣ್ಯಧಿಷ್ಠಿತಾಃ ।
ಸ್ವಕಂ ವಸ್ತು ಸಮಾದಾಯ ಯಯುಃ ಶ್ರೀರಾಮಭೂಪತಿಂ ॥ ೨೦ ॥

ಇತ್ಥಂ ಭೂಪತಿಸಂದೇಶಾತ್ ಪ್ರಮೋದಾಪ್ಲವಸಂಪ್ಲವಾಃ ।
ನಾನಾಕೌತುಕಸಂಯುಕ್ತಾ ಆಜಗ್ಮುರ್ಮಾನವೇಶ್ವರಂ ॥ ೨೧ ॥

ರಘುನಾಥೋಽಪಿ ಸಕಲೈರ್ದೈವತ್ಯೈಃ ಸ್ವಸ್ವಯಾನಗೈಃ ।
ಪರೀತಃ ಪ್ರವಿವೇಶೋಚ್ಚೈಃ ಪುರೀಂ ರಚಿತಮೋಹನಾಂ ॥ ೨೨ ॥

ಪ್ಲವಂಗಾಃ ಪ್ಲವನೈರುಕ್ತಾ ಆಕಾಶಪಥಚಾರಿಣಃ ।
ಸ್ವಸ್ವಶೋಭಾಪರೀತಾಂಗಾಶ್ಚಾನುಜಗ್ಮುಃ ಪುರೋತ್ತಮಂ ॥ ೨೩ ॥

ಪುಷ್ಪಕಾದವರುಹ್ಯಾಶು ನರಯಾನಮುಪಾರುಹತ್ ।
ಸೀತಯಾ ಸಹಿತೋ ರಾಮಃ ಪರಿವಾರಸಮಾವೃತಃ ॥ ೨೪ ॥

---

೨೦. ಯಾವ ಯಾವ ಕೆಲಸದ ಜನರು ತಮ್ಮ ತಮ್ಮ ಕೆಲಸಗಳಲ್ಲಿದ್ದರೋ ಅವರೆಲ್ಲರೂ ತಮ್ಮ ತಮ್ಮ ವಸ್ತುಗಳನ್ನು ತೆಗೆದುಕೊಂಡು ರಾಮನನ್ನು ಎದುರುಗೊಳ್ಳಲು ಹೋದರು.

೨೧. ಈ ರೀತಿ ರಾಜನ ಅಪ್ಪಣೆಯಿಂದ ಸಂತೋಷಗೊಂಡು ಬಗೆಬಗೆಯಾದ ವಸ್ತುಗಳನ್ನು ತೆಗೆದುಕೊಂಡು ಅಲಂಕೃತರಾಗಿ ರಾಮನನ್ನು ನೋಡಲು ಬಂದರು.

೨೨. ಈ ರೀತಿ ರಾಮನು ತನ್ನನ್ನು ಅನುಸರಿಸಿ ಬರುತ್ತಿರುವ ದೇವತೆಗಳೊಡನೆ ಕೂಡಿಕೊಂಡು ಅಲಂಕೃತವಾದ ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿದನು.

೨೩. ಕಪಿಗಳು ಸಂತೋಷಾತಿಶಯದಿಂದ ಆಕಾಶದಲ್ಲಿ ನೆಗೆಯುತ್ತಾ ರಾಮನ ಹಿಂದೆ ಪಟ್ಟಣಕ್ಕೆ ಬಂದವು.

೨೪. ಸೀತೆಯೊಡನೆ ರಾಮನು ಪುಷ್ಪಕದಿಂದ ಇಳಿದು ಪರಿವಾರದೊಡನೆಯೂ ಸೀತೆಯೊಡನೆಯೂ ತನ್ನ ಪಲ್ಲಕ್ಕಿಯನ್ನು ಹತ್ತಿದನು.

**ಅಯೋಧ್ಯಾಂ ಪ್ರವಿವೇಶಾಥ ಕೃತಕೌತುಕತೋರಣಾಂ ।**
**ಹೃಷ್ಟಪುಷ್ಟಜನಾಕೀರ್ಣಾಮುತ್ಸವೈಃ ಪರಿಭೂಷಿತಾಂ ॥ ೨೫ ॥**

**ವೀಣಾಪಣವಭೇರ್ಯಾದಿವಾದಿತ್ರೈರಾಹತೈರ್ಭೃಶಂ ।**
**ಶೋಭಮಾನಃ ಸ್ತೂಯಮಾನಃ ಸೂತಮಾಗಧವಂದಿಭಿಃ ॥ ೨೬ ॥**

**ಜಯ ರಾಘವ ರಾಮೇತಿ ಜಯ ಸೂರ್ಯಕುಲಾಂಗದ ।**
**ಜಯ ದಾಶರಥೇ ದೇವ ಜಯತಾಂಲ್ಲೋಕನಾಯಕ ॥ ೨೭ ॥**

**ಇತಿ ಶೃಣ್ವನ್ಶುಭಾ ವಾಚಃ ಪೌರಾಣಾಂ ಹರ್ಷಿತಾಂಗಿನಾಂ ।**
**ರಾಮದರ್ಶನಸಂಜಾತಪುಲಕೋದ್ಭೇದಶೋಭಿನಾಂ ॥ ೨೮ ॥**

**ಪ್ರವಿವೇಶ ವರಂ ಮಾರ್ಗಂ ರಥ್ಯಾಚತ್ವರಭೂಷಿತಂ ।**
**ಚಂದನೋದಕಸಂಸ್ತಿಕ್ತಂ ಪುಷ್ಪಪಲ್ಲವಸಂಯುತಂ ॥ ೨೯ ॥**

---

೨೫. ಸಂತೋಷಗೊಂಡಿರುವ ಜನರಿಂದಲೂ, ಉತ್ಸವದಿಂದಲೂ ಕೂಡಿ, ತೋರಣ ಚಪ್ಪರಗಳಿಂದ ಅಲಂಕೃತವಾದ ಅಯೋಧ್ಯೆಯನ್ನು ಪ್ರವೇಶಿಸಿದನು.

೨೬. ವೀಣೆ, ತಮಟೆ, ಭೇರಿ, ಮೊದಲಾದುವುಗಳನ್ನು ಬಡಿದು ಶಬ್ದಮಾಡುತ್ತಿರುವ ಸೂತ, ಮಾಗಧವಂದಿಗಳು ಹೊಗಳುತ್ತಿರಲು ಪಟ್ಟಣವನ್ನು ಪ್ರವೇಶಿಸಿದನು.

೨೭. ರಾಮನಿಗೆ ಜಯವು. ಸೂರ್ಯಕುಲಕ್ಕೆ ಭೂಷಣನೇ, ನಿನಗೆ ಜಯವು. ದಾಶರಥಿಯೇ ನಿನಗೆ ಜಯವು. ಲೋಕನಾಯಕನೇ ನಿನಗೆ ಜಯವಾಗಲಿ.

೨೮. ರಾಮದರ್ಶನದಿಂದ ಉಂಟಾದ ರೋಮಾಂಚದಿಂದ ಸಂತೋಷಗೊಂಡ ಪಟ್ಟಣಿಗರ ಈ ರೀತಿಯಾದ ಶುಭವಾದಗಳನ್ನು ಕೇಳುತ್ತಾ ಹೊರಟು,

೨೯. ಚೌಕಗಳಿಂದಲೂ, ಸಣ್ಣ ದಾರಿಗಳಿಂದಲೂ ಕೂಡಿರುವ, ಚಂದನೋದಕದಿಂದ ಚುಮುಕಿಸಿ ಹೂಚಿಗುರುಗಳನ್ನು ಎರಚಿರುವ ಉತ್ತಮವಾದ ಮಾರ್ಗವನ್ನು ಪ್ರವೇಶಿಸಿದನು.

ತದಾ ಪೌರಾಂಗನಾಃ ಕಾಶ್ಚಿದ್ಗವಾಕ್ಷವಲಭಿಶ್ರಿತಾಃ ।
ರಘುನಾಥಸ್ವರೂಪೇಕ್ಷಾಜಾತಕಾಮಾ ಅಥಾಬ್ರುವನ್ ॥ ೩೦ ॥

॥ ಪೌರಾಂಗನಾ ಊಚುಃ ॥

ಧನ್ಯಾ ಅಭೂವನ್ಬತ ಭಿಲ್ಲಕನ್ಯಾ
ವನೇಷು ಯಾ ರಾಮಮುಖಾರವಿಂದಂ ।
ಸ್ವಲೋಚನೇಂದೀವರಕೈರಥಾಪಿಬನ್
ಸ್ವಭಾಗ್ಯಸಂಜಾತ ಮಹೋದಯಾ ಇಮಾಃ ॥ ೩೧ ॥

ಧನ್ಯಾ ಮುಖಂ ಪಶ್ಯತ ವೀರಧಾಮ್ನಃ
ಶ್ರೀರಾಮದೇವಸ್ಯ ಪಯೋಜನೇತ್ರಂ ।
ಯದ್ದರ್ಶನಂ ಧಾತೃಮುಖಾಃ ಸುರಾ ಅಪಿ
ನಾಪುರ್ಮಹಾಭಾಗ್ಯಯುತಾ ವಯಂ ತ್ವಹೋ ॥ ೩೨ ॥

ಏತನ್ಮುಖಂ ಪಶ್ಯತ ಚಾರುಹಾಸಂ
ಕಿರೀಟಸಂಶೋಭಿನಿಜೋತ್ತಮಾಂಗಂ ।
ಬಂಧೂಕಧಿಕ್ಕಾರಲಸಚ್ಛವಿಪ್ರದಂ
ದಂತಚ್ಛದಂ ಬಿಭ್ರತಮುಚ್ಚನಾಸಂ ॥ ೩೩ ॥

---

೩೦. ಕೆಲವು ಜನ ಪಟ್ಟಣದ ಸ್ತ್ರೀಯರು ರಾಮನನ್ನು ನೋಡುವ ಅಪೇಕ್ಷೆಯಿಂದ ಕಿಟಕಿಗಳಲ್ಲಿ ನಿಂತು ಇಂತೆಂದು ಹೇಳಿದರು.

೩೧. ಪಟ್ಟಣದ ಸ್ತ್ರೀಯರು ಹೇಳಿದರು:—ಕಾಡಿನಲ್ಲಿ ರಾಮನ ಮುಖಾರವಿಂದವನ್ನು ನೋಡುತ್ತಿದ್ದ ಭಿಲ್ಲಸ್ತ್ರೀಯರೇ ಅದೃಷ್ಟಶಾಲಿಗಳು. ಅವರೇ ಧನ್ಯರು.

೩೨. ಬ್ರಹ್ಮನೇ ಮುಂತಾದವರಿಗೂ ಯಾವನ ಮುಖದರ್ಶನವು ಅಸಾಧ್ಯವೋ ಅಂತಹ ವೀರಶ್ರೀಗೆ ತೌರುಮನೆಯಾದ ರಾಮನ ಮುಖವನ್ನು ನೋಡಿದವರೇ ಧನ್ಯರು.

೩೩. ಮುಖದಲ್ಲಿ ಸೂಸುತ್ತಿರುವ ಮಂದಹಾಸ, ಶಿರಸ್ಸಿನಲ್ಲಿ ಪ್ರಕಾಶಿಸುತ್ತಿರುವ ರತ್ನಕಿರೀಟ, ಕೆಂಪು ದಾಸವಾಳಪುಷ್ಪದಂತೆ ಮನೋಹರವಾದ ಅಧರ ಪ್ರದೇಶ, ಶುಭ್ರವಾದ ದಂತಪಂಕ್ತಿ, ನೀಳವಾದ ನಾಸಿಕ ಇವುಗಳಿಂದ ಶೋಭಿಸುತ್ತಿರುವ ಸುಂದರಾಂಗನಾದ ಈ ರಾಮನನ್ನು ನೋಡಿರಿ.

**ಇತಿ ಗದಿತವತೀಸ್ತಾಃ ಸ್ನೇಹಭಾರೇಣ ರಾಮಾ**
**ನಳಿನದಳಸದೃಕ್ಷೈರ್ನೇತ್ರಪಾತೈಃ ಪ್ರಸಾದ್ಯ ।**
**ನಿಖಿಲಗುರುರನೂನಪ್ರೇಮಭಾರಂ ನೃಲೋಕಂ**
**ಜನನಿಗೃಹಮಿಯೇಷ ಪ್ರೋಷಿತೋಽಥೋ ನಿವೇಷ್ಟುಂ ॥ ೩೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಘುನಾಥಸ್ಯ ಪುರಪ್ರವೇಶನಂ ನಾಮ ತೃತೀಯೋಽಧ್ಯಾಯಃ**



---

೩೪. ಹೀಗೆ ಪರಸ್ಪರ ಮಾತನಾಡಿಕೊಳ್ಳುತ್ತಿರುವ ಕಮಲಮುಖಿಯರನ್ನೂ, ಇತರ ಪ್ರಜೆಗಳನ್ನೂ ಪ್ರೇಮಯುಕ್ತವಾದ ತನ್ನ ನೇತ್ರದೃಷ್ಟಿಯಿಂದಲೇ ಅನುಗ್ರಹಿಸುತ್ತ ಸಕಲಜಗದ್ವಂದ್ಯನಾದ ಶ್ರೀರಾಮನು, ಹೊರಟುಬರುತ್ತಾ ತನ್ನ ಜನನಿಯಾದ ಕೌಸಲ್ಯೆಯನ್ನು ನೋಡುವ ಉತ್ಸುಕತೆಯಿಂದ ಆ ರಾಣಿಯ ಗೃಹಾಭಿಮುಖನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ಶ್ರೀ ರಾಮನ ಪುರಪ್ರವೇಶವೆಂಬ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುರ್ಥೋಽಧ್ಯಾಯಃ

॥ ವಾತ್ಸ್ಯಾಯನ ಉವಾಚ ॥

ಭುಜಗಾಧೀಶ್ವರ ಗುರೋ ಧರಾಭಾರಧರಕ್ಷಮಾ ।
ಶೃಣ್ವೇಕಂ ಸಂಶಯಂ ಮಹ್ಯಂ ಕೃಪಯಾ ಕಥಯಸ್ವ ತಂ ॥ ೧ ॥

ರಘುನಾಥಸ್ಯ ಗಮನಂ ವನಂ ಪ್ರತಿ ಯದಾ ಹ್ಯಭೂತ್ ।
ತದಾಪ್ರಭೃತಿ ದೇಹೇನ ಸ್ಥಿತಾ ಶೂನ್ಯೇನ ಚೇತಸಾ ॥ ೨ ॥

ತದ್ವಿಪ್ರಯೋಗವಿಧುರಾ ಕೃಶದೇಹಾತಿದುಃಖಿತಾ ।
ಸುಮುಖಾನ್ಮಂತ್ರಿಣಶ್ಶ್ರುತ್ವಾ ರಘುನಾಥಂ ಸಮಾಗತಂ ॥ ೩ ॥

---

## ನಾಲ್ಕನೆಯ ಅಧ್ಯಾಯವು

೧. ವಾತ್ಸ್ಯಾಯನನು ಹೇಳಿದನು:—ಎಲೈ ಭೂಭಾರಭರಣದಕ್ಷನಾದ ಆದಿಶೇಷನೇ, ನನಗೆ ಒಂದು ಸಂಶಯವು ಪ್ರಾಪ್ತವಾಗಿದೆ. ಅದನ್ನು ದಯವಿಟ್ಟು ಪರಿಹರಿಸು.

೨-೩. ರಾಮನು ಕಾಡಿಗೆ ಹೋದಾಗಿನಿಂದಲೂ, ಏನೊಂದು ಮಾಡಲೂ ತೋರದೆ ಮಂಕಾಗಿದ್ದ ಅವನ ತಾಯಿಯು ಅವನ ವಿರಹದಿಂದ ದುಃಖಿತಳಾಗಿ ಕೃಶಳಾಗಿದ್ದಳಷ್ಟೆ? ಆಕೆಯು ರಾಮನು ಬಂದುದನ್ನು ಸುಮುಖನೆಂಬ ಮಂತ್ರಿಯಿಂದ ತಿಳಿದಳು.

**ಕಥಂ ಜಹರ್ಷ ಕಿಮಭೂತ್ಕಿಂವೃತಂ ತತ್ರ ಚೇಷ್ಟಿತಂ ।**
**ರಾಮಚಂದ್ರಸ್ಯ ಸಂದೇಶಹರ್ತಾರಂ ಕಿಮುವಾಚ ಸಾ ॥ ೪ ॥**

**ಏತಂ ವೈ ಸಂಶಯಂ ಛಿಂಧಿ ರಘುನಾಥಗುಣೋದಯಂ ।**
**ಯಥಾವಚ್ಛೃಣ್ವತೇ ಮಹ್ಯಂ ಕಥಯಸ್ವ ಪ್ರಸಾದತಃ ॥ ೫ ॥**

॥ ಶೇಷ ಉವಾಚ ॥

**ಸಾಧು ಪೃಷ್ಟಂ ಮಹಾಭಾಗ ದ್ವಿಜವರ್ಯ ಪುರಸ್ಕೃತ ।**
**ತಸ್ಮೈ ನಿಗದತಃ ಸಾಕ್ಷಾಚ್ಛೃಣುಷ್ವೈಕಮನಾಃ ಕಿಲ ॥ ೬ ॥**

**ಸಾ ವೈ ತದ್ವದನಾಂಭೋಜಚ್ಯುತಂ ರಾಮಾಗಮಾಮೃತಂ ।**
**ಪೀತ್ವಾ ಪೀತ್ವಾ ಬಭೂವಾಹೋ ಸ್ಥಗಿತಾಂಗೇನ ವಿಹ್ವಲಾ ॥ ೭ ॥**

**ಕಿಂ ಮೇ ಸ್ವಪ್ನೋ ವಿಮೂಢಾಯಾಃ ಕಿಂ ವಾ ಭ್ರಮಕರಂ ವಚಃ ।**
**ಮಮ ವೈ ಮಂದಭಾಗ್ಯಾಯಾಃ ಕಥಂ ರಾಮೇಕ್ಷಣಂ ಪುನಃ ॥ ೮ ॥**

---

೪. ಇಂತಹ ಶುಭವಾರ್ತೆಯನ್ನು ಕೇಳಿ ಆ ತಾಯಿಯು ಹೇಗೆ ಸಂತೋಷಪಟ್ಟಳು? ಏನಾಯಿತು? ಆಗ ನಡೆದದ್ದೇನು? ರಾಮಚಂದ್ರನ ಆಗಮನ ವೃತ್ತಾಂತವನ್ನು ತಂದ ಆ ದೂತನಿಗೆ ಏನೆಂದು ಹೇಳಿದಳು?

೫. ಈ ವಿಚಾರಗಳಲ್ಲಿ ನನಗೆ ಸಂಶಯ ಹುಟ್ಟಿದೆ. ರಾಮಚಂದ್ರನು ತನ್ನ ಸಹಜವಾದ ಒಳ್ಳೆಯ ಗುಣಗಳಿಂದ ಹೇಗೆ ವರ್ತಿಸಿದನು? ಇದೆಲ್ಲವನ್ನೂ ಆಗ ನಡೆದಂತೆ ನನ್ನಲ್ಲಿ ದಯವಿಟ್ಟು ಹೇಳು ಎನ್ನಲು,

೬. ಶೇಷನು ಹೇಳಿದನು:—ಬ್ರಾಹ್ಮಣಪುರಸ್ಕೃತ್ಯನಾದ ಎಲೈ ವಾತ್ಸ್ಯಾಯನನೇ, ಅದನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೭. ರಾಮನು ಬರುತ್ತಾನೆಂಬುದನ್ನು ಕೇಳಿ, ಆ ಮಾತೆಂಬ ಅಮೃತವನ್ನು ಕುಡಿದು ಕುಡಿದು ಆ ಶರೀರದಿಂದ ಆಯಾಸಗೊಂಡಳು.

೮. ಇದೇನು ಬುದ್ಧಿಯಿಲ್ಲದ ನನಗೆ ಸ್ವಪ್ನವೋ? ಅಥವಾ ಭ್ರಮಣೆಯ ಮಾತೋ? ದುರದೃಷ್ಟೆಯಾದ ನನಗೆ ಮತ್ತೆ ರಾಮನ ದರ್ಶನವೆಂತು?

ಬಹುನಾ ತಪಸಾ ಕೃತ್ವಾ ಪ್ರಾಪ್ತೋಽಯಂ ಮೈ ಸುತಃ ಶಿಶುಃ ।
ಕೇನಚಿನ್ಮಮ ಪಾಪೇನ ವಿಪ್ರಯೋಗಂ ಗತಃ ಪುನಃ ॥ ೯ ॥

ಸುಮಂತ್ರಿನ್ಕುಶಲೀ ರಾಮಃ ಸೀತಾಲಕ್ಷ್ಮಣಸಂಯುತಃ ।
ಕಥಂ ಮಾಂ ಸ್ಮರತೇ ಸೀರೋ ವನೇಚಾರೀ ಸುದುಃಖಿತಾಂ ॥ ೧೦ ॥

ಇತಿ ಸಾ ವಿಲಲಾಪೋಚ್ಚೈ ರಘುನಾಥಸ್ಮೃತಿಂ ಗತಾ ।
ಸ ವಿವೇದ ನಿಜಂ ಕಿಂಚಿತ್ಪರಕೀಯಂ ವಿಮೋಹಿತಾ ॥ ೧೧ ॥

ಸುಮುಖೋಪಿ ತದಾ ದೃಷ್ಟ್ವಾ ದುಃಖಿತಾಂ ಮಾತರಂ ಭೃಶಂ ।
ವೀಜಯಾಮಾಸ ವಾಸೋಗ್ರೈಃ ಸಂಜ್ಞಾಮಾಪ ಚ ಸಾ ಪುನಃ ॥ ೧೨ ॥

ಉವಾಚ ಜನನೀಂ ಸೌಮ್ಯಂ ವಚೋ ಹರ್ಷಕರಂ ಮುಹುಃ ।
ರಘುನಾಥಾಗಮಸ್ಮಾರಹೃಷ್ಟಾಂ ತಾಂ ಸ ವ್ಯಧಾತ್ಪುನಃ ॥ ೧೩ ॥

ಮಾತರ್ವಿದ್ಧಿ ಗೃಹಂ ಪ್ರಾಪ್ತಂ ರಘುನಾಥಂ ಸಲಕ್ಷ್ಮಣಂ ।
ಸೀತಯಾ ಸಹಿತಂ ಪಶ್ಯ ಚಾಶೀರ್ಭಿರಭಿಯುಂಕ್ಷ್ವ ಚ ॥ ೧೪ ॥

---

೯-೧೧. ಬಹುವಾದ ತಪಸ್ಸನ್ನು ಮಾಡಿ ಈ ಮಗುವನ್ನು ಪಡೆದೆನು. ಯಾವುದೋ ಪಾಪಶೇಷದಿಂದ ಅವನೂ ನನ್ನನ್ನು ಬಿಟ್ಟು ಅಗಲಿದನು ಎಂದು ತನ್ನಲ್ಲಿಯೇ ಯೋಚಿಸಿ, ಬಳಿಕ ಮಂತ್ರಿಯನ್ನು ನೋಡಿ, ಎಲೈ ಮಂತ್ರಿಯೇ, ಸೀತೆ, ಲಕ್ಷ್ಮಣರಿಂದ ಕೂಡಿಡ ರಾಮನು ಕುಶಲಿಯೇ? ಕಾಡಿನಲ್ಲಿ ಸಂಚರಿಸುತ್ತಿದ್ದರೂ ದುಃಖಿತೆಯಾದ ನನ್ನನ್ನು ಜ್ಞಾಪಿಸಿಕೊಳ್ಳುತ್ತಿರುವನೇ? ಎಂದು ವಿಚಾರಿಸಿ ರಾಮನನ್ನು ನೆನಸಿಕೊಂಡು ಗಟ್ಟಿಯಾಗಿ ಅತ್ತಳು. ಬುದ್ಧಿಯು ಭ್ರಮೆಗೊಂಡು ತನ್ನದು ಪರರದು ಎಂಬುದನ್ನು ತಿಳಿಯಲಿಲ್ಲ.

೧೨-೧೩. ದುಃಖದಿಂದ ಆಕೆಯು ಮೂರ್ಛೆ ಹೋಗಲು, ಸಮೀಪದಲ್ಲಿದ್ದ ಸುಮುಖನು ತನ್ನ ಬಟ್ಟೆಯ ಸೆರಗಿನಿಂದ ಆಕೆಗೆ ಪ್ರಜ್ಞೆ ಬರುವಂತೆ ಮೆಲ್ಲನೆ ಗಾಳಿಬೀಸಿ ಬಳಿಕ, ಆ ಕೌಸಲ್ಯೆಯನ್ನು ಕುರಿತು ಹರ್ಷಕರವಾದ ಮಾತನ್ನು ಪುನಃ ಪುನಃ ಹೇಳಿ ರಾಮನ ಬರುವಿಕೆಯಿಂದ ಸಂತೋಷಗೊಂಡವಳನ್ನಾಗಿ ಮತ್ತೆ ಮಾಡಿದನು.

೧೪. ಅಮ್ಮ! ಲಕ್ಷ್ಮಣನೊಡನೆ ರಾಮನು ಮನೆಗೆ ಬಂದನು. ಸೀತೆಯೂ ಬಂದಿದ್ದಾಳೆ. ಅವರನ್ನು ನೋಡು. ಆಶೀರ್ವದಿಸು ಎನ್ನಲು,

**ಇತಿ ತಥ್ಯಂ ವಚಶ್ಶ್ರುತ್ವಾ ಸುಮುಖೇನ ಪ್ರಭಾಷಿತಂ ।**
**ಯಾದೃಶಂ ಹರ್ಷಮಾಪೇದೆ ತಾದೃಶಂ ನೇದ್ಮಿ ಸೋ ಹ್ಯಹಂ    ॥ ೧೫ ॥**

**ಉತ್ಥಾಯ ಚಾಜಿರೇ ಪ್ರಾಪ್ತಾ ರೋಮಾಂಚಿತತನೂರುಹಾ ।**
**ಹರ್ಷವಿಹ್ವಲಿತಾಂಗ್ಯಶ್ರು ಮುಂಚಂತೀ ರಾಮಮೈಕ್ಷತ    ॥ ೧೬ ॥**

**ತಾವತ್ಸ ರಾಮೋ ರಾಜೇಂದ್ರೋ ನರಯಾನಮಧಿಶ್ರಿತಃ ।**
**ಪ್ರಾಪ್ತಸ್ಸ್ವಮಾತುರ್ಭವನಂ ಕೈಕೇಯಾಸ್ಸನಯಃ ಪುರಃ    ॥ ೧೭ ॥**

**ಕೈಕೇಯ್ಯಪಿ ತ್ರಪಾಭಾರನಮ್ರಾ ರಾಮಂ ಪುರಃ ಸ್ಥಿತಂ ।**
**ನೋವಾಚ ಕಿಂಚಿನ್ಮಹತೀಂ ಚಿಂತಾಂ ಪ್ರಾಪ್ತವತೀ ಮುಹುಃ    ॥ ೧೮ ॥**

**ಸೂರ್ಯವಂಶಧ್ವಜೋ ರಾಮೋ ಮಾತರಂ ವೀಕ್ಷ್ಯ ಲಜ್ಜಿತಾಂ ।**
**ಉವಾಚ ಸಾಂತ್ವಯಂಸ್ತಾಂ ಚ ವಾಕ್ಯೈರ್ವಿನಯಮಿಶ್ರಿತೈಃ    ॥ ೧೯ ॥**

---

೧೫. ಸುಮುಖನು ಹೇಳಿದ ಈ ಸತ್ಯವಚನವನ್ನು ಕೇಳಿ ಆಕೆಯು ಹೊಂದಿದ ಹರ್ಷವೆಷ್ಟೆಂಬುದನ್ನು ನಾನು ತಿಳಿಯಲಾರೆ.

೧೬. ಥಟ್ಟನೆ ಮೇಲೆದ್ದು ಅಂಗಳಕ್ಕೆ ಹೋಗಿ, ಸಂತೋಷದಿಂದ ರೋಮಾಂಚಿತಳಾಗಿ ರಾಮನನ್ನು ನೋಡಿ ಆನಂದಬಾಷ್ಪಗಳನ್ನು ಸುರಿಸುತ್ತಿದ್ದಳು.

೧೭. ಅಷ್ಟರಲ್ಲೇ ಈ ರಾಮನು ಪಲ್ಲಕ್ಕಿಯಲ್ಲಿ ಕುಳಿತು ತನ್ನ ತಾಯಿಯ ಮನೆಗೆ ಬಂದು ಕೈಕೇಯಿದೇವಿಯ ಮುಂದೆ ನಮ್ರನಾಗಿ ನಿಂತನು.

೧೮. ಆಗ ಕೈಕೇಯಿಯು ಲಜ್ಜೆಯಿಂದ ತಲೆತಗ್ಗಿಸಿಕೊಂಡು, ಎದುರಿಗಿರುವ ರಾಮನನ್ನು ಕುರಿತು ಯಾವ ಮಾತನ್ನೂ ಆಡದೆ ಮೌನವಾಗಿದ್ದಳು.

೧೯. ಸೂರ್ಯವಂಶಕ್ಕೆ ತಿಲಕಪ್ರಾಯನಾದ ರಾಮನು, ತಾಯಿಯು ಲಜ್ಜೆಗೊಂಡುದನ್ನು ನೋಡಿ ವಿನಯದಿಂದ ಆಕೆಯನ್ನು ಸಮಾಧಾನಪಡಿಸುತ್ತಾ ಇಂತೆಂದನು.

॥ ಶ್ರೀರಾಮ ಉವಾಚ ॥

ಮಾತರ್ಮಯಾ ವನಂ ಗತ್ವಾ ಸರ್ವಮಾಚರಿತಂ ತಥಾ ।
ಅಧುನಾ ಕರವೈ ಕಿಂ ವಾ ತ್ವದಾಜ್ಞಾಕೋ ಜನನ್ಯಹೋ ॥ ೨೦ ॥

ಮಯಾ ನ್ಯೂನಂ ಕೃತಂ ನಾಸ್ತಿ ಕಥಂ ಮಾಂ ನೇಕ್ಷಸೇ ಪುನಃ ।
ಆಶೀರ್ಭಿರಭಿನಂದ್ಯೈಸಂ ಭರತಂ ಮಾಂ ಚ ವೀಕ್ಷಯ ॥ ೨೧ ॥

ಇತಿ ಶ್ರುತ್ವಾಪಿ ತದ್ವಾಕ್ಯಂ ಸಾ ನಮ್ರವದನಾನಘ ।
ಶನೈಃ ಶನೈಃ ಪ್ರತ್ಯುವಾಚ ರಾಮ ಗಚ್ಛ ಸ್ವಮಾಲಯಂ ॥ ೨೨ ॥

ರಾಮೋಽಸ್ಯಾಃ ಕರ್ಣ್ಯ ವಚನಂ ಜನನ್ಯಾಃ ಪುರುಷೋತ್ತಮಃ ।
ನಮಸ್ಕೃತ್ಯ ಯಯೌ ಗೇಹಂ ಸುಮಿತ್ರಾಯಾಃ ಕೃಪಾನಿಧಿಃ ॥ ೨೩ ॥

ಸುಮಿತ್ರಾ ಪುತ್ರಸಹಿತಂ ರಾಮಂ ದೃಷ್ಟ್ವಾ ಮಹಾಮನಾಃ ।
ಚಿರಂ ಜೀವ ಚಿರಂ ಜೀವ ಹ್ಯಾಶೀರ್ಭಿರಿತಿ ಚಾಭ್ಯದಾತ್ ॥ ೨೪ ॥

---

೨೦-೨೧. ಶ್ರೀರಾಮನು ಹೇಳಿದನು:—ಅಮ್ಮಾ, ನಿನ್ನ ಅಪ್ಪಣೆಯಂತೆ ಕಾಡಿಗೆ ಹೋಗಿ ಎಲ್ಲವನ್ನೂ ಮಾಡಿಕೊಂಡು ಬಂದೆನು. ಈಗೇನು ಮಾಡಲಿ? ನೀನು ಹೇಳಿದ ಕೆಲಸಗಳಲ್ಲಿ ಯಾವುದನ್ನು ಮಾಡದೆ ಬಿಟ್ಟಿಲ್ಲ. ಆದರೂ ಏತಕ್ಕೆ ನನ್ನನ್ನು ನೋಡುವುದಿಲ್ಲ? ಭರತನಿಗೆ ಆಶೀರ್ವದಿಸಿ, ನನ್ನನ್ನು ನೋಡು ಎಂದು ಪ್ರಾರ್ಥಿಸಿದನು.

೨೨. ಈ ಮಾತನ್ನು ಕೇಳಿದರೂ ತಲೆಯನ್ನು ಬಗ್ಗಿಸಿಕೊಂಡೇ, ರಾಮ, ನಿನ್ನ ಮನೆಗೆ ಹೋಗು ಎಂದು ಮೆಲ್ಲಮೆಲ್ಲಗೆ ಹೇಳಿದಳು.

೨೩. ರಾಮನು ಆ ಕೈಕೇಯಿಯ ಮಾತನ್ನು ಕೇಳಿ ಆಕೆಗೆ ನಮಸ್ಕರಿಸಿ, ಸುಮಿತ್ರೆಯ ಮನೆಗೆ ಹೋದನು.

೨೪. ಸುಮಿತ್ರೆಯು ಲಕ್ಷ್ಮಣನೊಡನೆ ಬಂದ ರಾಮನನ್ನು ನೋಡಿ ಚಿರಂಜೀವಿಯಾಗು, ಚಿರಂಜೀವಿಯಾಗು ಎಂದು ಆಶೀರ್ವದಿಸಿದಳು.

ಮಾತುಶ್ಚ ರಾಮಭದ್ರೋऽಪಿ ಚರಣೌ ಪ್ರಣಿಪತ್ಯ ಚ ।
ಪರಿಷ್ವಜ್ಯ ಮುದಾ ಯುಕ್ತೋ ಜಗಾದ ವಚನಂ ಪುನಃ ॥ ೨೫ ॥

ರತ್ನಗರ್ಭೇ ಮಮ ಭ್ರಾತ್ರಾ ಕೇನಾಪಿ ನ ಕೃತಂ ತಥಾ ।
ಯಥಾಯಮಕರೋದ್ಧೀಮಾನ್ ಮಮ ದುಃಖಾಪನೋದನಃ ॥ ೨೬ ॥

ರಾವಣೇನ ಹೃತಾ ಸೀತಾ ಮಯಾ ಯತ್ಪ್ರಾಪ್ಯತೇ ಪುನಃ ।
ಮಾತಸ್ತತ್ಸರ್ವಮಾವಿದ್ಧಿ ಲಕ್ಷ್ಮಣಸ್ಯ ವಿಚೇಷ್ಟಿತಂ ॥ ೨೭ ॥

ದತ್ತಾಮಾಶಿಷಮಾಗೃಹ್ಯ ಶಿರಸಾಯಂ ಸುಮಿತ್ರಯಾ ।
ಮಾತುರ್ನಿಜಾಯಾ ಭವನಂ ಪ್ರಯಯೌ ವಿಬುಧೈರ್ಯುತಃ ॥ ೨೮ ॥

ಮಾತರಂ ವೀಕ್ಷ್ಯ ತೃಷಿತಾಂ ನಿಜದರ್ಶನಲಾಲಸಾಂ ।
ಸ್ವಯಾನಾದವರುಹ್ಯಾಶು ಚರಣಾವಗ್ರಹೀದ್ಧರಿಃ ॥ ೨೯ ॥

---

೨೫. ಆ ತಾಯಿಗೂ ರಾಮನು ನಮಸ್ಕರಿಸಿ ಸಂತೋಷದಿಂದ ಆಲಿಂಗಿತನಾಗಿ ಇಂತೆಂದನು.

೨೬. ಪ್ರಪಂಚದಲ್ಲಿಯೇ ಇನ್ನಾರೂ ಸೇವಿಸದ ರೀತಿಯಿಂದ ಈ ಸಹೋದರನು ನನ್ನನ್ನು ಸೇವಿಸಿದನು, ನನ್ನ ದುಃಖಗಳನ್ನು ನಾಶಮಾಡಿದನು.

೨೭. ರಾವಣನು ಕದ್ದುಕೊಂಡುಹೋದ ಸೀತೆಯನ್ನು ಪುನಃ ಸಿಕ್ಕುವಂತೆ ಮಾಡಿದನು. ಅದೆಲ್ಲವೂ ಲಕ್ಷ್ಮಣನ ಕೆಲಸವೆಂದು ತಿಳಿಯಮ್ಮ. ಎಂದು ಹೇಳಿ,

೨೮. ಸುಮಿತ್ರೆಯು ಮಾಡಿದ ಆಶೀರ್ವಚನಗಳನ್ನು ಶಿರಸಾವಹಿಸಿ ಬಳಿಕ ತನ್ನ ಸ್ವಂತ ತಾಯಿಯಾದ ಕೌಸಲ್ಯೆಯ ಬಳಿಗೆ ಹೊರಟನು.

೨೯. ತನ್ನ ದರ್ಶನವನ್ನೇ ಎದುರುನೋಡುತ್ತಾ ತನ್ನ ಆಗಮನದಿಂದ ಸಂತೋಷಪಟ್ಟ ತಾಯಿಯನ್ನು ನೋಡಿ, ತನ್ನ ಯಾನದಿಂದಿಳಿದು ಆಕೆಯ ಪಾದಗಳಿಗೆ ನಮಸ್ಕರಿಸಿದನು.

ಮಾತಾ ತದ್ದರ್ಶನೋತ್ಕಂಠಾವಿಹ್ವಲೀಕೃತಮಾನಸಾ ।
ಪರಿಷ್ವಜ್ಯ ಪರಿಷ್ವಜ್ಯ ರಾಮಂ ಮುದಮವಾಪ ಸಾ ॥ ೩೦ ॥

ಶರೀರೇ ರೋಮಹರ್ಷೋಽಭೂದ್ಗದ್ಗದಾ ವಾಗಭೂತ್ತದಾ ।
ಹರ್ಷಾಶ್ರೂಣಿ ತು ಸೋಷ್ಣಾನಿ ಪ್ರವಾಹಂ ಪ್ರಾಪುರಾಪದಂ ॥ ೩೧ ॥

ಜನನೀಂ ವೀಕ್ಷ್ಯ ವಿನಯೀ ತಾಟಂಕದ್ವಯವರ್ಜಿತಾಂ ।
ಕರಾಕಲ್ಪಪದಾಕಲ್ಪರಹಿತಾಂ ಬಿಭ್ರತೀಂ ತನುಂ ॥ ೩೨ ॥

ಕಿಂಚಿತ್ಸ್ವದರ್ಶನಾದ್ಧೃಷ್ಟಾಂ ಕೃಶಾಂಗೀಂ ತಾಂ ಸಶೋಕಭಾಕ್ ।
ದುಃಖಸ್ಯ ಸಮಯೋ ನಾಯಮಿತಿ ಮತ್ವಾ ಜಗಾದ ತಾಂ ॥ ೩೩ ॥

॥ ಶ್ರೀರಾಮ ಉವಾಚ ॥

ಮಾತರ್ಮಯಾ ತ್ವಚ್ಚರಣೌ ಚಿರಕಾಲಂ ನ ಸೇವಿತೌ ।
ತತ್ಕ್ಷಮಸ್ವಾಪರಾಧಂ ವೈ ಭಾಗ್ಯಹೀನಸ್ಯ ಮಾಮಕಂ ॥ ೩೪ ॥

---

೩೦. ಆ ರಾಮನ ದರ್ಶನದಲ್ಲಿ ಆಸೆಯನ್ನಿಟ್ಟುಕೊಂಡು ತವಕಪಡುತ್ತಿದ್ದ ಆಕೆಯು ರಾಮನನ್ನು ಬಾರಿಬಾರಿಗೂ ಆಲಿಂಗಿಸಿ ಸಂತೋಷಗೊಂಡಳು.

೩೧. ಶರೀರದಲ್ಲಿ ರೋಮಾಂಚವಾಯಿತು. ಮಾತು ಗದ್ಗದವಾಯಿತು. ಹರ್ಷದ ಕಣ್ಣೀರು ಪ್ರವಾಹವಾಗಿ ಹರಿಯಿತು.

೩೨. ರಾಮನೂ ಸಹ ಕಿವಿಗೆ ಓಲೆ, ಕೈಬಳೆ, ಕಾಲಿಗೆ ನೂಪುರಗಳಿಲ್ಲದ ಆಕೆಯ ಬಡಶರೀರವನ್ನು ನೋಡಿದನು.

೩೩. ತನ್ನ ದರ್ಶನದಿಂದ ಸ್ವಲ್ಪ ಸಂತುಷ್ಟಳಾದರೂ ಕೃಶವಾದ ಶರೀರವುಳ್ಳ ಆಕೆಯನ್ನು ನೋಡಿ ಇದು ದುಃಖದ ಕಾಲವಲ್ಲವೆಂದು ತಿಳಿದು ಇಂತೆಂದನು.

೩೪. ಶ್ರೀರಾಮನು ಹೇಳಿದನು :—ಅಮ್ಮ, ನಿನ್ನ ಪಾದಗಳನ್ನು ಬಹು ಕಾಲದಿಂದ ಸೇವಿಸಲೇ ಇಲ್ಲ. ಆ ನನ್ನ ತಪ್ಪನ್ನು ಕ್ಷಮಿಸಮ್ಮ.

**ಯೇ ಪುತ್ರಾ ಮಾತಾಪಿತ್ರೋರ್ಹಿ ನ ಶುಶ್ರೂಷಾ ಸಮುತ್ಸುಕಾಃ ।**
**ತೇ ಮಂತವ್ಯಾ ನರಾ ಮಾತಃ ಕೀಟಕಾರೇತಸೋ ಭವಾಃ ॥ ೩೫ ॥**

**ಕಿಂ ಕುರ್ವೇ ಜನಕಾಜ್ಞಾತೋ ಗತೋ ವೈ ದಂಡಕಂ ವನಂ ।**
**ತತ್ರಾಪಿ ತ್ವತ್ಕೃಪಾಪಾಂಗಾದ್ದುಃಖಂ ತೀರ್ಣೋsಸ್ಮಿ ದುಸ್ತರಂ ॥ ೩೬ ॥**

**ರಾವಣೇನ ಹೃತಾ ಸೀತಾ ಲಂಕಾಯಾಂ ಗಮಿತಾ ಪುನಃ ।**
**ತ್ವತ್ಕೃಪಾತೋ ಮಯಾ ಲಬ್ಧಾ ತಂ ಹತ್ವಾ ರಾಕ್ಷಸೇಶ್ವರಂ ॥ ೩೭ ॥**

**ಸೀತೇಯಂ ತ್ವಚ್ಚರಣಯೋಃ ಪತಿತಾ ವೈ ಪತಿವ್ರತಾ ।**
**ಸಂಭಾವಯಾಶು ಚಕಿತಾಂ ತ್ವತ್ಪಾದಾರ್ಪಿತಮಾನಸಾಂ ॥ ೩೮ ॥**

**ಇತಿ ಶ್ರುತ್ವಾ ತು ತದ್ವಾಕ್ಯಂ ಪಾದಯೋಃ ಪತಿತಾಂ ಸ್ನುಷಾಂ ।**
**ಆಶೀರ್ಭಿರಭಿಯುಜ್ಯೈನಾಂ ಬಭಾಷೇ ತಾಂ ಪತಿವ್ರತಾಂ ॥ ೩೯ ॥**

**ಸೀತೆ ಸ್ವಪತಿನಾ ಸಾರ್ಧಂ ಚಿರಂ ವಿಲಸ ಭಾಮಿನಿ ।**
**ಪುತ್ರೌ ಪ್ರಸೂಯ ಚ ಕುಲಂ ಸ್ವಕಂ ಪಾವಯ ಪಾವನೇ ॥ ೪೦ ॥**

---

೩೫. ಯಾರು ತಾಯಿತಂದೆಗಳ ಶುಶ್ರೂಷೆಯಲ್ಲಿ ಆಸೆಪಡುವುದಿಲ್ಲವೋ ಅವರನ್ನು ರೇತಸ್ಸಿನಿಂದ ಹುಟ್ಟಿದ ಹುಳುಗಳೆಂದು ತಿಳಿಯಬೇಕು.

೩೬. ಏನು ಮಾಡಲಿ ? ತಂದೆಯ ಅಪ್ಪಣೆಯಂತೆ ದಂಡಕಾವನಕ್ಕೆ ಹೋದೆನು. ಅಲ್ಲೂ ಕೂಡ ನಿನ್ನ ಕೃಪಾಕಟಾಕ್ಷದಿಂದಲೇ ದುಃಖದಿಂದ ಪಾರಾದೆನು.

೩೭. ರಾವಣನು ಸೀತೆಯನ್ನು ಕದ್ದುಕೊಂಡು ಲಂಕೆಗೆ ಹೋದನು. ನಿನ್ನ ಕೃಪೆಯಿಂದ ಆ ರಾಕ್ಷಸನನ್ನು ಕೊಂದು ಸೀತೆಯನ್ನು ಮತ್ತೆ ತಂದೆನು.

೩೮. ಪತಿವ್ರತೆಯಾದ ಈ ಸೀತೆಯು ನಿನ್ನ ಚರಣಗಳಿಗೆ ನಮಸ್ಕರಿಸುತ್ತಿದ್ದಾಳೆ. ನಿನ್ನ ಪಾದಸೇವೆ ಮಾಡುವ ಆಕೆಯನ್ನು ಆದರಿಸು ಎನ್ನಲು,

೩೯-೪೦. ಈ ಮಾತನ್ನು ಕೇಳಿ ಪಾದಗಳ ಮೇಲೆ ಬಿದ್ದಿರುವ ಸೊಸೆಯನ್ನು ಆಶೀರ್ವದಿಸಿ ಅಮ್ಮ, ಸೀತೆ, ನೀನು ನಿನ್ನ ಗಂಡನೊಡನೆ ಬಹುಕಾಲ ಬಾಳು. ಇಬ್ಬರು ಪುತ್ರರನ್ನು ಹೆತ್ತು ನಿನ್ನ ಕುಲವನ್ನು ಪಾವನವನ್ನಾಗಿ ಮಾಡು.

ತ್ವತ್ಸದೃಶ್ಯಃ ಪತಿಪರಾಃ ಪತಿದುಃಖಸುಖಾನುಗಾಃ ।
ಭವಂತಿ ದುಃಖಭಾಗಿನ್ಯೋ ನ ಹಿ ಸತ್ಯಂ ಜಗತ್ತ್ರಯೇ ॥ ೪೧ ॥

ಕಿಂ ಚಿತ್ರಂ ಯತ್ಸುಮಾಂಸಸ್ತು ವೈರಿಕೋಟಿಪ್ರಭಂಜನಾಃ ।
ಯೇಷಾಂ ಗೇಹೇ ಸತೀ ಭಾರ್ಯಾ ಸ್ವಪತಿಪ್ರಿಯವಾಂಛಿಕಾ ॥ ೪೨ ॥

ವಿದೇಹಪುತ್ರಿ ಸ್ವಕುಲಂ ತ್ವಯಾ ಪಾವಿತಮಾತ್ಮನಾ ।
ರಾಮಪಾದಾಬ್ಜಯುಗಳಮನುಯಾಂತ್ಯಾ ಮಹಾತ್ಮನಃ ॥ ೪೩ ॥

ಇತ್ಯುಕ್ತ್ವಾ ರಘುನಾಥಸ್ಯ ಭಾರ್ಯಾಮಂಚಿತಲೋಚನಾಂ ।
ತೂಷ್ಣೀಂ ಬಭೂವ ಹೃಷ್ಟಾ ಸಾ ಸಮುದ್ಗತತನೂರುಹಾ ॥ ೪೪ ॥

ಅಥ ಭ್ರಾತಾಸ್ಯ ಭರತಃ ಪಿತೃದತ್ತಂ ನಿಜಂ ಮಹತ್ ।
ರಾಜ್ಯಂ ನಿವೇದಯಾಮಾಸ ರಾಮಚಂದ್ರಾಯ ಧೀಮತೇ ॥ ೪೫ ॥

---

೪೧. ಎಲೈ ಸೀತೆಯೇ, ಪತಿಪರವಾಗಿ ಪತಿಯ ಕಷ್ಟಸುಖಗಳಲ್ಲಿ ಸೇರಿ ದುಃಖ ಹೊಂದಿದವರು ಮೂರು ಲೋಕದಲ್ಲಿಯೂ ಇಲ್ಲ. ಇದು ಸತ್ಯವು.

೪೨. ಯಾರ ಮನೆಯಲ್ಲಿ ಗಂಡನಿಗೆ ಪ್ರಿಯವನ್ನೇ ಅಪೇಕ್ಷಿಸುವ ಸತಿಯರಿರುವರೋ ಆ ಮನೆಯಲ್ಲಿ ಗಂಡಸರು ಕೋಟಿ ವೈರಿಗಳನ್ನಾದರೂ ನಾಶಮಾಡುತ್ತಾರೆಂಬುದರಲ್ಲಿ ಆಶ್ಚರ್ಯವೇನಿದೆ ?

೪೩. ಎಲೈ ವಿದೇಹರಾಜಪುತ್ರಿಯೇ, ರಾಮಪಾದಗಳನ್ನು ಅನುಸರಿಸುತ್ತಿರುವ ನೀನು ನಿನ್ನ ಕುಲವನ್ನು ಪವಿತ್ರವನ್ನಾಗಿ ಮಾಡಿದೆ. ಎಂದು ಸೀತೆಯನ್ನು ಸಾಂತ್ವವಚನಗಳಿಂದ ಸಮಾಧಾನಪಡಿಸಿದಳು.

೪೪. ಇದನ್ನು ಕೇಳಿ ಸೀತೆಯು, ಸಂತೋಷದಿಂದ ಕಣ್ಣುಗಳರಳಲು, ರೋಮಾಂಚಿತಳಾಗಿ ಗೌರವದಿಂದ ಏನನ್ನೂ ಹೇಳದೆ ಸುಮ್ಮನಿದ್ದಳು.

೪೫. ಆ ಮೇಲೆ ಸಹೋದರನಾದ ಭರತನು ತಂದೆಯು ಕೊಟ್ಟಿದ್ದ ರಾಜ್ಯವನ್ನು ರಾಮಚಂದ್ರನಿಗೆ ಅರ್ಪಿಸಿದನು.

ಮಂತ್ರಿಣಸ್ತೇ ಪ್ರಹೃಷ್ಟಾಂಗಾ ದೈವಜ್ಞಾನ್ ಮಂತ್ರಕೋವಿದಾನ್ ।
ಆಹೂಯ ಮುಹೂರ್ತಂ ಪಪ್ರಚ್ಛುಃ ಪದಸ್ಯ ಪರಮೇಷ್ಠಿನಃ ॥ ೪೬ ॥

ಶುಭೇ ಮುಹೂರ್ತೇ ಸುದಿನೇ ಶುಭನಕ್ಷತ್ರಸಂಯುತೇ ।
ಅಭಿಷೇಕಂ ಮುದಾ ರಾಜ್ಞಃ ಕಾರಯಾಮಾಸುರುದ್ಯತಾಃ ॥ ೪೭ ॥

ಸಪ್ತದ್ವೀಪವತೀಂ ಪೃಥ್ವೀಂ ವ್ಯಾಘ್ರಚರ್ಮಣಿ ಸುಂದರೇ ।
ಲಿಖಿತ್ವೋಪರಿ ರಾಜೇಂದ್ರೋ ಮಹಾರಾಜೋಽಧಿತಸ್ಥಿವಾನ್ ॥ ೪೮ ॥

ತದ್ದಿನಾದೇವ ಸಾಧೂನಾಂ ಮನಾಂಸಿ ಪ್ರಮುದಂ ಯಯುಃ ।
ದುಷ್ಟಾನಾಂ ಚೇತಸೋ ಗ್ಲಾನಿರಭವತ್ಪರಿತಾಪಿನಾಂ ॥ ೪೯ ॥

ಸ್ತ್ರಿಯಸ್ತು ಪತಿಭಕ್ತ್ಯಾ ಚ ಪತಿವ್ರತಪರಾಯಣಾಃ ।
ಮನಸಾಪಿ ಕದಾ ಪಾಪಂ ನಾಚರಂತಿ ಕದಾ ಮುನೇ ॥ ೫೦ ॥

---

೪೬. ಆಗ ಮಂತ್ರಿಗಳು ಸಂತುಷ್ಟರಾಗಿ ಜ್ಯೋತಿಷ್ಕರನ್ನು ಕರೆದು, ರಾಜ್ಯಾಭಿಷೇಕವನ್ನು ಮಾಡಲು ಒಳ್ಳೆಯ ಮುಹೂರ್ತವನ್ನು ತಿಳಿಸಿರೆಂದು ಅವರನ್ನು ಕೇಳಿದರು. ಅವರ ಮಾತಿನಂತೆ,

೪೭. ಒಳ್ಳೆಯ ದಿನದಲ್ಲಿ, ಒಳ್ಳೆಯ ಮುಹೂರ್ತದಲ್ಲಿ, ಒಳ್ಳೆಯ ನಕ್ಷತ್ರವಿರುವಾಗ, ಆ ರಾಮನಿಗೆ ಸಂತೋಷದಿಂದ ರಾಜ್ಯಾಭಿಷೇಕಮಾಡಿದರು.

೪೮. ಸಪ್ತದ್ವೀಪಗಳ ಮಧ್ಯವರ್ತಿಯಾದ ಭೂಮಿಯನ್ನು ಚೆನ್ನಾಗಿರುವ ಒಂದು ಹುಲಿಯ ಚರ್ಮದ ಮೇಲೆ ಬರೆಸಿ, ಅದರ ಮೇಲೆ ರಾಮಚಂದ್ರನು ಕುಳಿತನು.

೪೯. ಅಂದಿನಿಂದಲೇ ಸಾಧುಗಳ ಮನಸ್ಸು ಸಂತೋಷಗೊಂಡಿತು. ದುಷ್ಟರ ಮನಸ್ಸು ದುಃಖಗೊಂಡಿತು.

೫೦. ಸ್ತ್ರೀಯರು ಪತಿಭಕ್ತಿಯಿಂದ ಪತಿಯ ಶುಶ್ರೂಷೆಯನ್ನು ಮಾಡುತ್ತಿದ್ದರು. ಮನಸ್ಸಿನಿಂದಲೂ ಪಾಪಮಾಡುತ್ತಿರಲಿಲ್ಲ.

ದೈತ್ಯಾ ದೇವಾಸ್ತಥಾ ನಾಗಾ ಯಕ್ಷಾಸುರಮಹೋರಗಾಃ ।
ಸರ್ವೇ ನ್ಯಾಯಪಥೇ ಸ್ಥಿತ್ವಾ ರಾಮಾಜ್ಞಾಂ ಶಿರಸಾ ದಧುಃ ॥ ೫೧ ॥

ಪರೋಪಕಾರಣೇ ಯುಕ್ತಾಃ ಸ್ವಧರ್ಮಸುಖನಿರ್ವೃತಾಃ ।
ವಿದ್ಯಾವಿನೋದಗಮಿತಾ ದಿನರಾತ್ರಿಶುಭೇಕ್ಷಣಾಃ ॥ ೫೨ ॥

ವಾತೋಽಪಿ ಮಾರ್ಗಸಂಸ್ಥಾನಾಂ ಚಲನ್ನಾಹರತೇ ಮಹಾನ್ ।
ವಾಸಾಂಸ್ಯಪಿ ತು ಸೂಕ್ಷ್ಮಾಣಿ ತತ್ರ ಚೌರಕಥಾ ನ ಹಿ ॥ ೫೩ ॥

ಧನದೋ ಹ್ಯರ್ಥಿನಾಂ ರಾಮಃ ಕರುಣಸ್ತು ಕೃಪಾನಿಧಿಃ ।
ಭ್ರಾತೃಭಿಸ್ಸಹಿತೋ ನಿತ್ಯಂ ಗುರುದೇವಸ್ತುತಿಂ ವ್ಯಧಾತ್ ॥ ೫೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಘುನಾಥರಾಜ್ಯಾಭಿಷೇಕೋ ನಾಮ ಚತುರ್ಥೋಽಧ್ಯಾಯಃ

---

೫೧. ದೈತ್ಯರು, ದೇವತೆಗಳು, ನಾಗರು, ಯಕ್ಷರು, ಅಸುರರು, ಉರಗರು, ಎಲ್ಲರೂ, ನ್ಯಾಯರೀತಿಯಲ್ಲಿರುತ್ತಾ, ರಾಮಾಜ್ಞೆಯನ್ನು ಶಿರಸ್ಸಿನಿಂದ ನಡೆಸಿದರು.

೫೨. ಜನರು ಪರೋಪಕಾರದಲ್ಲಿ ನಿರತರಾಗಿ, ಸ್ವಧರ್ಮಸುಖವನ್ನು ಅನುಭವಿಸುತ್ತಾ, ವಿದ್ಯೆಯಲ್ಲಿಯ ವಿನೋದದಲ್ಲಿ ಮನಸ್ಸಿಡುತ್ತಾ, ಹಗಲಿರುಳೂ ಶುಭವನ್ನೇ ನೋಡುತ್ತಿದ್ದರು.

೫೩. ಆ ರಾಮರಾಜ್ಯದಲ್ಲಿ ಗಾಳಿಯೂ ಕೂಡ ದಾರಿಯಲ್ಲಿ ಹೋಗುತ್ತಿರುವವರ ಸೂಕ್ಷ್ಮವಾದ ಬಟ್ಟೆಗಳನ್ನು ಹಾರಿಸುತ್ತಿರಲಿಲ್ಲ. ಹೀಗಿರುವಲ್ಲಿ ಆ ಜಾಗದಲ್ಲಿ ಕಳ್ಳರ ಕಥೆಯಲ್ಲಿಂದ ಬಂದೀತು?

೫೪. ರಾಮನು ಯಾಚಕರಿಗೆ ಕುಬೇರನಂತಾದನು. ದಯೆಯನ್ನು ಅಪೇಕ್ಷಿಸುವವರಿಗೆ ಕೃಪಾಕರನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮರಾಜ್ಯಾಭಿಷೇಕವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚಮೋಽಧ್ಯಾಯಃ

---

॥ ಶೇಷ ಉವಾಚ ॥

ಅಥಾಭಿಷಿಕ್ತಂ ರಾಮಂ ತು ತುಷ್ಟುವುಃ ಪ್ರಣತಾಃ ಸುರಾಃ ।
ರಾವಣಾಭಿಧದೈತ್ಯೇಂದ್ರವಧಹರ್ಷಿತಮಾನಸಾಃ ॥ ೧ ॥

॥ ದೇವಾ ಊಚುಃ ॥

ಜಯ ದಾಶರಥೇ ಸುರಾರ್ತಿಹರ
ಜಯತಾದ್ದಾನವವಂಶದಾಹಕ ।
ಜಯ ದೇವವರಾಂಗನಾಗಣ-
ವ್ಯಪಕರ್ಷಾಧಿಕರಾರಿದಾರಕ ॥ ೨ ॥

---

## ಐದನೆಯ ಅಧ್ಯಾಯವು

೧. ಶೇಷನು ಹೇಳಿದನು :—ರಾವಣನ ವಧೆಯಿಂದ ಸಂತುಷ್ಟರಾದ ದೇವತೆಗಳು ರಾಜ್ಯಾಭಿಷಿಕ್ತನಾದ ರಾಮನನ್ನು ನಮಸ್ಕರಿಸಿ ಹೊಗಳಿದರು.

೨. ದೇವತೆಗಳು ಹೀಗೆ ಸ್ತೋತ್ರಮಾಡಿದರು :—ಸುರರ ದುಃಖವನ್ನು ನಾಶ ಮಾಡಿದ ದಾಶರಥಿಯೇ, ನಿನಗೆ ಜಯವಾಗಲಿ. ದಾನವವಂಶದಾಹಕನೇ ನಿನಗೆ ಜಯವಾಗಲಿ. ದೇವತೆಗಳ ಸ್ತ್ರೀಯರನ್ನು ಎಳೆಯುತ್ತಿದ್ದ ರಾವಣನ ಕೈಯನ್ನು ನಾಶಪಡಿಸಿದ ರಾಮನೇ, ನಿನಗೆ ಜಯವಾಗಲಿ.

ತವ ಯುದ್ಧಮುಜೇಂದ್ರನಾಶನಂ
ಕವಯಸ್ತ್ವತ್ಕಥಯಸ್ತು ಚೋತ್ಸುಕಾಃ ।
ಪ್ರಳಯೇ ಜಗತಾಂ ತತೀಃ ಪುನ-
ರ್ಗ್ರಸಸೇ ತ್ವಂ ಭುವನೇಶ ಲೀಲಯಾ ॥ ೩ ॥

ಜಯ ಜನ್ಮಜರಾದಿದುಃಖಕೈಃ
ಪರಿಮುಕ್ತ ಪ್ರಬಲೋದ್ಧರೋದ್ಧರ ।
ಜಯ ಘರ್ಮಕರಾನ್ವಯಾಂಬುಧೌ
ಕೃತಜನ್ಮನ್ನಜರಾಮರಾಚ್ಯುತ ॥ ೪ ॥

ತವ ದೇವವರಸ್ಯ ನಾಮಭಿ-
ರ್ಬಹುಪಾಪಾಶ್ಚ ಗತಾಃ ಪವಿತ್ರತಾಂ ।
ಕಿಮು ಸಾಧುದ್ವಿಜವರ್ಯಪೂರ್ವಕಾಃ
ಸುತನುಂ ಮಾನುಷತಾಮುಪಾಗತಾಃ ॥ ೫ ॥

ಹರವಿರಿಂಚಿನುತಂ ತವ ಪಾದಯೋ-
ರ್ಯುಗಲಮೀಪ್ಸಿತಕಾಮಸಮೃದ್ಧಿದಂ ।

---

೩. ನೀನು ಮಾಡಿದ ರಾಕ್ಷಸವಧೆಯನ್ನು ಕವಿಗಳು ಆಸೆಪಟ್ಟು ವರ್ಣಿಸುತ್ತಾರೆ. ಎಲೈ ಭುವನೇಶನೇ, ನೀನು ಪ್ರಳಯಕಾಲದಲ್ಲಿ ಜಗತ್ತೆಲ್ಲವನ್ನೂ ತಿಂದು ಹಾಕುತ್ತೀಯೆ.

೪. ನೀನು ಹುಟ್ಟುಸಾವುಗಳಿಂದ ರಹಿತನಾದವನು. ಸಾಮರ್ಥ್ಯವುಳ್ಳವನು. ಸೂರ್ಯವಂಶದಲ್ಲಿ ಹುಟ್ಟಿದವನು. ಜರಾಮರಣವಿಲ್ಲದ ನಾಶರಹಿತನು. ಇಂತಹ ನಿನಗೆ ಜಯವಾಗಲಿ.

೫. ದೇವಶ್ರೇಷ್ಠನಾದ ನಿನ್ನ ಹೆಸರನ್ನು ಉಚ್ಚರಿಸುವುದರಿಂದ ಬಹುಜನ ಪಾಪಿಗಳೂ ಕೂಡ ಶುದ್ಧರಾಗುವರು. ಒಳ್ಳೆಯ ಈ ಮನುಷ್ಯದೇಹವನ್ನು ಹೊಂದಿರುವ ಸಾಧುಗಳು, ದ್ವಿಜಶ್ರೇಷ್ಠರು ಇವರ ವಿಚಾರದಲ್ಲಿ ಹೇಳತಕ್ಕದ್ದೇನಿದೆ ?

೬. ನಿನ್ನ ಪಾದಯುಗ್ಮವನ್ನು ಬ್ರಹ್ಮ, ಶಿವರೂ, ಸ್ತುತಿಸುತ್ತಾರೆ. ಹಾಗೆ ಮಾಡಿದರೆ ಇಷ್ಟವಾದುದನ್ನು ಅದು ಕೊಡುತ್ತದೆ. ಹೃದಯದಲ್ಲಿ ಪವಿತ್ರವಾದ

ಹೃದಿ ಪವಿತ್ರಯವಾದಿಕಚಿಹ್ನಿತೈಃ
ಸುರಚಿತಂ ಮನಸಾ ಸ್ಪೃಹಯಾಮ ತೇ ॥ ೬ ॥

ಯದಿ ಭವಾನ್ನ ದಧಾತ್ಯಭಯಂ ಭುವೋ
ಮದನಮೂರ್ತಿತಿರಸ್ಕರಕಾಂತಿಭೃತ್ ।
ಸುರಗಣಾಶ್ಚ ಕಥಂ ಸುಖಿನಃ ಪುನ-
ರ್ನನು ಭವಂತಿ ಘೃಣಾಮಯ ಪಾವನ ॥ ೭ ॥

ಯದಾ ಯದಾಸ್ಮಾನ್ ದನುಜಾ ಹಿ ದುಃಖದಾ-
ಸ್ತದಾ ತದಾ ತ್ವಂ ಭುವ ಜನ್ಮಭಾಗ್ಭವ ।
ಅಜೋಽವ್ಯಯೋಽಪಿ ಪ್ರವರೋಽಪಿ ಸನ್ವಿಭೋ'
ಸ್ವಭಾವಮಾಸ್ಥಾಯ ನಿಜಂ ನಿಜಾರ್ಚಿತಃ ॥ ೮ ॥

ಮೃತಸುಧಾಸದೃಶೈರಘನಾಶನೈಃ
ಸುಚರಿತೈರವಕೀರ್ಯ ಮಹೀತಳಂ ।
ಅಮನುಜೈರ್ಗುಣಶಂಸಿಭಿರೀಡಿತ
ಸ್ತ್ವಮತ ಆಶು ಪುನಃ ಪ್ರವಿಶೇಃ ಪದಂ ॥ ೯ ॥

---

ಯವಾದಿ ಚಿಹ್ನೆಗಳಿಂದ ಅಲಂಕೃತವಾದ ಆ ಪಾದಯುಗಳವನ್ನು ಮನಃಪೂರ್ವಕವಾಗಿ ಸೇವಿಸಲಪೇಕ್ಷಿಸುತ್ತೇವೆ.

೭. ಎಲೈ ಕರುಣಾಮಯನೇ, ಮನ್ಮಥನಿಗಿಂತ ಅಧಿಕವಾದ ಕಾಂತಿಯುಳ್ಳ ನೀನು ಭೂಮಿಗೆ ಅಭಯವನ್ನು ಕೊಡದಿದ್ದರೆ ದೇವತೆಗಳು ಹೇಗೆ ಸುಖಿಗಳಾಗುವರು?

೮. ಯಾವಾಗ ರಾಕ್ಷಸರು ನಮಗೆ ದುಃಖಕೊಡುವರೋ ಆಗ ಭೂಮಿಯಲ್ಲಿ ನೀನು ಅವತರಿಸು. ನೀನು ಜನ್ಮಮೃತ್ಯುಜರಾರಹಿತನಾದರೂ ಆಯಾ ಸ್ವರೂಪಕ್ಕೆ ತಕ್ಕಂತೆ ಇದ್ದು ಪೂಜಿತನಾಗು.

೯. ಬೇಯಿಸಿದ ಸುಣ್ಣದಂತೆ ಶುಭ್ರವಾಗಿಯೂ, ಪಾಪನಾಶಕವಾಗಿಯೂ ಇರುವ ನಿನ್ನ ಚರಿತ್ರೆಯಿಂದ ಭೂಮಿಯನ್ನು ವ್ಯಾಪಿಸು. ಗುಣಿಗಳಾದ ದೇವತೆಗಳಿಂದ ಕೇಳಲ್ಪಟ್ಟು, ಪುನಃ ನಿನ್ನ ಜಾಗವನ್ನು ಹೊಂದು.

ಅನಾದಿರಾದ್ಯೋಽಜರರೂಪಧಾರೀ
ಹಾರೀ ಕಿರೀಟೀ ಮಕರಧ್ವಜಾಭಃ ।
ಜಯಂ ಕರೋತು ಪ್ರಸಭಂ ಹತಾರಿಃ
ಸ್ಮರಾರಿಸಂಸೇವಿತಪಾದಪದ್ಮಃ ॥ ೧೦ ॥

ಇತ್ಯುಕ್ತ್ವಾ ತೇ ಸುರಾಸ್ಸರ್ವೇ ಬ್ರಹ್ಮೇಂದ್ರಪ್ರಮುಖಾ ಮುಹುಃ ।
ಪ್ರಣೇಮುರರಿನಾಶೇನ ಪ್ರಣತಾ ರಘುನಾಯಕಂ ॥ ೧೧ ॥

ಇತಿ ಸ್ತುತ್ಯಾತಿಸಂಹೃಷ್ಟೋ ರಘುನಾಥೋ ಮಹಾಯಶಾಃ ।
ಪ್ರೋವಾಚ ತಾನ್ಸುರಾನ್ವೀಕ್ಷ್ಯ ಪ್ರಣತಾನ್ನತಕಂಧರಾನ್ ॥ ೧೨ ॥

॥ ಶ್ರೀರಾಮ ಉವಾಚ ॥

ಸುರಾ ವೃಣುತ ಮೋ ಯೂಯಂ ವರಂ ಕಂಚಿತ್ಸುದುರ್ಲಭಂ ।
ಯಂ ಕೋಽಪಿ ದೇವೋ ದನುಜೋ ನ ಯಕ್ಷಃ ಪ್ರಾಪಸೋದರಃ ॥ ೧೩ ॥

---

೧೦. ಆದ್ಯಂತರಹಿತನೂ, ಮರಣರಹಿತನೂ, ಹಾರ ಕಿರೀಟಗಳನ್ನು ಧರಿಸಿರುವವನೂ ಮತ್ತು ಮನ್ಮಥನಂತಿರುವ ಶಿವನಿಂದ ಪಾದಸೇವೆಯನ್ನು ಕೈಗೊಳ್ಳುವವನೂ, ಶತ್ರುರಹಿತನೂ ಆದ ಸ್ವಾಮಿಯು ನಮಗೆ ಜಯವನ್ನು ನೀಡಲಿ.

೧೧. ಬ್ರಹ್ಮ ಇಂದ್ರರೇ ಮೊದಲಾದ ದೇವತೆಗಳು ಹೀಗೆ ಸ್ತೋತ್ರಮಾಡಿ, ಶತ್ರುನಾಶದಿಂದ ಸಂತುಷ್ಟರಾಗಿ ರಘುರಾಮನನ್ನು ನಮಸ್ಕರಿಸಿದರು.

೧೨. ಈ ಸ್ತುತಿಯಿಂದ ಸಂತುಷ್ಟನಾದ ರಘುನಾಯಕನು ನಮಸ್ಕರಿಸುತ್ತಿರುವವರನ್ನು ನೋಡಿ ಇಂತೆಂದನು.

೧೩. ಶ್ರೀರಾಮನು ಹೇಳಿದನು:—ಎಲೈ ದೇವತೆಗಳೇ, ನೀವು ನಿಮಗೆ ಬೇಕಾದ ವರವನ್ನು ಕೇಳಿ. ಅದು ದೇವತೆಗಳು, ಮನುಜರು, ಯಕ್ಷರು, ಸಹೋದರರು ಮೊದಲಾದವರಿಗೆ ದುರ್ಲಭವಾಗಿದ್ದರೂ ಅದನ್ನು ನಿಮಗೆ ಕೊಡುವೆನು.

॥ ಸುರಾ ಊಚುಃ ॥

ಸ್ವಾಮಿನ್ ಭಗವತಸ್ಸರ್ವಂ ಪ್ರಾಪ್ತಮಸ್ಮಾಭಿರುತ್ತಮಂ ।
ಯದಯಂ ನಿಹತಃ ಶತ್ರುರಸ್ಮಾಕಂ ತು ದಶಾನನಃ ॥ ೧೪ ॥

ಯದಾ ಯದಾಽ ಸುರೋಽಸ್ಮಾಕಂ ಬಾಧಾಂ ಪರಿದಧಾತಿ ಭೋಃ ।
ತದಾ ತದೈವ ಕರ್ತವ್ಯಮೇತಾವದ್ವೈರಿನಾಶನಂ ॥ ೧೫ ॥

ತಥೇತ್ಯುಕ್ತ್ವಾ ಪುನರ್ವೀರಃ ಪ್ರೋವಾಚ ರಘುನಂದನಃ ।

॥ ಶ್ರೀರಾಮ ಉವಾಚ ॥

ಸುರಾಃ ಶ್ರುಣುತ ಮದ್ವಾಕ್ಯಮಾದರೇಣ ಸಮನ್ವಿತಾಃ ॥ ೧೬ ॥

ಭವತ್ಕೃತಂ ಮದೀಯೈರ್ವೈ ಗುಣೈರ್ಗ್ರಥಿತಮದ್ಭುತಂ ।
ಸ್ತೋತ್ರಂ ಪಠಿಷ್ಯತಿ ಮುಹುಃ ಪ್ರಾತರ್ನಿಶಿ ಸಕೃನ್ನರಃ ॥ ೧೭ ॥

ತಸ್ಯ ವೈರಿಪರಾಭೂತಿರ್ನ ಭವಿಷ್ಯತಿ ದಾರುಣಾ ।
ನ ಚ ದಾರಿದ್ರ್ಯಸಂಯೋಗೋ ನ ಚ ವ್ಯಾಧಿಪರಾಭವಃ ॥ ೧೮ ॥

---

೧೪. ದೇವತೆಗಳು ಹೇಳಿದರು:—ನಮ್ಮ ಶತ್ರುವಾದ ದಶಾನನನು [ರಾವಣನು] ಕೊಲ್ಲಲ್ಪಟ್ಟ ಮೇಲೆ ನಮಗೆಲ್ಲವೂ ಸಿಕ್ಕಿದಂತೆಯೇ ಆಯಿತು.

೧೫. ಈ ರಾಕ್ಷಸನು ನಮಗೆ ತೊಂದರೆ ಕೊಟ್ಟಾಗಲೆಲ್ಲಾ ಅಂತಹ ವೈರಿ ನಾಶವನ್ನು ಆಗಾಗ ಮಾಡು. ಇದೇ ನಾವು ಕೇಳುವ ವರವು ಎನ್ನಲು, ರಘುನಂದನನು ಹಾಗೇ ಆಗಲೆಂದು ಹೇಳಿದನು.

೧೬. ಶ್ರೀರಾಮನು ಮತ್ತೆ ಹೇಳಿದನು:—ಎಲೈ ದೇವತೆಗಳಿರಾ! ನನ್ನ ವಾಕ್ಯವನ್ನು ವಿಶ್ವಾಸದಿಂದ ಕೇಳಿರಿ.

೧೭-೧೮. ನೀವು ಮಾಡಿದ ಗುಣದ ಈ ಸ್ತೋತ್ರವನ್ನು ಹಗಲಿರುಳು ಯಾವ ಪುರುಷನು ಪಠಿಸುತ್ತಾನೆಯೋ ಅವನಿಗೆ ವೈರಿಯಿಂದ ಅಪಜಯವಿಲ್ಲ. ದಾರಿದ್ರ್ಯವು ಅವನನ್ನು ಮುಟ್ಟುವುದಿಲ್ಲ. ರೋಗಗಳು ಅವನನ್ನು ಪೀಡಿಸುವುದಿಲ್ಲ.

ಮದೀಯಚರಣದ್ವಂದ್ವೇ ಭಕ್ತಿಸ್ತೇಷಾಂ ತು ಭೂಯಸೀ ।
ಭವಿಷ್ಯತಿ ಮುದಾ ಯುಕ್ತೇ ಸ್ವಾಂತೇ ಪುಂಸಾಂ ತು ಪಾಠತಃ ॥ ೧೯ ॥

ಇತ್ಯುಕ್ತ್ವಾ ಸೋಽಭವತ್ತೂಷ್ಣೀಂ ನರದೇವಶಿರೋಮಣಿಃ ।
ಸುರಾಸ್ಸರ್ವೇ ಪ್ರಹೃಷ್ಟಾಸ್ತೇ ಯಯುರ್ಲೋಕಂ ಸ್ವಕಂ ಸ್ವಕಂ ॥ ೨೦ ॥

ರಘುನಾಥೋಽಪಿ ಭ್ರಾತೄಂಸ್ತಾನ್ಪಾಲಯಂಸ್ತಾತವದ್ಬುಧಾನ್ ।
ಪ್ರಜಾಃ ಪುತ್ರಾನಿವ ಸ್ವೀಯಾನ್ ಲಾಲಯನ್ ಲೋಕನಾಯಕಃ ॥ ೨೧ ॥

ಯಸ್ಮಿನ್ ಶಾಸತಿ ಲೋಕಾನಾಂ ನಾಕಾಲಮರಣಂ ನೃಣಾಂ ।
ನ ರೋಗಾದಿಪರಾಭೂತಿರ್ಗೃಹೇಷು ಚ ಮಹೀಯಸೀ ॥ ೨೨ ॥

ನೇತಿಃ ಕದಾಪಿ ದೃಶ್ಯೇತ ವೈರಿಜಂ ಭಯಮೇವ ಚ ।
ವೃಕ್ಷಾಸ್ಸದೈವ ಫಲಿನೋ ಮಹೀ ಭೂಯಿಷ್ಠಧಾನ್ಯಕಾ ॥ ೨೩ ॥

ಪುತ್ರಪೌತ್ರಪರೀವಾರಸನಾಥೀಕೃತಜೀವಿತಾಃ ।
ಕಾನ್ತಸಂಯೋಗಜಸುಖೈರ್ನಿರಸ್ತವಿರಹಕ್ಲಮಾಃ ॥ ೨೪ ॥

---

೧೯. ಇದನ್ನು ಪಠಿಸಿದರೆ ಆ ಮನುಷ್ಯರಿಗೆ ಮನಸ್ಸಿನಲ್ಲಿ ನನ್ನ ಪಾದದ್ವಂದ್ವದಲ್ಲಿ ಭಕ್ತಿಯುಂಟಾಗಲಿ.

೨೦. ಹೀಗೆಂದು ಹೇಳಿ ಆ ದೇವದೇವನು ಸುಮ್ಮನಾದನು. ದೇವತೆಗಳೆಲ್ಲರೂ ಸಂತೋಷಗೊಂಡು ಅವರವರ ಸ್ಥಾನಕ್ಕೆ ಹೋದರು.

೨೧. ರಘುನಾಥನು ಆ ಸೋದರರನ್ನೂ, ವಿದ್ವಾಂಸರನ್ನೂ ತಂದೆಯಂತೆಯೂ, ಪ್ರಜೆಗಳನ್ನು ಮಕ್ಕಳಂತೆಯೂ ಕಾಪಾಡುತ್ತಿದ್ದನು.

೨೨. ರಾಮನು ರಾಜ್ಯಭಾರಮಾಡುತ್ತಿದ್ದಾಗ ಮನುಷ್ಯರಿಗೆ ಅಕಾಲಮರಣವಿಲ್ಲ. ರೋಗಾದಿಗಳು ಬಾಧಿಸುತ್ತಿರಲಿಲ್ಲ.

೨೩. ಈತಿಬಾಧೆಗಳಿರಲಿಲ್ಲ. ಶತ್ರುಭಯವೂ ಇರಲಿಲ್ಲ. ಮರಗಳೆಲ್ಲಾ ಫಲಿಸುತ್ತಿದ್ದುವು. ಭೂಮಿಯು ಬಹು ಧಾನ್ಯವತಿಯಾಗಿದ್ದಿತು.

೨೪. ಜನಗಳು ಮಕ್ಕಳು, ಮೊಮ್ಮಕ್ಕಳು ಮೊದಲಾದ ಪರಿವಾರದಿಂದ ಕೂಡಿರುತ್ತಿದ್ದರು. ಸ್ತ್ರೀಯರು ಕಾನ್ತನ ಸಂಯೋಗದಿಂದ ಉಂಟಾದ ಸುಖದಿಂದ ಕಷ್ಟಗಳನ್ನೆಲ್ಲಾ ಪರಿಹರಿಸಿಕೊಳ್ಳುತ್ತಿದ್ದರು.

**ನಿತ್ಯಂ ಶ್ರೀ ರಘುನಾಥಸ್ಯ ಪಾದಪದ್ಮಕಥೋತ್ಸುಕಾಃ ।**
**ಕದಾಪಿ ಪರನಿಂದಾಸು ವಾಚಸ್ತೇಷಾಂ ಭವಂತಿ ನ** ॥ ೨೫ ॥

**ಕಾರವೋಽಪಿ ಕದಾ ಪಾಪಂ ನಾಚರನ್ತಿ ಮನಸ್ಯಹೋ ।**
**ರಘುನಾಥಕರಾಘಾತದುಃಖಶಂಕಾಭಿಶಂಸಿನಃ** ॥ ೨೬ ॥

**ಸೀತಾಪತಿಮುಖಾಲೋಕನಿಶ್ಚಲೀಭೂತಲೋಚನಾಃ ।**
**ಲೋಕಾ ಬಭೂವುಃ ಸತತಂ ಕಾರುಣ್ಯಪರಿಪೂರಿತಾಃ** ॥ ೨೭ ॥

**ರಾಜ್ಯಂ ಪ್ರಾಪ್ತಮಸಾಪತ್ನಂ ಸಮೃದ್ಧಬಲವಾಹನಂ ।**
**ಋಷಿಭಿರ್ಹೃಷ್ಟಪುಷ್ಟೈಶ್ಚ ರಮ್ಯಹಾಟಕಭೂಷಣೈಃ** ॥ ೨೮ ॥

---

೨೫. ಜನರು ಯಾವಾಗಲೂ, ಶ್ರೀರಾಮನ ಕಥೆಯಲ್ಲಿಯೇ ಉತ್ಸುಕರಾಗಿರುತ್ತಿದ್ದರು. ಪರನಿಂದೆಯನ್ನು ಯಾವಾಗಲೂ ಮಾಡುತ್ತಿರಲಿಲ್ಲ.

೨೬. ದುಷ್ಟರೂ ಕೂಡ ಮನದಲ್ಲಿಯೂ ಪಾಪವನ್ನು ಯೋಚಿಸುತ್ತಿರಲಿಲ್ಲ. ಹಾಗೆ ಮಾಡಿದರೆ ರಾಮನು ಶಿಕ್ಷಿಸುತ್ತಾನೆಂದು ಹೆದರುತ್ತಿದ್ದರು. ಶಿಲ್ಪಿಗಳು ಮನಸ್ಸಿನಲ್ಲಿಯೂ ಕೂಡ ಪಾಪವೆಂಬ ಪ್ರತಿಮೆಯನ್ನು ಮಾಡುತ್ತಿರಲಿಲ್ಲ. (ಯೋಚಿಸುತ್ತಲೇ ಇರಲಿಲ್ಲ) ಏಕೆಂದರೆ ರಾಮನು ಇಲ್ಲಿ ಕೆಟ್ಟಿರುವುದೆಂದು ತೋರಿಸುವನು. ಆಗ ಅವಮಾನವಾಗುವುದೆಂದು ಹೆದರಿಕೊಳ್ಳುತ್ತಿದ್ದರು. (ಕವಿಯು ಈ ಶ್ಲೇಷೆಯನ್ನು ಉಪಯೋಗಿಸುತ್ತಿದ್ದಾನೆ.)

೨೭. ರಾಮನ ಮುಖವನ್ನು ನೋಡುವುದರಲ್ಲೇ ಆಸಕ್ತರಾಗಿ ಜನಗಳು ಕೃಪಾವಂತರಾಗಿರುತ್ತಿದ್ದರು.

೨೮-೨೯. ಜನರೆಲ್ಲರೂ ಪುಷ್ಟರೂ ಸಂತುಷ್ಟರೂ ಆಗಿ, ಸರ್ವಾಭರಣಭೂಷಿತರಾಗಿ ಸಂತೋಷದಿಂದಿದ್ದರು. ರಾಜ್ಯವು ನಿಷ್ಕಂಟಕವಾಗಿತ್ತು. ಸೈನ್ಯಸಮೃದ್ಧಿಯು ವಿಶೇಷವಾಗಿತ್ತು. ಇಂತಹ ರಾಜ್ಯವನ್ನು ರಾಮನು ಹೊಂದಿ ಸುಖಿಸಿದ್ದನು. ಅವನ ರಾಜ್ಯದಲ್ಲಿ ಇಷ್ಟಸಿದ್ಧಿಗೋಸ್ಕರ ಎಲ್ಲರೂ ದಾನಧರ್ಮಗಳನ್ನು ಮಾಡುವುದರಲ್ಲಿ

**ಸಂಪುಷ್ಟಮಿಷ್ಟಾಪೂರ್ತಾನಾಂ ಧರ್ಮಾಣಾಂ ನಿತ್ಯಕರ್ತೃಭಿಃ ।**
**ಸದಾ ಸಂಪನ್ನಸಸ್ಯಂ ಚ ಸುಚಾರಕ್ಷೇತ್ರಸಂಕುಲಂ ॥ ೨೯ ॥**

**ಸುದೇಶಂ ಸುಪ್ರಜಂ ಸ್ವಸ್ಥಂ ಸುತೃಣಂ ಬಹುಗೋಧನಂ ।**
**ದೇವತಾಯತನಾನಾಂ ಚ ರಾಜಿಭಿಃ ಪರಿರಾಜಿತಂ ॥ ೩೦ ॥**

**ಸುಪೂರ್ಣಾ ಯತ್ರ ವೈ ಗ್ರಾಮಾಃ ಸುವಿತ್ತರ್ದ್ಧಿವಿರಾಜಿತಾಃ ।**
**ಸುಪುಷ್ಪಕೃತ್ರಿಮೋದ್ಯಾನಾಃ ಸುಸ್ವಾದುಫಲಪಾದಪಾಃ ॥ ೩೧ ॥**

**ಸಪದ್ಮಿನೀಕಕಾಸಾರಾ ಯತ್ರ ರಾಜನ್ತಿ ಭೂಮಯಃ ।**
**ಸದಂಭಾ ನಿಮ್ನಗಾ ಯತ್ರ ನ ಯತ್ರ ಜನತಾ ಕ್ವಚಿತ್ ॥ ೩೨ ॥**

**ಕುಲಾನ್ಯೇವ ಕುಲೀನಾನಿ ವರ್ಣಾನಾಂ ನ ಧನಾನಿ ಚ ।**
**ವಿಭ್ರಮೋ ಯತ್ರ ನಾರೀಷು ನ ವಿದ್ವತ್ಸು ಚ ಕರ್ಹಿಚಿತ್ ॥ ೩೩ ॥**

---

ಆಸಕ್ತರಾಗಿದ್ದರು. ಭೂಮಿಯೆಲ್ಲವೂ ಸಸ್ಯಸಮೃದ್ಧಿಯಿಂದ ತುಂಬಿಹೋಗಿತ್ತು. ಮಾರ್ಗಗಳೆಲ್ಲವೂ ಕಳ್ಳಕಾಕರಭಯವಿಲ್ಲದೆ ಸಂಚರಿಸಲು ಸುಗಮವಾಗಿದ್ದವು.

೩೦. ದೇಶವು ಒಳ್ಳೆಯ ದೇಶವಾಯಿತು. ಪ್ರಜೆಗಳು ಒಳ್ಳೆಯ ಪ್ರಜೆಗಳಾದರು. ಹುಲ್ಲು ಸಮೃದ್ಧಿಯಾಗಿ ಬೆಳೆಯಿತು. ಗೋಧನವು ಬಹಳವಾಯಿತು. ದೇವಸ್ಥಾನಗಳ ಸಾಲುಗಳಿಂದ ಆ ರಾಜ್ಯವು ಶೋಭಿಸಿತು.

೩೧. ಗ್ರಾಮಗಳೆಲ್ಲವೂ ಪೂರ್ಣವಾಗಿದ್ದುವು. ಯಥೇಚ್ಛವಾದ ಹಣದಿಂದ ಕೂಡಿಕೊಂಡಿತ್ತು. ಉದ್ಯಾನಗಳು ಪುಷ್ಪಗಳಿಂದಲೂ, ರುಚಿಯಾದ ಫಲಗಳಿಂದಲೂ, ಕೂಡಿತ್ತು.

೩೨. ಆ ಅಯೋಧ್ಯೆಯ ಭೂಮಿಗಳು, ಕಮಲದೊಡನೆ ಕೂಡಿರುವ ಕೊಳಗಳಿಂದ ಪ್ರಕಾಶಿಸುತ್ತಿತ್ತು. ಅಲ್ಲಿ ಹರಿಯುವ ಹೊಳೆಗಳು ಆಳವಾಗಿ ಹರಿಯುತ್ತಿದ್ದುವು. ಜನಗಳು ಡಂಭಾಚಾರದಿಂದಿರಲಿಲ್ಲ.

೩೩. ಅಲ್ಲಿರುವ ಕುಲಗಳು ಯೋಗ್ಯವಾದ ಕುಲದಲ್ಲಿ ಹುಟ್ಟಿದುವು. ಜನಗಳು ಮಾತ್ರ ಧನಗಳನ್ನು ಕುಲೀನಮಾಡಿರಲಿಲ್ಲ ಎಂದರೆ ಭೂಮಿಯಲ್ಲಿ ಹೂತು ಹಾಕುತ್ತಿರಲಿಲ್ಲ.

**ನದ್ಯಃ ಕುಟಿಲಗಾಮಿನ್ಯೋ ನ ಯತ್ರ ವಿಷಯೇ ಪ್ರಜಾಃ ।**
**ತಮೋಯುಕ್ತಾಃ ಕ್ಷಪಾ ಯತ್ರ ಬಹುಲೇಷು ನ ಮಾನವಾಃ ॥ ೩೪ ॥**

**ರಜೋಯುಜಃ ಸ್ತ್ರಿಯೋ ಯತ್ರ ನಾಧರ್ಮಬಹುಲಾ ನರಾಃ ।**
**ಧನೈರನಂಧೋ ಯತ್ರಾಸ್ತಿ ಜನೋ ನೈವ ಚ ಭೋಜನಂ ॥ ೩೫ ॥**

**ಅನಯಃ ಸ್ಯಂದನಂ ಯತ್ರ ನ ಚ ವೈ ರಾಜಪೂರುಷಃ ।**
**ದಂಡಃ ಪರಶುಕುದ್ದಾಲವಾಲವ್ಯಜನರಾಜಿಷು ॥ ೩೬ ॥**

**ಆತಪತ್ರೇಷು ನಾನ್ಯತ್ರ ಕ್ವಚಿತ್ ಕ್ರೋಧೋಪರೋಧಜಃ ।**
**ಅನ್ಯತ್ರಾಕ್ಷಿಕವೃಂದೇಭ್ಯಃ ಕ್ವಚಿನ್ನ ಪರಿದೇವನಂ ॥ ೩೭ ॥**

---

೩೪. ಆ ದೇಶದಲ್ಲಿರುವ ನದಿಗಳು ಮಾತ್ರ ಕುಟಿಲಗಾಮಿಗಳು ಎಂದರೆ ವಕ್ರ ಮಾರ್ಗದಲ್ಲಿ ಸೊಟ್ಟುಸೊಟ್ಟಾಗಿ ಹರಿಯುತ್ತಿದ್ದುವು. ಅಲ್ಲಿರುವ ಪ್ರಜೆಗಳು ಕುಟಿಲ ಗಾಮಿಗಳಲ್ಲ. ವಕ್ರಮಾರ್ಗದಲ್ಲಿ ಹೋಗುತ್ತಿರಲಿಲ್ಲ. ಅಲ್ಲಿನ ಬಹುಳ ತಿಥಿಯ ರಾತ್ರಿಗಳು ತಮೋಯುಕ್ತವಾಗಿದ್ದುವು ಅಂದರೆ ಕತ್ತಲೆಯಿಂದ ಕೂಡಿದ್ದುವು.

೩೫. ಅಲ್ಲಿನ ಮನುಷ್ಯರು ತಮೋಯುಕ್ತರಲ್ಲ ಎಂದರೆ ವಿವೇಕಶೂನ್ಯರಾಗಿರ ಲಿಲ್ಲ.

೩೬. ಆ ದೇಶದಲ್ಲಿ ರಥಗಳು ಕಬ್ಬಿಣವವುಗಳಾಗಿರಲಿಲ್ಲ. ರಾಜಪುರುಷರೂ ಸಹ ಅನಯರಾಗಿರಲಿಲ್ಲ ಎಂದರೆ ನೀತಿಯಿಂದ ನಡೆದುಕೊಳ್ಳುತ್ತಿದ್ದರು. ದಂಡವು ಎಂದರೆ ಕಾವು, ಕೊಡಲಿ, ಗುದ್ದಲಿ, ಚಾಮರಗಳಲ್ಲಿದ್ದಿತು. ದಂಡವು ಎಂದರೆ ಶಿಕ್ಷೆಯು ಜನಗಳಿಗಿರಲಿಲ್ಲ.

೩೭. ಕೋಪದ ಹೊಡೆತದಿಂದ ಉಂಟಾದ ದಂಡವು ಎಂದರೆ ಕಾವು ಕೊಡಲಿ ಗಳಲ್ಲಿಯೇ ಹೊರತು ದಂಡ ಎಂದರೆ ಶಿಕ್ಷೆಯು ಮತ್ತೆಲ್ಲಿಯೂ ಕಾಣಬರುತ್ತಿರಲಿಲ್ಲ. ಪರಿದೇವನ ಎಂದರೆ ಪಗಡೆಯಾಟವು ಪಗಡೆಯಾಡುವುದರಲ್ಲಿಯೇ ಹೊರತು ಬೇರೆ ಕಡೆಯಲ್ಲಿ ಪರಿದೇವನ ಎಂದರೆ ಅಳುವಿಕೆಯು ಇರಲೇ ಇಲ್ಲ.

ಆಕ್ಷಿಕಾ ಏವ ದೃಶ್ಯಂತೇ ಯತ್ರ ಪಾಶಕಪಾಣಯಃ ।
ಜಾಡ್ಯವಾರ್ತಾ ಜಲೇಷ್ವೇವ ಸ್ತ್ರೀಮಧ್ಯಾ ಏವ ದುರ್ಬಲಾಃ ॥ ೩೮ ॥

ಕಠೋರಹೃದಯಾ ಯತ್ರ ಸೀಮಂತಿನ್ಯೋ ನ ಮಾನವಾಃ ।
ಓಷಧೀಷ್ವೇವ ಯತ್ರಾಸ್ತಿ ಕುಷ್ಠಯೋಗೋ ನ ಮಾನವೇ ॥ ೩೯ ॥

ವೇಧೋ ಯತ್ರ ಸುರತ್ನೇಷು ಶೂಲಂ ಮೂರ್ತಿಕರೇಷು ಚ ।
ಕಂಪಃ ಸಾತ್ತ್ವಿಕಭಾವೋತ್ಥೋ ನ ಭಯಾತ್ಕ್ವಾಪಿ ಕಸ್ಯ ಚಿತ್ ॥ ೪೦ ॥

ಸಂಜ್ವರಃ ಕಾಮಜೋ ಯತ್ರ ದಾರಿದ್ರ್ಯಂ ಕಲುಷಸ್ಯ ಚ ।
ದುರ್ಲಭತ್ವಂ ಸದ್ದೈವಸ್ಯ ಸುಕೃತೇ ನ ಚ ವಸ್ತುನಃ ॥ ೪೧ ॥

---

೩೮. ಪಾಶಕಪಾಣಿಗಳಾಗಿ ಎಂದರೆ ದಾಳವನ್ನು ಹಿಡಿದವರು ಪಗಡೆಯಾಟದಲ್ಲಿ ಮಾತ್ರ ಕಾಣುತ್ತಿದ್ದರು. ಪಾಶಕಪಾಣಿಗಳಾಗಿ ಎಂದರೆ ಶಿಕ್ಷಿಸುವುದಕ್ಕೆ ಹಗ್ಗವೇ ಮೊದಲಾದುವನ್ನು ಹಿಡಿದು ಮತ್ತಾರೂ ಕಾಣುತ್ತಿರಲಿಲ್ಲ. ಜಾಡ್ಯವಾರ್ತೆಯು (ಜಾಡ್ಯವೆಂಬ ಮಾತು ಎಂದರೆ ಜಡತೆಯು) ನೀರಿನಲ್ಲಿ ಮಾತ್ರವೇ ಹೊರತು ಇತರರಲ್ಲಿ ಜಾಡ್ಯವು ಎಂದರೆ ರೋಗವು ಇರಲಿಲ್ಲ. ಹೆಂಗಸರ ನಡುವಿನ ಪ್ರದೇಶಮಾತ್ರ ದುರ್ಬಲವೇ (ಸಣ್ಣಗಿರುವುದು) ಹೊರತು ಜನಗಳು ದುರ್ಬಲರಲ್ಲ.

೩೯. ರಾಮರಾಜ್ಯದಲ್ಲಿ ಕಠಿಣಹೃದಯರಾದ ಎಂದರೆ ನಿರ್ದಯರಾದ ಪುರುಷರಾಗಲೀ, ಸ್ತ್ರೀಯರಾಗಲೀ ಇರಲೇ ಇಲ್ಲ. ಕುಷ್ಠವೆಂಬ ಶಬ್ದವು (ಮೂಲಿಕಾವಿಶೇಷ) ಔಷಧಿಗಳಲ್ಲಿ ಮಾತ್ರ ಕಂಡುಬರುತ್ತಿತ್ತೇ ಹೊರತು ಕುಷ್ಠರೋಗಿಗಳಾಗಿರಲಿಲ್ಲ.

೪೦. ವೇಧವೆಂಬ ಶಬ್ದವು ರತ್ನಪರೀಕ್ಷೆಯಲ್ಲಿದ್ದಿತೇ ಹೊರತು ಜನರು ವೇಧೆಯನ್ನು (ಹಿಂಸೆ) ಅನುಭವಿಸುತ್ತಿರಲಿಲ್ಲ. ಶೂಲವು ಪ್ರತಿಮೆಗಳ ಕೈಯಲ್ಲಿತ್ತು. ಮನುಷ್ಯರಿಗೆ (ಶೂಲವೆಂದರೆ ಯಾತನೆ ಎಂದೂ ಅರ್ಥವು) ಯಾವ ವಿಧವಾದ ಯಾತನೆಯೂ ಇರಲಿಲ್ಲ.

೪೧. ಜ್ವರವೆಂದರೆ ಕಾಮಜ್ವರವೇ ಹೊರತು ರೋಗವೆಂಬುದಿಲ್ಲ. ಎಲ್ಲೆಲ್ಲಿಯೂ ಕಲ್ಮಷವಿಲ್ಲದೆ ನಿರ್ಮಲವಾಗಿದ್ದಿತೇ ಹೊರತು ಜನರಿಗೆ ದಾರಿದ್ರ್ಯವೆಂದರೆ ಬಡತನವೆಂಬುದೇ ಇರಲಿಲ್ಲ. ಒಳ್ಳೆಯ ಕಾರ್ಯಗಳನ್ನು ಮಾಡದಿರುವವರು ದುರ್ಲಭರಾಗಿದ್ದರೇ ವಿನಹ ವಸ್ತುಗಳಿಗೆ ದುರ್ಲಭವು ಎಂದರೆ ಅಭಾವವು ಇರಲಿಲ್ಲ.

**ಇಭಾ ಏವ ಪ್ರಮತ್ತಾ ವೈ ಯುದ್ಧೇ ವೀಚ್ಯೋ ಜಲಾಶಯೇ ।**
**ದಾನಹಾನಿರ್ಗಜೇಷ್ವೇವ ತೀಕ್ಷ್ಣಾ ಏವ ಹಿ ಕಂಟಕಾಃ** ॥ ೪೨ ॥

**ಬಾಣೇಷು ಗುಣವಿಶ್ಲೇಷೋ ಬಂಧೋಕ್ತಿಃ ಪುಸ್ತಕೇ ದೃಢಾ ।**
**ಸ್ನೇಹತ್ಯಾಗಃ ಖಲೇಷ್ವೇವ ನ ಚ ವೈ ಸ್ವಜನೇ ಜನೇ** ॥ ೪೩ ॥

**ತಂ ದೇಶಂ ಪಾಲಯಾಮಾಸ ಲಾಲಯನ್ ಲಲಿತಾಃ ಪ್ರಜಾಃ ।**
**ಧರ್ಮಂ ಸಂಸ್ಥಾಪಯನ್ದೇಶೇ ದುಷ್ಟೇ ದಂಡಧರೋ ಯಮಃ** ॥ ೪೪ ॥

---

೪೨. ಪ್ರಮತ್ತತೇ ಎಂದರೆ ಕೊಬ್ಬಿರುವುದು, ಆನೆಗಳಲ್ಲಿಯೇ ಹೊರತು ಮನುಷ್ಯರಲ್ಲಿರಲಿಲ್ಲ. ಆ ಆನೆಗಳ ಕೊಬ್ಬು ಯುದ್ಧದಲ್ಲಿ ಮಾತ್ರವೇ. ವೀಚಿಗಳು ಎಂದರೆ ಅಲೆಗಳು ಕೊಳಕೆರೆಗಳ ನೀರಿನಲ್ಲಿಯೇ ಹೊರತು ಜನಗಳಲ್ಲಿ (ವಿಚಿ ಎಂದರೆ ತಿರಸ್ಕಾರದ ಮಾತುಗಳು) ಇರಲಿಲ್ಲ. ದಾನಹಾನಿ ಎಂದರೆ ಆನೆಯ ಮದೋದಕದ ನಾಶವೂ, ಆನೆಯು ಮದತಿಳಿದ ಮೇಲೆ ಅದಕ್ಕೆ ದಾನಹಾನಿಯಾಗುತ್ತಿದ್ದಿತೇ ಹೊರತು ಜನಗಳಲ್ಲಿ ದಾನದ ನಾಶವಿರಲಿಲ್ಲಾ. ದಾನಶೀಲರಾಗಿಯೇ ಇದ್ದರು. ತೀಕ್ಷ್ಣತ್ವ ಎಂದರೆ ಕ್ರೂರವಾಗಿರುವಿಕೆ, ಚೂಪಾಗಿರುವಿಕೆ. ಆ ಚೂಪಾಗಿರುವಿಕೆಯು ಮುಳ್ಳುಗಳಲ್ಲಿ ಇತ್ತೇ ಹೊರತು, ತೀಕ್ಷ್ಣತ್ವ ಎಂದರೆ ಕಠಿಣವಾಗಿ ಮಾತಾಡುವುದು ಜನಗಳಲ್ಲಿ ಇರಲಿಲ್ಲ.

೪೩. ಗುಣವಿಶ್ಲೇಷವೆಂದರೆ ಬಿಲ್ಲಿನ ಹಗ್ಗವನ್ನು ಬಿಡುವಿಕೆ ಅದು ಬಾಣಗಳಲ್ಲಿ ಮಾತ್ರವಿತ್ತೇ ಹೊರತು ಗುಣವಿಶ್ಲೇಷವು ಎಂದರೆ ಒಳ್ಳೆಯ ಗುಣವನ್ನು ಬಿಡುವಿಕೆಯು ಜನಗಳಲ್ಲಿರಲಿಲ್ಲ. ಬಂಧೋಕ್ತಿ ಎಂದರೆ ಕಟ್ಟಿಹಾಕುವುದು, ಬಂಧರಚನೆ. ಆ ಬಂಧರಚನೆಯು ಪುಸ್ತಕದಲ್ಲಿತ್ತೇ ಹೊರತು ಜನಗಳಲ್ಲಿ ಕಟ್ಟಿಹಾಕುವುದರಲ್ಲಿರಲಿಲ್ಲ. ಸ್ನೇಹತ್ಯಾಗವೆಂದರೆ ಸ್ನೇಹವನ್ನು ಬಿಟ್ಟುಬಿಡುವುದು. ಆ ಸ್ನೇಹತ್ಯಾಗವು ಕಣಗಳಲ್ಲಿತ್ತು ಏಕೆಂದರೆ ಅಲ್ಲಿ ಧಾನ್ಯಗಳನ್ನು ಸರಿಮಾಡಿಕೊಂಡು ಮನೆಗೆ ತರುತ್ತಿದ್ದುದರಿಂದ ಬಿಟ್ಟುಹಾಗಾಯಿತು. ಆ ಸ್ನೇಹತ್ಯಾಗವು ಬಂಧುಗಳಲ್ಲಾಗಲಿ ಜನಗಳಲ್ಲಾಗಲಿ ಇರಲಿಲ್ಲ.

೪೪. ಅಂತಹ ದೇಶದಲ್ಲಿ ಧರ್ಮವನ್ನು ಸ್ಥಾಪಿಸುತ್ತಾ ದುಷ್ಟರ ವಿಷಯದಲ್ಲಿ ಯಮನಂತೆ ದಯೆ ದಾಕ್ಷಿಣ್ಯಗಳಿಲ್ಲದೇ ಶಿಕ್ಷಿಸುತ್ತಾ ಪ್ರಜೆಗಳನ್ನು ಪ್ರೀತಿಸುತ್ತಾ ರಾಜ್ಯಭಾರ ಮಾಡುತ್ತಿದ್ದನು.

ಇತ್ಥಂ ಪಾಲಯತಸ್ತಸ್ಯ ಧರ್ಮೇಣ ಧರಣೀತಲಂ ।
ಸಹಸ್ರಾಣಿ ವ್ಯತೀಯುರ್ವೈ ವರ್ಷಾಣ್ಯೇಕಾದಶ ಪ್ರಭೋಃ ॥ ೪೫ ॥

ತತ್ರ ನೀಚಜನಾಚ್ಛ್ರುತ್ವಾ ಸೀತಾಯಾ ಅಪಮಾನತಾಂ ।
ಸ್ವವನಿತಾಂ ರಜಕೋಕ್ತ್ಯಾ ತಾಂ ತತ್ಯಾಜ ರಘೂದ್ವಹಃ ॥ ೪೬ ॥

ಪೃಥ್ವೀಂ ಪಾಲಯಮಾನಸ್ಯ ಧರ್ಮೇಣ ನೃಪತೇಸ್ತದಾ ।
ಸೀತಾವಿರಹಿತಾಮೇಕಾಂ ನಿದೇಶೇನ ಸುರಕ್ಷಿತಾಂ ॥ ೪೭ ॥

ಕದಾಚಿತ್ಸಂಸದೋ ಮಧ್ಯೇ ಹ್ಯಾಸೀನಸ್ಯ ಮಹಾಮತೇಃ ।
ಆಜಗಾಮ ಮುನಿಶ್ರೇಷ್ಠಃ ಕುಂಭೋತ್ಪತ್ತಿರ್ಮಹಾನಿಧಿಃ ॥ ೪೮ ॥

ಗೃಹೀತ್ವಾರ್ಘ್ಯಂ ಸಮುತ್ತಸ್ಥೌ ವಸಿಷ್ಠೇನ ಸಮನ್ವಿತಃ ।
ಜನತಾಭಿರ್ಮಹಾರಾಜೋ ವಾರ್ಧಿಶೋಷಕಮುದ್ಭುತಂ ॥ ೪೯ ॥

---

೪೫. ಶ್ರೀರಾಮನು ಇಂತು ರಾಜ್ಯಭಾರ ಮಾಡುತ್ತಿರುವಲ್ಲಿ ಹನ್ನೊಂದು ಸಾವಿರ ವರ್ಷಗಳು ಕಳೆದುವು.

೪೬. ಅಂತಹ ದೇಶದಲ್ಲಿ ಅಯೋಗ್ಯನಾದ ಒಬ್ಬ ಅಗಸನಿಂದ ಸೀತೆಯ ವಿಷಯದಲ್ಲಿ ಅವಮಾನಕರವಾದ ಮಾತನ್ನು ಕೇಳಿ ಆ ಸೀತೆಯನ್ನು ರಾಮನು ಬಿಟ್ಟುಬಿಟ್ಟನು.

೪೭. ಹೀಗೆ ಸೀತೆಯೊಬ್ಬಳು ಇಲ್ಲದಿರುವಾಗ ಆ ರಾಜ್ಯವನ್ನು ಆತನು ಅಪ್ಪಣೆ ಮಾತ್ರದಿಂದಲೇ ಧರ್ಮದಿಂದ ಪಾಲಿಸುತ್ತಿದ್ದನು.

೪೮. ಹೀಗೆ ಆಳುತ್ತಿರುವಾಗ ಒಂದುಬಾರಿ ಆಗಸ್ತ್ಯಋಷಿಯು ಆ ರಾಮನ ಸಭೆಗೆ ಬಂದನು.

೪೯. ರಾಮನು ಒಡನೆಯೇ ಅರ್ಘ್ಯಪಾದ್ಯಾದಿಪೂಜೋಪಕರಣಗಳನ್ನು ತೆಗೆದುಕೊಂಡು ವಸಿಷ್ಠನೊಡನೆಯೂ, ಜನಗಳೊಡನೆಯೂ, ಆ ಸಮುದ್ರಪಾನಮಾಡಿದ ಮಹಾನುಭಾವನನ್ನು ಎದುರುಗೊಂಡನು.

**ಸ್ವಾಗತೇನ ಸ ಸಂಭಾವ್ಯ ಪಪ್ರಚ್ಛ ತಮನಾಮಯಂ ।**
**ಸುಖೋಪವಿಷ್ಟಂ ವಿಶ್ರಾಂತಂ ಬಭಾಷೇ ರಘುನಂದನಃ ॥ ೫೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಅಗಸ್ತ್ಯಸಮಾಗಮೋನಾಮ ಪಂಚಮೋಽಧ್ಯಾಯಃ**



---

೫೦. ಸ್ವಾಗತದಿಂದ ಆ ಋಷಿಯನ್ನು ಉಪಚರಿಸಿ ಕುಶಲಪ್ರಶ್ನೆಗಳನ್ನು ಮಾಡಿ ಶ್ರೀರಾಮನು ಇಂತೆಂದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಅಗಸ್ತ್ಯನು ಬಂದನೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಷ್ಠೋಽಧ್ಯಾಯಃ

॥ ಶೇಷ ಉವಾಚ ॥

ಇತ್ಥಂ ಸ್ವಾಗತಸಂತುಷ್ಟಂ ಬ್ರಹ್ಮಚರ್ಯತಪೋನಿಧಿಂ ।
ಉವಾಚ ಮತಿಮಾನ್ವೀರಃ ಸರ್ವಲೋಕಗುರುರ್ಮುನಿಂ ॥ ೧ ॥

ಸ್ವಾಗತಂ ತೇ ಮಹಾಭಾಗ ಕುಂಭಭೂತೇ ತಪೋನಿಧೇ ।
ತ್ವದ್ದರ್ಶನೇನ ಸರ್ವೇ ವೈ ಪಾವಿತಾಃ ಸಕುಟುಂಬಕಾಃ ॥ ೨ ॥

ಕ್ವಚಿನ್ಮತಿಸ್ತೇ ವೇದೇಷು ಶಾಸ್ತ್ರೇಷು ಪರಿವರ್ತತೇ ।
ತ್ವತ್ತಪೋವಿಘ್ನಕರ್ತಾ ವೈ ನಾಸ್ತಿ ಭೂಮಂಡಲೇ ಕ್ವಚಿತ್ ॥ ೩ ॥

---

## ಆರನೆಯ ಅಧ್ಯಾಯವು

೧. ಶೇಷನು ಹೇಳಿದನು:––ಉಪಚಾರದಿಂದ ಸಂತೋಷಗೊಂಡ, ಬ್ರಹ್ಮಚರ್ಯ ತಪಸ್ಸುಗಳಿಗೆ ನಿಧಿಯಾದ, ಪ್ರಪಂಚಕ್ಕೆ ಗುರುವಾದ, ಆ ಅಗಸ್ತ್ಯನನ್ನು ಕುರಿತು ಆ ರಾಮಚಂದ್ರನು ಇಂತೆಂದನು.

೨. ಕುಂಭಸಂಭವನಾದ ತಪಸ್ವಿಯೇ, ನಿನಗೆ ಸುಖಾಗಮನವೇ ? ನಿನ್ನ ದರ್ಶನದಿಂದ ಪರಿವಾರದೊಡನೆ ನಾನು ಧನ್ಯನಾದೆನು.

೩. ವೇದಗಳಲ್ಲೂ, ಶಾಸ್ತ್ರಗಳಲ್ಲೂ ನಿನ್ನ ಬುದ್ಧಿಯು ಸರಿಯಾಗಿ ಓಡುತ್ತಿದೆಯಷ್ಟೆ. ನಿನ್ನ ತಪಸ್ಸಿಗೆ ವಿಘ್ನವನ್ನು ಮಾಡತಕ್ಕವನು ಪ್ರಪಂಚದಲ್ಲಿ ಒಬ್ಬನೂ ಇಲ್ಲ.

**ಲೋಪಾಮುದ್ರಾ ಮಹಾಭಾಗ ಯಾ ಚ ತೇ ಧರ್ಮಚಾರಿಣೀ ।**
**ಯಸ್ಯಾಃ ಪತಿವ್ರತಾಧರ್ಮಾತ್ಸರ್ವಂ ಭವತಿ ಶೋಭನಂ ॥ ೪ ॥**

**ಅಪಿ ಶಂಸ ಮಹಾಭಾಗ ಧರ್ಮಮೂರ್ತೇ ಕೃಪಾನಿಧೇ ।**
**ಅಲೋಲುಪಸ್ಯ ಕಿಂ ಕಾರ್ಯಂ ಕರವಾಣಿ ಮುನೀಶ್ವರ ॥ ೫ ॥**

**ತ್ವತ್ತಪೋಯೋಗತಸ್ಸರ್ವಂ ಭವತಿ ಸ್ವೇಚ್ಛಯಾ ಬಹು ।**
**ತಥಾಪಿ ಮಯಿ ಕೃತ್ವೈವ ಕೃಪಾಂ ಶಂಸ್ಮ ಮಹಾಮುನೇ ॥ ೬ ॥**

**॥ ಶೇಷ ಉವಾಚ ॥**

**ಇತ್ಯುಕ್ತೋ ಲೋಕಗುರುಣಾ ರಾಜರಾಜೇನ ಧೀಮತಾ ।**
**ಉವಾಚ ರಾಮಂ ಲೋಕೇಶಂ ವಿನೀತತರಭಾಷಯಾ ॥ ೭ ॥**

**॥ ಅಗಸ್ತ್ಯ ಉವಾಚ ॥**

**ಸ್ವಾಮಿಂಸ್ತವ ಸುದುರ್ದರ್ಶಂ ದರ್ಶನಂ ದೇವತೈರಪಿ ।**
**ಕೃತ್ವಾ ಸಮಾಗತಂ ವಿದ್ಧಿ ರಾಜರಾಜ ಕೃಪಾನಿಧೇ ॥ ೮ ॥**

---

೪. ಲೋಪಾಮುದ್ರೆಯೇ ನಿನ್ನ ಹೆಂಡತಿಯು. ಅವಳು ಮಹಾ ಪತಿವ್ರತೆಯು. ಅವಳ ಪತಿವ್ರತಾಧರ್ಮದಿಂದ ನಿನಗೆ ಎಲ್ಲವೂ ಮಂಗಳಕರವಾಗಿ ನೆರವೇರುತ್ತವೆ.

೫. ಎಲೈ ಧರ್ಮಮೂರ್ತಿಯಾದ ಕೃಪಾಳುವೇ, ಜಿತೇಂದ್ರಿಯನಾದ ನಿನಗೆ ನನ್ನಿಂದ ಏನು ಕೆಲಸವಾಗಬೇಕು? ಹೇಳು, ಮಾಡಿಕೊಡುತ್ತೇನೆ.

೬. ನಿನ್ನ ತಪಸ್ಸಿನ ಶಕ್ತಿಯಿಂದಲೇ ನಿನ್ನ ಇಷ್ಟಾರ್ಥಗಳೆಲ್ಲವೂ ಸುಲಭವಾಗಿ ಲಭಿಸುತ್ತವೆ. ಆದರೂ ನನ್ನ ಮೇಲೆ ದಯವಿಟ್ಟು ಬಂದಿದ್ದೀಯೆ ಎಂದು ಹೇಳಿದನು.

೭-೮. ಶೇಷನು ಹೇಳಿದನು:—ಲೋಕಕ್ಕೆ ಸ್ವಾಮಿಯಾದ ರಾಮನು ಹೀಗೆ ಹೇಳಲಾಗಿ ರಾಮನನ್ನು ಕುರಿತು ಅಗಸ್ತ್ಯನು ಇಂತೆಂದನು. ಎಲೈ ಸ್ವಾಮಿಯೇ! ನಿನ್ನ ದರ್ಶನವು ದೇವತೆಗಳಿಗೂ ದುರ್ಲಭವಾದುದು. ಅಂತಹ ನಿನ್ನ ದರ್ಶನವನ್ನು ಮಾಡಿಕೊಂಡು ಹೋಗಬೇಕೆಂದು ಬಂದಿದ್ದೇನೆ.

ಹತಸ್ತ್ವಯಾ ರಾವಣಾಖ್ಯಸ್ತ್ವಸುರೋ ಲೋಕಕಂಟಕಃ ।
ದಿಷ್ಟ್ಯಾದ್ಯ ದೇವಾಸ್ಸುಖಿನೋ ದಿಷ್ಟ್ಯಾ ರಾಜಾ ವಿಭೀಷಣಃ ॥ ೯ ॥

ರಾಮ ತ್ವದ್ದರ್ಶನಾನ್ಮೇಽದ್ಯ ಗತಂ ವೈ ದುಷ್ಕೃತಂ ಕಿಲ ।
ಸಂಪೂರ್ಣೋ ಮೇ ಮನಃಕ್ಲೇಶೋ ಹತಂ ಸರ್ವಂ ಸುದುಷ್ಕೃತಂ ॥ ೧೦ ॥

ಇತ್ಯುಕ್ತ್ವಾಪಿ ಬಭೂವಾಶು ತೂಷ್ಣೀಂ ಕುಂಭಸಮುದ್ಭವಃ ।
ರಾಮಸಂದರ್ಶನಾಹ್ಲಾದವಿಹ್ವಲೀಕೃತಮಾನಸಃ ॥ ೧೧ ॥

ರಾಮಃ ಪಪ್ರಚ್ಛ ತಂ ಭೂಯೋ ಮುನಿಂ ಜ್ಞಾನವಿಶಾರದಂ ।
ಲೋಕಾತೀತಂ ಭವದ್ಭಾವಿ ಸರ್ವಂ ಜ್ಞಾತಾರಮಿಂಗಿತಂ ॥ ೧೨ ॥

ಮುನೇ ಕಥಯ ಮೇ ಸರ್ವಂ ಪೃಚ್ಛತೋ ಹಿ ಸವಿಸ್ತರಂ ।
ಕೋಽಸೌ ಮಯಾ ಹತೋ ಯೋ ಹಿ ರಾವಣೋ ವಿಬುಧಾರ್ದನಃ ॥ ೧೩ ॥

ಕುಂಭಕರ್ಣೋಽಪಿ ಕಸ್ತ್ವೇಷ ಕಾ ಜ್ಞಾತಿರ್ವೈ ದುರಾತ್ಮನಃ ।
ದೇವೋ ದೈತ್ಯಃ ಪಿಶಾಚೋ ವಾ ಮಾನವೋ ವಾ ಮಹಾಮುನೇ ॥ ೧೪ ॥

---

೯. ಲೋಕಕಂಟಕನಾದ ರಾವಣಾಸುರನನ್ನು ಕೊಂದೆ. ಈಗ ದೇವತೆಗಳು ಸುಖಿಗಳಾದರು. ವಿಭೀಷಣನೂ ಒಳ್ಳೆಯಸ್ಥಿತಿಗೆ ತರಲ್ಪಟ್ಟನು.

೧೦. ಎಲೈ ರಾಮನೇ, ನಿನ್ನ ದರ್ಶನದಿಂದ ನನ್ನ ಪಾಪವೆಲ್ಲವೂ ನಾಶವಾದುವು. ನನ್ನ ಮನಸ್ಸಿನ ಕ್ಲೇಶವೂ ಕೂಡ ನಾಶವಾಯಿತು.

೧೧. ಹೀಗೆಂದು ಹೇಳಿ ರಾಮದರ್ಶನದಿಂದುಂಟಾದ ಸಂತೋಷದಿಂದ ಮನಸ್ಸು ಸ್ತಿಮಿತವಾಗಲು ಒಡನೆಯೇ ಸುಮ್ಮನಾದನು.

೧೨—೧೪. ಬಳಿಕ ರಾಮನು ಜ್ಞಾನಿಯೂ, ಭೂತಭವಿಷ್ಯದ್ವರ್ತಮಾನವನ್ನು ತಿಳಿದವನೂ ಆದ ಋಷಿಯನ್ನು ಕುರಿತು ಎಲೈ ಋಷಿಯೇ! ದೇವತೆಗಳನ್ನೂ ತೊಂದರೆಪಡಿಸಿದ ಆ ರಾವಣನೆಂಬುವನಾರು ಎಂಬುದನ್ನು ನನಗೆ ವಿಸ್ತಾರವಾಗಿ ತಿಳಿಸು. ಕುಂಭಕರ್ಣನು ಯಾರು? ಅವನ ಉಳಿದ ಜ್ಞಾತಿಗಳು ತಾನೇ ಯಾರು? ಅವನೇನು ದೇವತೆಯೋ? ದೈತ್ಯನೇ? ಪಿಶಾಚಿಯೋ? ಮನುಷ್ಯನೇ? ಯಾರು?

**ಸರ್ವಮಾಖ್ಯಾಹಿ ಸರ್ವಜ್ಞ ಸರ್ವಂ ಜಾನಾಸಿ ವಿಸ್ತರಾತ್ ।**
**ತಥಾ ಕುರು ಮದಾದೇಶಂ ಕೃಪಾಂ ಕೃತ್ವಾ ಮಮೋಪರಿ ॥ ೧೫ ॥**

**ಇತಿ ಶ್ರುತ್ವಾ ತತೋ ವಾಕ್ಯಂ ಕುಂಭಜನ್ಮಾ ತಪೋನಿಧಿಃ ।**
**ಯತ್ಪೃಷ್ಟಂ ರಘುರಾಜೇನ ಪ್ರವಕ್ತುಂ ತತ್ಪ್ರಚಕ್ರಮೇ ॥ ೧೬ ॥**

**ರಾಜರ್ಷೇ ಸೃಷ್ಟಿಕರೋ ಬ್ರಹ್ಮಾ ಪುಲಸ್ತ್ಯಸ್ತತ್ಸುತೋಽಭವತ್ ।**
**ತತಸ್ತು ವಿಶ್ರವಾ ಜಜ್ಞೇ ವೇದವಿದ್ಯಾವಿಶಾರದಃ ॥ ೧೭ ॥**

**ತಸ್ಯ ಪತ್ನೀದ್ವಯಂ ಜಾತಂ ಪಾತಿವ್ರತ್ಯಚರಿತ್ರಭೃತ್ ।**
**ಏಕಾ ಮಂದಾಕಿನೀನಾಮ್ನೀ ದ್ವಿತೀಯಾ ಕೈಕಸೀ ಸ್ಮೃತಾ ॥ ೧೮ ॥**

**ಪೂರ್ವಸ್ಯಾಂ ಧನದೋ ಜಜ್ಞೇ ಲೋಕಪಾಲವಿಲಾಸಧೃಕ್ ।**
**ಯೋಽಸೌ ಶಿವಪ್ರಸಾದೇನ ಲಂಕಾವಾಸಮಚೀಕರತ್ ॥ ೧೯ ॥**

---

ನೀನು ಎಲ್ಲವನ್ನೂ ತಿಳಿದಿದ್ದೀಯೆ. ನನ್ನ ಮೇಲೆ ದಯೆಯಿಟ್ಟು ಅದೆಲ್ಲವನ್ನೂ ತಿಳಿಸು. ಎಂದು ಕೇಳಿದನು.

೧೬. ಅಗಸ್ತ್ಯನು ರಾಮನ ಈ ಮಾತನ್ನು ಕೇಳಿ ಹೇಳಲು ಮೊದಲುಮಾಡಿದನು.

೧೭. ಎಲೈ ರಾಜನೇ, ಸೃಷ್ಟಿಕರ್ತನು ಬ್ರಹ್ಮನು. ಆತನು ತ್ರಿಮೂರ್ತಿಗಳಲ್ಲೊಬ್ಬನು. ಆ ಬ್ರಹ್ಮನಿಗೆ ಪುಲಸ್ತ್ಯನೆಂಬ ಮಗನಾದನು. ಅವನ ಮಗನು ವಿಶ್ರವಸ್ಸೆಂಬುವನು. ವೇದವಿದ್ಯೆಯಲ್ಲಿ ವಿಶಾರದನು.

೧೮. ಅವನಿಗೆ ಇಬ್ಬರು ಹೆಂಡಿರು. ಒಬ್ಬಳು ಮಂದಾಕಿನಿಯು. ಮತ್ತೊಬ್ಬಳು ಕೈಕಸಿ ಎಂಬುವಳು.

೧೯. ಮೊದಲನೆಯವಳಾದ ಮಂದಾಕಿನಿಗೆ ಕುಬೇರನೆಂಬ ಮಗನಾದನು. ಅವನೇ ಲೋಕಪಾಲಕರಲ್ಲಿ ಒಬ್ಬನಾದನು. ಅವನು ಶಿವನ ಅನುಗ್ರಹದಿಂದ ಲಂಕೆಯಲ್ಲಿ ವಾಸಿಸುತ್ತಿದ್ದನು.

ವಿದ್ಯುನ್ಮಾಲೀಸುತಾಯಾಂ ತು ಪುತ್ರತ್ರಯಮಭೂನ್ಮಹತ್ ।
ರಾವಣಃ ಕುಂಭಕರ್ಣಶ್ಚ ತಥಾ ಪುಣ್ಯೋ ವಿಭೀಷಣಃ ॥ ೨೦ ॥

ರಾಕ್ಷಸ್ಯುದರಜನ್ಮತ್ವಾತ್ಸಂಧ್ಯಾಸಮಯಸಂಭವಾತ್ ।
ದ್ವಯೋರಧರ್ಮನಿಪುಣಾ ಮತಿರಾಸೀನ್ಮಹಾಮತೇ ॥ ೨೧ ॥

ಏಕದಾ ತು ವಿಮಾನೇನ ಪುಷ್ಪಕೇಣ ಸುಶೋಭಿನಾ ।
ಕಾಂಚನೀಯೋಪಭೂಷೇಣ ಕಿಂಕಿಣೀಜಾಲಮಾಲಿನಾ ॥ ೨೨ ॥

ಆರುಹ್ಯ ಪಿತರೌ ದ್ರಷ್ಟುಂ ಯಯೌ ಶೋಭಾಸಮನ್ವಿತಃ ।
ಸ್ವಗಣೈಸ್ಸಂಸ್ತುತೋ ಭೂತ್ವಾ ನಾನಾರತ್ನವಿಭೂಷಣೈಃ ॥ ೨೩ ॥

ಆಗತ್ಯ ಪಿತ್ರೋಶ್ಚರಣೇ ಪತಿತ್ವಾ ಚಿರಮಾತ್ಮಜಃ ।
ಹರ್ಷವಿಹ್ವಲಿತಾತ್ಮಾ ಚ ರೋಮಾಂಚಿತತನೂರುಹಃ ॥ ೨೪ ॥

ಉವಾಚ ಮೇಽದ್ಯ ಸುದಿನಂ ಮಹಾಭಾಗ್ಯಫಲೋದಯಂ ।
ಯನ್ಮೇ ಯುಷ್ಮತ್ಪದೌ ದೃಷ್ಟ್ವಾ ಮಹಾಪುಣ್ಯದದರ್ಶನೌ ॥ ೨೫ ॥

---

೨೦. ವಿದ್ಯುನ್ಮಾಲಿಯ ಮಗಳಾದ ಆ ಕೈಕಸಿಯಲ್ಲಿ ರಾವಣ, ಕುಂಭಕರ್ಣ, ವಿಭೀಷಣರೆಂದು ಮೂವರು ಮಕ್ಕಳಾದರು.

೨೧. ಅವರಲ್ಲಿಬ್ಬರು ರಾಕ್ಷಸಿಯ ಹೊಟ್ಟೆಯಲ್ಲಿ ಹುಟ್ಟಿದುದರಿಂದಲೂ, ಸಂಧ್ಯಾ ಕಾಲದಲ್ಲಿ ಜನ್ಮವೆತ್ತಿದುದರಿಂದಲೂ ಅವರಿಗೆ ಅಧರ್ಮದ ಬುದ್ಧಿಯುಂಟಾಯಿತು.

೨೨—೨೫. ಒಂದು ಸಾರಿ ಕುಬೇರನು ಚಿನ್ನದ ಅಲಂಕಾರಗಳಿಂದಲೂ ಸಣ್ಣ ಗೆಜ್ಜೆಗಳಿಂದಲೂ ಅಲಂಕೃತವಾದ, ಉತ್ತಮವಾದ ಪುಷ್ಪಕವಿಮಾನವನ್ನು ಹತ್ತಿ, ತನ್ನ ಪರಿವಾರದೊಂದಿಗೆ ತನ್ನ ತಾಯಿತಂದೆಯರಾದ, ಮಂದಾಕಿನೀವಿಶ್ರವಸ್ಸುಗಳನ್ನು ನೋಡಲು ಅಟ್ಟಹಾಸದಿಂದ ಬಂದು ತಂದೆತಾಯಿಯರ ಪಾದದ ಮೇಲೆ ಬಿದ್ದು ಬಹು ಕಾಲ ಸಂತೋಷದಿಂದಿದ್ದು ರೋಮಾಂಚಿತನಾಗಿ, ಈ ದಿನವೇ ಸುದಿನವು ಈ ದಿನ ತಮ್ಮ ಪಾದಸ್ಪರ್ಶನಗಳಿಂದ ನನ್ನ ಭಾಗ್ಯವು ಉದಯವಾಯಿತು ಎಂದನು.

ಇತ್ಯಾದಿಭಿಃ ಸ್ತುತಿಪದ್ಯೈಃ ಸ್ತುತ್ವಾಗಾತ್ಸ್ವಕಮಂದಿರಂ ।
ಪಿತರಾವಪಿ ಸಂಹೃಷ್ಟೌ ಪುತ್ರಸ್ನೇಹಾದ್ಬಭೂವತುಃ ॥ ೨೬ ॥

ತಂ ದೃಷ್ಟ್ವಾ ರಾವಣೋ ರಾಜಾ ಧೀಮಾನ್ ಜಗಾದ ನಿಜಮಾತರಂ ।
ಕೋಽಯಂ ಪುಮಾನ್ ಸುರೋ ವಾಽಥ ಯಕ್ಷೋ ವಾಥ ನರೋತ್ತಮಃ
॥ ೨೭ ॥

ಯೋಽಸೌ ಮಮ ಪಿತುಃ ಪಾದೌ ಸನ್ನಿಷೇವ್ಯ ಗತಃ ಪುನಃ ।
ಮಹಾಭಾಗ್ಯನಿಧಿಃ ಸ್ವೀಯೈರ್ಗಣೈಃ ಸಪರಿವಾರಿತಃ ॥ ೨೮ ॥

ಕೇನೇದಂ ತಪಸಾ ಲಬ್ಧಂ ವಿಮಾನಂ ವಾಯುವೇಗಧೃಕ್ ।
ಉದ್ಯಾನಾರಾಮಲೀಲಾದಿವಿಲಾಸಸ್ಥಾನಮುತ್ತಮಂ ॥ ೨೯ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಜನನೀ ರೋಷವಿಕ್ಲಬಾ ।
ಉವಾಚ ಪುತ್ರಂ ವಿಮನಾಃ ಕಿಂಚಿನ್ನೇತ್ರವಿಕಾರಿಣೀ ॥ ೩೦ ॥

---

೨೬. ಇವೇ ಮೊದಲಾದ ಸ್ತುತಿವಾಕ್ಯಗಳಿಂದ ಹೊಗಳಿ, ತನ್ನ ಮನೆಗೆ ಹೊರಟುಹೋದನು. ತಾಯಿತಂದೆಗಳೂ ಕೂಡ ಮಗನ ಈ ರೀತಿಯನ್ನು ನೋಡಿ ಸಂತೋಷಪಟ್ಟರು.

೨೭-೨೮. ಆತನನ್ನು ರಾವಣನು ನೋಡಿ, ತಾಯಿಯನ್ನು ಕುರಿತು, ಅಮ್ಮಾ ಈ ಮನುಷ್ಯನಾರು? ದೇವತೆಯೇ? ಯಕ್ಷನೇ? ಮನುಜನೇ? ಅವನಾರು? ನನ್ನ ತಂದೆಯ ಪಾದಗಳನ್ನು ಸೇವಿಸಿ ಮತ್ತೆ ಹೊರಟುಹೋದನಲ್ಲಾ, ಆ ಭಾಗ್ಯನಿಧಿ ಯಾರು?

೨೯. ಉದ್ಯಾನವನವೇ ಮುಂತಾದ ವಿಲಾಸಸ್ಥಾನಗಳಿಂದ ಶೋಭಿಸುತ್ತಿರುವ ವಾಯುವೇಗದ ಈ ವಿಮಾನವನ್ನು ಇವನು ಯಾವ ತಪಸ್ಸಿನಿಂದ ಪೊಂದಿದನು? ಎಂದು ಕೇಳಿದನು.

೩೦. ಶೇಷನು ಹೇಳಿದನು:—ಮಗನ ಈ ಮಾತನ್ನು ಕೇಳಿ ಕೈಕಸಿಯು ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಇಂತೆಂದಳು.

ರೇ ! ಪುತ್ರ ಶೃಣು ಮದ್ವಾಕ್ಯಂ ಬಹುಶಿಕ್ಷಾಸಮನ್ವಿತಂ ।
ಏತಸ್ಯ ಜನ್ಮಕರ್ಮಾದಿ ವಿಚಾರಚತುರಾಧಿಕಂ ॥ ೩೧ ॥

ಸಪತ್ನ್ಯಾ ಮಮ ಕುಕ್ಷಿಸ್ಥಂ ನಿಧಾನಂ ಸಮುಪಸ್ಥಿತಂ ।
ಯೇನ ಸ್ವಮಾತುರ್ವಿಮಲಂ ಕುಲಮುಜ್ಜ್ವಲಿತಂ ಮಹತ್ ॥ ೩೨ ॥

ತ್ವಂ ತು ಮತ್ಕುಕ್ಷಿಗಃ ಕೀಟಃ ಸ್ವೋದರಸ್ಯ ಪ್ರಪೂರಕಃ ।
ಯಥಾ ಖರಃ ಸ್ವಕಂ ಭಾರಂ ಜಾನಾತಿ ನ ಚ ತದ್ಗುಣಂ ॥ ೩೩ ॥

ತಥಾ ತ್ವಂ ಲಕ್ಷ್ಯಸೇಽಜ್ಞಾನೀ ಶಯನಾಶನಭೋಗವಾನ್ ।
ಸುಪ್ತೋ ಗತಃ ಕ್ವಚಿದ್ಭ್ರಷ್ಟ ಇತ್ಯೇವ ತವ ಸಂಭವಃ ॥ ೩೪ ॥

ಅನೇನ ತಪಸಾ ಲಬ್ಧಂ ಶಿವಸಂತೋಷಕಾರಿಣಾ ।
ಲಂಕಾವಾಸೋ ಮನೋವೇಗಂ ವಿಮಾನಂ ರಾಜ್ಯಸಂಪದಃ ॥ ೩೫ ॥

---

೩೧. ಎಲೈ ಮಗನೇ! ಬಹಳ ಬುದ್ಧಿಯಿಂದ ಕೂಡಿ ವಿಚಾರಮಾಡಿದರೆ ಬಹು ವಿಷಯಗಳುಳ್ಳ ಇವನ ಹುಟ್ಟು ಕೆಲಸಗಳನ್ನು ಹೇಳುತ್ತೇನೆ ಕೇಳು.

೩೨. ಅಪ್ಪ ಮಗುವೇ! ಸವತಿಯ ಮಾತನ್ನೆತ್ತಿದುದರಿಂದ ನನ್ನ ಹೊಟ್ಟೆಯಲ್ಲಿ ಗಂಟುಕಟ್ಟಿದಂತಿದ್ದ ವಿಷಯಗಳು ಹೊರಗೆ ಬಂದುವು. ಅವನಿಂದ ತನ್ನ ತಾಯಿಯ ವಂಶವು ಪ್ರಕಾಶಿತವಾಯಿತು.

೩೩. ಕತ್ತೆಯು ತಾನು ಹೊತ್ತ ಭಾರವನ್ನು ಬಲ್ಲುದೇ ಹೊರತು ಅದರ ಸವಿಯನ್ನು ಕಾಣದಂತೆ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಒಂದು ಕೀಟ. ನಿನ್ನ ಹೊಟ್ಟೆಯನ್ನು ಮಾತ್ರ ತುಂಬಿಕೊಳ್ಳತಕ್ಕವನು.

೩೪. ಆ ಕತ್ತೆಯಂತೆ ತಿನ್ನುವುದು, ಮಲಗುವುದು, ಭೋಗಿಸುವುದನ್ನು ಮಾತ್ರ ತಿಳಿದಿದ್ದೀಯೆ. ನಿದ್ದೆಮಾಡುವುದು, ಓಡಾಡುವುದು, ನಾಶವಾಗುವುದು ಇದೇ ನಿನ್ನ ಜನ್ಮದ ಫಲ.

೩೫. ಈತನಾದರೋ ತಪಸಿನ್ನಿಂದ ಶಿವನನ್ನು ಸಂತೋಷಪಡಿಸಿ, ಲಂಕೆಯಲ್ಲಿ ವಾಸಸ್ಥಾನವನ್ನೂ, ಮನೋವೇಗವುಳ್ಳ ವಿಮಾನವನ್ನೂ, ರಾಜ್ಯಸಂಪತ್ತನ್ನೂ ಪಡೆದನು.

ಸುಧನ್ಯಾ ಜನನೀ ತಸ್ಯ ಸುಭಾಗ್ಯಾ ಸುಮನೋದಯಾ ।
ಯಸ್ಯಾಃ ಪುತ್ರೋ ನಿಜಗುಣೈರ್ಲಬ್ಧವಾನ್ಮಹತಾಂ ಪದಂ ॥ ೩೬ ॥

ಇತಿ ಕ್ರುಧಾ ಭಾಷಿತಮಾರ್ತಯಾ ತಯಾ
ಮಾತ್ರಾ ಸ್ವಯಾಽಕರ್ಣ್ಯ ದುರಾತ್ಮಸತ್ತಮಃ ।
ಶೇಷಂ ವಿಧಾಯಾತ್ಮಗತಂ ಪುನರ್ವಚೋ
ಜಗಾದ ತಾಂ ನಿಶ್ಚಯಭೃತ್ತಪಃ ಪ್ರತಿ ॥ ೩೭ ॥

॥ ರಾವಣ ಉವಾಚ ॥

ಜನನ್ಯಾಕರ್ಣಯ ವಚೋ ಮಮ ಗರ್ವಸಮನ್ವಿತಂ ।
ರತ್ನಗರ್ಭಾ ತ್ವಮೇವಾಸಿ ಯಸ್ಯಾಃ ಪುತ್ರಾಸ್ತ್ರಯೋ ವಯಂ ॥ ೩೮ ॥

ಕೋಽಸೌ ಕೀಟಸ್ಸ ಧನದಃ ಕ್ವ ತಪಃ ಸ್ವಲ್ಪಕಂ ಪುನಃ ।
ಕಾ ಲಂಕಾ ಕಿಂ ತು ತದ್ರಾಜ್ಯಂ ಸ್ವಲ್ಪಸೇವಕಸಂಯುತಂ ॥ ೩೯ ॥

ಮಾತಃ ಶೃಣು ಮಮೋತ್ಸಾಹಾತ್ಪ್ರತಿಜ್ಞಾಂ ಕರುಣಾನ್ವಿತೇ ।
ನ ಕೇನಾಪಿ ಕೃತಾಂ ಕರ್ತ್ರಾ ಮಹಾಭಾಗ್ಯೇ ಹಿ ಕೈಕಸಿ ॥ ೪೦ ॥

---

೩೬. ಇವನು ತನ್ನ ಗುಣಗಳಿಂದ ಈ ವಿಧವಾದ ಸಂಪತ್ತನ್ನು ಹೊಂದಿರುವುದರಿಂದ ಈತನನ್ನು ಹೆತ್ತತಾಯಿಯು ಧನ್ಯಳಲ್ಲವೇ ? ಭಾಗ್ಯವಂತಳಲ್ಲವೇ ?

೩೭. ತಾಯಿಯು ಕೋಪಗೊಂಡು ಈ ರೀತಿ ಹೇಳಿದುದನ್ನು ಕೇಳಿ ಆ ರಾವಣನು ಮನಸ್ಸಿನಲ್ಲಿ ತಾನೂ ತಪಸ್ಸುಮಾಡಬೇಕೆಂದು ನಿರ್ಧರಿಸಿ ಇಂತೆಂದನು.

೩೮. ರಾವಣನಿಂತೆದನು :—ಅಮ್ಮಾ ! ನಾನು ಹೆಮ್ಮೆಯಿಂದ ಹೇಳುತ್ತೇನೆ ಕೇಳು. ನಾವು ಮೂವರು ಮಕ್ಕಳು ನಿನಗಿರುವುದರಿಂದ ನೀನೇ ರತ್ನಗರ್ಭೆಯು, ಪುತ್ರರತ್ನವನ್ನು ಹೆತ್ತವಳು.

೩೯. ಆ ಧನದವೆಂಬ ಕೀಟವೆಷ್ಟರದು? ಅವನ ಆ ಅಲ್ಪವಾದ ತಪಸ್ಸೆಷ್ಟರದು ? ಆ ಅಲ್ಪವಾದ ಸೇವಕರು ತಾನೇ ಏನು ?

೪೦. ಎಲೈ ಭಾಗ್ಯವತಿಯಾದ ತಾಯಿಯೇ, ಕೇಳು ಯಾರೂ ಮಾಡದ ಪ್ರತಿಜ್ಞೆಯನ್ನು ಉತ್ಸಾಹದಿಂದ ಮಾಡುತ್ತೇನೆ.

ಯದ್ಯೇವಂ ಭುವನಂ ಸರ್ವಂ ವಶೇ ನ ಸ್ಥಾಪಯಾಮಿ ವೈ ।
ತಪೋಭಿರ್ದುಷ್ಕರೈಃ ಕೃತ್ವಾ ಬ್ರಹ್ಮಸಂತೋಷಕಾರಕೈಃ ॥ ೪೧ ॥

ಅನ್ನೋದಕೇ ಸದಾ ತ್ಯಕ್ತ್ವಾ ನಿದ್ರಾಂ ಕ್ರೀಡಾಂ ತಥಾ ಪುನಃ ।
ಚೇತ್ತದಾ ಪಿತೃಲೋಕಸ್ಯ ಘಾತಾತ್ಪಾಪಂ ಭವೇನ್ಮಮ ॥ ೪೨ ॥

ಕುಂಭಕರ್ಣೋಽಪಿ ಕೃತವಾನ್ ವಿಭೀಷಣಸಮನ್ವಿತಃ ।
ರಾವಣೋಥ ಸಹ ಭ್ರಾತ್ರೇತ್ಯುಕ್ತ್ವಾಽಗಾದ್ಗಿರಿಕಾನನಂ ॥ ೪೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾವಣೋತ್ಪತ್ತಿರ್ನಾಮ ಷಷ್ಠೋಽಧ್ಯಾಯಃ



---

೪೧-೪೨. ನಾನು ಅನ್ನ ನೀರುಗಳನ್ನು ಬಿಟ್ಟು ಬ್ರಹ್ಮನನ್ನು ಸಂತೋಷಪಡಿಸುವ ದುಷ್ಕರವಾದ ತಪಸ್ಸಿನಿಂದ ಪ್ರಪಂಚವನ್ನೇ ನನ್ನ ಅಧೀನಮಾಡಿಕೊಳ್ಳದಿದ್ದರೆ ಪಿತೃಗಳ ಸಮೂಹವನ್ನೇ ಕೊಂದರೆ ಯಾವ ಪಾಪವು ಸಂಭವಿಸುವುದೋ ಆ ಪಾಪವು ನನಗೆ ಬರಲಿ ಎಂದು ಪ್ರತಿಜ್ಞೆಮಾಡಿದನು.

೪೩. ಕುಂಭಕರ್ಣನೂ ವಿಭೀಷಣನೂ ಇವನಂತೆಯೇ ಪ್ರತಿಜ್ಞೆಮಾಡಿದರು. ಹೀಗೆಂದು ರಾವಣನು ಹೇಳಿ ತಮ್ಮಂದಿರೊಡನೆ ತಪಸ್ಸಿಗೋಸ್ಕರ ಬೆಟ್ಟಗಳಿರುವ ಕಾಡಿಗೆ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾವಣೋತ್ಪತ್ತಿಯೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಅಥೋಗ್ರಂ ಸ ತಪೋ ದೈತ್ಯೋ ದಶವರ್ಷಸಹಸ್ರಕಂ ।
ಚಕಾರ ಭಾನುಮುಕ್ತ್ವಾ ಚ ಪಶ್ಯನ್ನೂರ್ಧ್ವಂ ಪದೇ ಸ್ಥಿತಃ ॥ ೧ ॥

ಕುಂಭಕರ್ಣೋಽಪಿ ಕೃತವಾಂಸ್ತಪಃ ಪರಮದುಶ್ಚರಂ ।
ವಿಭೀಷಣಸ್ತು ಧರ್ಮಾತ್ಮಾ ಚಕಾರ ಪರಮಂ ತಪಃ ॥ ೨ ॥

ತದಾ ಪ್ರಸನ್ನೋ ಭಗವಾನ್ ದೇವದೇವಃ ಪ್ರಜಾಪತಿಃ ।
ದೇವದಾನವಯಕ್ಷಾದಿಮುಕುಟೈಃ ಪರಿಸೇವಿತಃ ॥ ೩ ॥

---

## ಏಳನೆಯ ಅಧ್ಯಾಯವು

೧. ಅಗಸ್ತ್ಯನು ಹೇಳಿದನು:—ಆ ಮೇಲೆ ಆ ರಾವಣನು ಮೆಟ್ಟಿಂಗಾಲಿನಲ್ಲಿ ನಿಂತುಕೊಂಡು, ಸೂರ್ಯನಲ್ಲಿ ದೃಷ್ಟಿಯನ್ನು ನೆಲೆಗೊಳಿಸಿ, ಹತ್ತುಸಾವಿರ ವರ್ಷಗಳ ವರೆಗೂ ತಪಸ್ಸುಮಾಡಿದನು.

೨. ಅದರಂತೆಯೇ ಕುಂಭಕರ್ಣವಿಭೀಷಣರೂ ಉಗ್ರವಾದ ತಪಸ್ಸನ್ನೇ ಮಾಡಿದರು.

೩. ಆಗ ಸಕಲಸುರಾಸುರವಂದಿತನಾದ ಬ್ರಹ್ಮನು ಅವರ ತಪಸ್ಸಿನಿಂದ ಸಂತುಷ್ಟನಾಗಿ ಅವರಿಗೆ ಪ್ರತ್ಯಕ್ಷನಾಗಿ,

ದದೌ ರಾಜ್ಯಂ ಚ ಸುಮಹದ್ಭುವನತ್ರಯಭಾಸ್ವರಂ ।
ವಪುಶ್ಚ ಕೃತವಾನ್ ರಮ್ಯಂ ದೇವದಾನವಸೇವಿತಂ ॥ ೪ ॥

ತಪಾ ಸಂತಾಪಿತೋ ಭ್ರಾತಾ ಧನದೋ ಧರ್ಮಬುದ್ಧಿಮಾನ್ ।
ವಿಮಾನಂ ತು ತತೋ ನೀತಂ ಲಂಕಾ ಚ ನಗರೀ ಹತಾತ್ ॥ ೫ ॥

ಭುವನಂ ತಾಪಿತಂ ಸರ್ವಂ ದೇವಾಶ್ಚೈವ ದಿವೋ ಗತಾಃ ।
ಹತವಾನ್ ಬ್ರಾಹ್ಮಣಕುಲಂ ಮುನೀನಾಂ ಕುಲಕೃಂತನಃ ॥ ೬ ॥

ತದಾತಿದುಃಖಿತಾ ದೇವಾಃ ಸೇಂದ್ರಾ ಬ್ರಹ್ಮಾಣಮಾಯಯುಃ ।
ಸ್ತುತಿಂ ಚಕ್ರುರ್ಮಹಾತ್ಮಾನೋ ದಂಡವತ್ಪ್ರಣತಿಂ ಗತಾಃ ॥ ೭ ॥

ತೇ ತುಷ್ಟುವುಃ ಸುರಾಸ್ಸರ್ವೇ ವಾಗ್ಭಿರಿಷ್ಟಾಭಿರಾದೃತಾಃ ।
ತತಃ ಪ್ರಸನ್ನೋ ಭಗವಾನ್ ಕಿಂ ಕರೋಮೀತಿ ಚಾಬ್ರವೀತ್ ॥ ೮ ॥

---

೪. ಮೂರು ಲೋಕದಲ್ಲಿಯೂ ಇಲ್ಲದ ಶರೀರಸೌಂದರ್ಯವನ್ನು ಅನುಗ್ರಹಿಸಿ ದಾನವರೂ ಅವನನ್ನು ಸೇವಿಸುವಂತೆ ವರಕೊಟ್ಟನು.

೫. ಬಳಿಕ ಆ ರಾವಣನು ತನ್ನ ಸಹೋದರನಾದ ಕುಬೇರನನ್ನು ಜಯಿಸಿ ಅವನ ಲಂಕೆಯನ್ನೂ ವಿಮಾನವನ್ನೂ ಕಿತ್ತುಕೊಂಡನು.

೬. ಪ್ರಪಂಚವೆಲ್ಲವನ್ನೂ ತನ್ನ ಪರಾಕ್ರಮದಿಂದ ನಡುಗಿಸಿದನು. ಇವನಿಗೆ ಹೆದರಿ ದೇವತೆಗಳು ಸ್ವರ್ಗವನ್ನು ಬಿಟ್ಟೋಡಿದರು. ಋಷಿಗಳನ್ನು ನಾನಾ ವಿಧವಾಗಿ ಹಿಂಸೆಮಾಡುತ್ತಾ ಬ್ರಾಹ್ಮಣರ ವಂಶವನ್ನೇ ನಾಶಮಾಡುತ್ತ ಬಂದನು.

೭. ಆಗ ಅತಿ ದುಃಖಗೊಂಡ ದೇವತೆಗಳು ಇಂದ್ರನೊಡನೆ ಬ್ರಹ್ಮನ ಬಳಿಗೆ ಬಂದು ದಂಡಪ್ರಮಾಣಮಾಡಿ ಸ್ತುತಿಸಿದರು.

೮. ಆ ದೇವತೆಗಳು ಉತ್ತಮವಾದ ಸ್ತೋತ್ರದಿಂದ ಸ್ತುತಿಸಲು ಬ್ರಹ್ಮನು ಪ್ರಸನ್ನನಾಗಿ ನಿಮಗೇನುಬೇಕೆಂದು ಕೇಳಿದನು.

**ತತೋ ನಿವೇದಯಾಂಚಕ್ರುರ್ಬ್ರಹ್ಮಣೇ ವಿಬುಧಾಃ ಪುರಾ ।**
**ದಶಗ್ರೀವಾಚ್ಚ ಸಂಕುಷ್ಟಂ ತಥಾ ನಿಜಪರಾಭವಂ ॥ ೯ ॥**

**ಕ್ಷಣಂ ಧ್ಯಾತ್ವಾ ಯಯೌ ಬ್ರಹ್ಮಾ ಕೈಲಾಸಂ ತ್ರಿದಶೈಸ್ಸಹ ।**
**ತಸ್ಯ ಶೈಲಸ್ಯ ಪಾರ್ಶ್ವೇ ತು ವೈಚಿತ್ರ್ಯೇಣ ಸಮಾಕುಲಾಃ ।**
**ಸ್ಥಿತಾಸ್ಸಂತುಷ್ಟುವುರ್ದೇವಾಃ ಶಂಭುಂ ಶಕ್ರಪುರೋಗಮಾಃ ॥ ೧೦ ॥**

**ನಮೋ ಭವಾಯ ಶರ್ವಾಯ ನೀಲಗ್ರೀವಾಯ ತೇ ನಮಃ ।**
**ನಮಸ್ಸ್ಥೂಲಾಯ ಸೂಕ್ಷ್ಮಾಯ ಬಹುರೂಪಾಯ ತೇ ನಮಃ ॥ ೧೧ ॥**

**ಇತಿ ಸರ್ವಮುಖೇನೋಕ್ತಾಂ ವಾಣೀಮಾಕರ್ಣ್ಯ ಶಂಕರಃ ।**
**ಪ್ರೋವಾಚ ನಂದಿನಂ ದೇವಾನಾನಯೇತಿ ಮಮಾಂತಿಕಂ ॥ ೧೨ ॥**

**ಏತಸ್ಮಿನ್ನಂತರೇ ದೇವಾ ಆಹೂತಾ ನಂದಿನಾ ಧ್ರುವಂ ।**
**ಪ್ರವಿಶ್ಯಾಂತಃಪುರೇ ದೇವಾ ದದೃಶುರ್ವಿಸ್ಮಿತೇಕ್ಷಣಾಃ ॥ ೧೩ ॥**

---

೯. ಅನಂತರ ಆ ದೇವತೆಗಳು ದಶಗ್ರೀವನಿಂದ ಉಂಟಾದ ಕಷ್ಟವನ್ನೂ ಅವನಿಂದ ತಾವು ಪರಾಜಿತರಾಗಿರುವುದನ್ನೂ ಬ್ರಹ್ಮನಿಗೆ ಅರಿಕೆಮಾಡಿಕೊಂಡರು.

೧೦. ಬ್ರಹ್ಮನು ಕ್ಷಣಕಾಲ ಯೋಚಿಸಿ, ಆ ದೇವತೆಗಳನ್ನು ತನ್ನ ಜೊತೆಯಲ್ಲಿಯೇ ಕರೆದುಕೊಂಡು ಕೈಲಾಸಕ್ಕೆ ಹೋದನು. ಅಲ್ಲಿ ಆ ದೇವತೆಗಳೆಲ್ಲರೂ ಪರಮೇಶ್ವರನನ್ನು ನಾನಾವಿಧ ರೀತಿಗಳಿಂದ ಸ್ತೋತ್ರಮಾಡಿದರು.

೧೧. ಓ ಪರಮೇಶ್ವರನೇ, ನೀನು ಭವ, ಶರ್ವ, ನಿಲಗ್ರೀವ ಮೊದಲಾದ ದಿವ್ಯನಾಮಗಳಿಂದ ಪ್ರಸಿದ್ಧನಾದವನು. ನೀನು ಅವ್ಯಕ್ತಸ್ವರೂಪನಾಗಿದ್ದರೂ ಭಕ್ತರ ಅನುಗ್ರಹಕ್ಕಾಗಿ ಸ್ಥೂಲಸೂಕ್ಷ್ಮಗಳಾದ ಬಗೆಬಗೆಯ ರೂಪಗಳನ್ನು ಧರಿಸುವೆ. ಅಥವಾ ಸ್ಥೂಲಸೂಕ್ಷ್ಮವಾದ ಈ ಚರಾಚರಪ್ರಪಂಚವೆಲ್ಲವೂ ನಿನ್ನ ರೂಪಗಳೇ ಆಗಿರುವವು. ಇಂತಹ ಪ್ರಪಂಚಸ್ವರೂನಾದ ನಿನಗೆ ನಮಸ್ಕಾರವು ಎಂದು ಸ್ತೋತ್ರಮಾಡಿದರು.

೧೨. ಎಲ್ಲರೂ ಹೀಗೆ ಸ್ತುತಿಸುತ್ತಿರುವುದನ್ನು ಶಂಕರನು ಕೇಳಿ ನಂದಿಯನ್ನು ಕರೆದು ಅವರೆಲ್ಲರನ್ನೂ ನನ್ನ ಬಳಿಗೆ ಕರೆದುಕೊಂಡುಬಾ ಎಂದನು.

೧೩. ನಂದಿಯು ಕರೆಯಲು ಆ ದೇವತೆಗಳು ಆ ಶಂಭುವಿನ ಅಂತಃಪುರಕ್ಕೆ ಹೋಗಿ ಅಲ್ಲಿನ ದೃಶ್ಯವನ್ನು ನೋಡಿ ಆಶ್ಚರ್ಯಪಟ್ಟರು.

ಬ್ರಹ್ಮಾಗತ್ಯ ದದರ್ಶಾಥ ಶಂಕರಂ ಲೋಕಶಂಕರಂ ।
ಗಣಕೋಟಿಸಹಸ್ರೈಸ್ತು ಸೇವಿತಂ ಮೋದಶಾಲಿಭಿಃ ॥ ೧೪ ॥

ನಗ್ನೈರ್ವಿಕಾರರೂಪೈಶ್ಚ ಕುಟಿಲೈರ್ಮಲಿನೈಸ್ತಥಾ ।
ಪ್ರಣಿಪತ್ಯಾಗ್ರತಸ್ಥಿತ್ವಾ ಸಹ ದೇವೈಃ ಪಿತಾಮಹಃ ॥ ೧೫ ॥

ಉವಾಚ ದೇವದೇವೇಶಂ ಪಶ್ಯಾವಸ್ಥಾಂ ದಿವೌಕಸಾಂ ।
ಕೃಪಾಂ ಕುರು ಮಹಾದೇವ ಶರಣಾಗತವತ್ಸಲ ॥ ೧೬ ॥

ದುಷ್ಟದೈತ್ಯವಧಾರ್ಥಂ ಚ ಸಮುದ್ಯೋಗ್ಯಂ ವಿಧೇಹ್ಯತಃ ।
ಸೋಽಪಿ ತದ್ವಚನಂ ಶ್ರುತ್ವಾ ದೈನ್ಯಶೋಕಸಮನ್ವಿತಂ ॥ ೧೭ ॥

ತ್ರಿದಶೈಸ್ಸಹಿತಸ್ಸದ್ಯೋ ರಾಜಗಾಮ ಹರೇಃ ಪದಂ ।
ತುಷ್ಟುವುರ್ಮುನಯಸ್ಸರ್ವೇ ಸಸುರೋರಗಕಿನ್ನರಾಃ ॥ ೧೮ ॥

ಜಯ ಮಾಧವ ದೇವೇಶ ಜಯ ಭಕ್ತಜನಾರ್ತಿಹ ।

---

೧೪. ಬ್ರಹ್ಮನು ಒಳಗೆ ಬಂದು, ಅನೇಕಕೋಟಿ ಗಣಗಳು ಸಂತೋಷದಿಂದ ಸೇವಿಸುತ್ತಿರುವ ಶಂಕರನನ್ನು ನೋಡಿದನು.

೧೫. ಆ ಸೇವಿಸುತ್ತಿರುವ ಗಣಗಳು ಬೆತ್ತಲೆಯೂ, ವಿಕಾರರೂಪವುಳ್ಳವರಾಗಿಯೂ, ವಕ್ರವಕ್ರವಾಗಿಯೂ, ಮಲಿನರಾಗಿಯೂ ಇದ್ದರು. ಇಂಥಹವರಿಂದ ಸೇವೆ ತೆಗೆದುಕೊಳ್ಳುತ್ತಿರುವ ಶಂಕರನನ್ನು ಬ್ರಹ್ಮನು ದೇವತೆಗಳೊಡನೆ ನೋಡಿ,

೧೬-೧೮. ಎಲೈ ದೇವದೇವನಾದ ಶಂಭುವೇ, ಈ ದೇವತೆಗಳ ಅವಸ್ಥೆಯನ್ನು ನೋಡು. ಶರಣಾಗತವತ್ಸಲನೇ, ಇವರ ಮೇಲೆ ಕೃಪೆಮಾಡಿ ಆ ದುಷ್ಟನಾದ ರಾಕ್ಷಸನ ವಧೆಗೆ ಪ್ರಯತ್ನಮಾಡು ಎನ್ನಲು ಶಂಭುವು ದೀನತೆಯಿಂದ ಹೇಳಿದ ಈ ಮಾತನ್ನು ಕೇಳಿ ದೇವತೆಗಳೊಡನೆ ವಿಷ್ಣುವಿದ್ದಲ್ಲಿಗೆ ಬಂದನು. ಬಳಿಕ ಅವರೆಲ್ಲರೂ ಆ ವಿಷ್ಣುವನ್ನು ಸ್ತೋತ್ರಮಾಡಿದರು.

೧೯. ಎಲೈ ಮಾಧವನೇ, ದೇವೇಶನೇ, ನಿನಗೆ ಜಯವಾಗಲಿ. ಭಕ್ತರ ಕಷ್ಟಗಳನ್ನು ನಾಶಮಾಡುವವನೇ, ನಿನಗೆ ಜಯವಾಗಲಿ. ನಮ್ಮ ಮೇಲೆ ದಯವಿಡು.

ಕೃಪಾಂ ಕುರು ಮಹಾದೇವ ವಿಲೋಕಯ ಸ್ವಸೇವಕಾನ್ ।
ಇತ್ಯುಚ್ಚೈರ್ಜಗದುಸ್ಸರ್ವೇ ದೇವಾಶ್ಶರ್ವಪುರೋಗಮಾಃ ॥ ೧೯ ॥

ಇತ್ಯುಕ್ತಮಾಕರ್ಣ್ಯ ಸುರಾಧಿನಾಥೋ
ದುಷ್ಟಾಂ ಸುರಾರ್ತಿಂ ಪರಿಚಿಂತ್ಯ ವಿಷ್ಣುಃ ।
ಜಗಾದ ದೇವಾನ್ ಜಲದೋಚ್ಚಯಾ ಗಿರಾ
ದುಃಖಂ ತು ತೇಷಾಂ ಪ್ರಶಮಂ ನಯನ್ನಿವ ॥ ೨೦ ॥

ಭೋ ಬ್ರಹ್ಮಶರ್ವೇಂದ್ರಪುರೋಗಮಾಸ್ಸುರಾಃ
ಶೃಣ್ವನ್ತು ವಾಚಂ ಭವತಾಂ ಹಿತೇ ರತಾಂ ।
ಜಾನೇ ದಶಗ್ರೀವಭಯಂ ಕೃತಂ ವ
ಸ್ತನ್ನಾಶಯಾಮ್ಯದ್ಯ ಕೃತಾವತಾರಃ ॥ ೨೧ ॥

ಪುರೀ ತ್ವಯೋಧ್ಯಾ ರಘುವಂಶಜಾತೈ-
ರ್ನೃಪೈರ್ಮಹಾದಾನಮುಖಾದಿಸತ್ಕ್ರಿಯೈಃ ।
ಪ್ರಪಾಲಿತಾ ಭೂತಳಮಂಡಲಾಲಯಾ
ವಿರಾಜತೇ ರಾಜತಭೂಮಿಭಾಗ್ಯೈಃ ॥ ೨೨ ॥

---

ನಿನ್ನ ಸೇವಕರನ್ನು ನೋಡು ಎಂದು ಶಂಕರನೇ, ಮುಂತಾದ ಎಲ್ಲಾ ದೇವತೆಗಳೂ ಗಟ್ಟಿಯಾಗಿ ಸ್ತೋತ್ರಮಾಡುತ್ತಿರಲು,

೨೦. ಇದನ್ನು ಕೇಳಿ ವಿಷ್ಣುವು ದೇವತೆಗಳಿಗೆ ಬಂದಿರುವ ದುಷ್ಟನ ತೊಂದರೆಯನ್ನು ಯೋಚಿಸಿ, ಅವರ ದುಃಖವನ್ನು ನಾಶಮಾಡುವುದಕ್ಕಾಗಿ ಗಟ್ಟಿಯಾಗಿ ಇಂತೆಂದನು.

೨೧. ಎಲೈ ದೇವತೆಗಳಿರಾ, ನಿಮ್ಮ ಹಿತಕ್ಕೋಸ್ಕರ ಈಗ ಹೇಳುವ ಮಾತನ್ನು ಕೇಳಿರಿ. ದಶಗ್ರೀವನಿಂದುಂಟಾಗಿರುವ ಭಯವನ್ನು ನಾನು ತಿಳಿದಿದ್ದೇನೆ. ನಾನು ಭೂಮಿಯಲ್ಲಿ ಅವತರಿಸಿ ಅದನ್ನು ನಿವಾರಿಸುತ್ತೇನೆ.

೨೨. ಭೂಲೋಕದಲ್ಲಿ ಅಯೋಧ್ಯೆಯೆಂಬ ಒಂದು ಪಟ್ಟಣವಿದೆ. ಅದರಲ್ಲಿ ರಘುವಂಶದವರಿದ್ದಾರೆ. ಅವರು ಯಾಗಾದಿಗಳಿಂದಲೂ, ದಾನದಿಂದಲೂ ಪ್ರಖ್ಯಾತಿ ಹೊಂದಿದ್ದಾರೆ. ಆ ದೇಶವು ಸರ್ವಸಮೃದ್ಧವಾಗಿದೆ.

ತಸ್ಯಾಂ ದಶರಥೋ ರಾಜಾ ನಿರಪತ್ಯಃ ಶ್ರಿಯಾನ್ವಿತಃ ।
ಪಾಲಯತ್ಯಧುನಾ ರಾಜ್ಯಂ ದಿಕ್ಚಕ್ರಂ ಜಯವಾನ್ವಿಭುಃ ॥ ೨೩ ॥

ಸತು ವಂಧ್ಯಾದೃಷ್ಯಶೃಂಗಾತ್ಪ್ರಾರ್ಥಿತಾತ್ಪುತ್ರಕಾಮ್ಯಯಾ ।
ಪುತ್ರೇಷ್ಟ್ಯಾಂ ವಿಧಿನಾ ಯಜ್ವಾ ಮಹಾಬಲಸಮನ್ವಿತಃ ॥ ೨೪ ॥

ತತೋಽಹಂ ಪ್ರಾರ್ಥಿತಃ ಪೂರ್ವಂ ತಪಸಾ ತೇನ ಭೋಸ್ಸುರಾಃ ।
ಪತ್ನೀಷು ಭೂತ್ವಾ ತಿಸೃಷು ಚತುರ್ಧಾಪಿ ಭವತ್ಕೃತೇ ॥ ೨೫ ॥

ರಾಮಲಕ್ಷ್ಮಣಶತ್ರುಘ್ನಭರತಾಖ್ಯಾಸಮನ್ವಿತಃ ।
ಕರ್ತಾಸ್ಮಿ ರಾವಣೋದ್ಧಾರಂ ಸಮೂಲಬಲವಾಹನಂ ॥ ೨೬ ॥

ಭವಂತೋಽಪಿ ಸ್ವಕೈರಂಶೈರವತೀರ್ಯ ಚರಂತ್ವಿಹ ।
ಋಕ್ಷವಾನರರೂಪೇಣ ಸರ್ವತ್ರ ಪೃಥಿವೀತಳೇ ॥ ೨೭ ॥

---

೨೩. ಆ ರಾಜಧಾನಿಯಲ್ಲಿ ದಶರಥನೆಂಬ ರಾಜನಿದ್ದಾನೆ. ಬಹುಸಂಪತ್ತಿದೆ. ಆದರೆ ಅವನಿಗೆ ಮಕ್ಕಳಿಲ್ಲ. ಪ್ರಪಂಚವೆಲ್ಲವನ್ನೂ ಜಯಿಸಿ ಅಲ್ಲಿ ರಾಜ್ಯಭಾರವನ್ನು ಈಗ ಮಾಡುತ್ತಲಿದ್ದಾನೆ.

೨೪. ಈಗ ದಶರಥನು ತನಗೆ ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಋಷ್ಯಶೃಂಗನನ್ನು ಕರೆದುಕೊಂಡು ಬಂದು ಪುತ್ರಕಾಮೇಷ್ಟಿಯಾಗವನ್ನು ಮಾಡತಕ್ಕವನಿದ್ದಾನೆ.

೨೫. ಅವನು ನನ್ನನ್ನು ಪೂರ್ವದಲ್ಲಿ ಮಕ್ಕಳಿಗೋಸ್ಕರ ಪ್ರಾರ್ಥಿಸಿದ್ದಾನೆ. ನಿಮ್ಮಗಳಿಗೋಸ್ಕರ ನಾನು ಅವನ ಮೂರು ಪತ್ನಿಯರಲ್ಲಿ ನಾಲ್ಕು ಅಂಶಗಳಿಂದ ಹುಟ್ಟುತ್ತೇನೆ.

೨೬. ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಹೆಸರುಳ್ಳವನಾಗಿ ಹುಟ್ಟಿ, ಪರಿವಾರದೊಡನೆ ಇರುವ ರಾವಣನನ್ನು ಕೊಲ್ಲುತ್ತೇನೆ.

೨೭. ನೀವುಗಳು ನಿಮ್ಮನಿಮ್ಮ ಅಂಶಗಳಿಂದ ಕಪಿ ಕರಡಿಗಳ ರೂಪದಿಂದ ಅವತರಿಸಿ, ಈ ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಿರಿ.

ಇತ್ಯುಕ್ತ್ವಾ ವಿರರಾಮಾಶು ನಭಸೀರಿತವಾಙ್ಮನೇ ।
ದೇವಾಶ್ಶ್ರುತ್ವಾ ಮಹದ್ವಾಕ್ಯಂ ಸರ್ವೇ ವೈ ಹೃಷ್ಟಮಾನಸಾಃ ॥ ೨೮ ॥

ಪ್ರಚಕ್ರುರ್ಗದಿತಂ ಯಾದೃಗ್ದೇವದೇವೇನ ಧೀಮತಾ ।
ಸ್ವೈಸ್ವೈರಂಶೈರ್ಮಹೀ ಪೂರ್ಣಾ ಋಕ್ಷವಾನರರೂಪಿಭಿಃ ॥ ೨೯ ॥

ಯೋಽಸೌ ವಿಷ್ಣುರ್ಮಹಾದೇವೋ ದೇವಾನಾಂ ದುಃಖನಾಶನಃ ।
ಸ ತ್ವಮೇವ ಮಹಾರಾಜ ಭಗವಾನ್ಕೃತವಿಗ್ರಹಃ ॥ ೩೦ ॥

ಭರತೋಽಯಂ ಲಕ್ಷ್ಮಣಶ್ಚ ಶತ್ರುಘ್ನಶ್ಚ ಮಹಾಮತೇ ।
ತಾವಕಾಂಶೋ ದಶಗ್ರೀವೋ ನಿಹತಶ್ಚ ಸುರಾರ್ತಿದಃ ॥ ೩೧ ॥

ಪೂರ್ವವೈರಾನುಬಂಧೇನ ಜಾನಕೀಂ ಹೃತವಾನ್ಪುನಃ ।
ಸ ತ್ವಯಾ ನಿಹತೋ ದೈತ್ಯೋ ಬ್ರಹ್ಮರಾಕ್ಷಸಜಾತಿಮಾನ್ ॥ ೩೨ ॥

ಬ್ರಾಹ್ಮಣಾನಾಂ ಸುಖಂ ತದ್ವನ್ಮುನೀನಾಂ ತಾಪಸಂ ಬಲಂ ।
ಶಿವಾನಿ ಸರ್ವತೀರ್ಥಾನಿ ಸರ್ವೇ ಯಜ್ಞಾಃ ಸುಸಂಹಿತಾಃ ॥ ೩೩ ॥

---

೨೮. ಹೀಗೆಂದು ಹೇಳಿ ಅಂತರಿಕ್ಷದಲ್ಲಿ ಮಾಯವಾದನು. ದೇವತೆಗಳು ಆ ಮಾತನ್ನು ಕೇಳಿ ಸಂತೋಷಪಟ್ಟರು.

೨೯. ದೇವದೇವನು ಹೇಳಿದಂತೆ ಅವರವರ ಅಂಶಗಳಿಂದ ಕಪಿ, ಕರಡಿಗಳಾಗಿ ಆ ದೇವತೆಗಳು ಹುಟ್ಟಿದರು.

೩೦. ದೇವತೆಗಳ ದುಃಖನಾಶಕನಾದ, ಮಹಾದೇವನಾದ ಆ ವಿಷ್ಣುವೇ ನೀನು. ಈ ರೀತಿಯಾಗಿ ಹುಟ್ಟಿದ್ದೀಯೆ.

೩೧. ಭರತ, ಲಕ್ಷ್ಮಣ, ಶತ್ರುಘ್ನರು, ನಿನ್ನ ಅಂಶವೇನೇ. ಆ ದೇವತೆಗಳಿಗೆ ತೊಂದರೆಯನ್ನು ಕೊಡುತ್ತಿದ್ದ ದಶಗ್ರೀವನನ್ನು ನೀನೇ ಕೊಂದೇ.

೩೨. ಅವನು ಪೂರ್ವದ ವೈರಸ್ಮರಣೆಯಿಂದ ಜಾನಕಿಯನ್ನು ಅಪಹರಿಸಿದನು. ಬ್ರಾಹ್ಮಣನೂ, ರಾಕ್ಷಸನೂ ಆದ ಆತನು ನಿನ್ನಿಂದಲೇ ಕೊಲ್ಲಲ್ಪಟ್ಟನು.

೩೩. ಅವನ ವಧೆಯಿಂದ ಬ್ರಾಹ್ಮಣರಿಗೆ ಸುಖವುಂಟಾಯಿತು. ಮುನಿಗಳಿಗೆ ಇದ್ದ ತಪೋವಿಘ್ನವು ಪರಿಹಾರವಾಯಿತು. ಸರ್ವತೀರ್ಥಗಳೂ ಮಂಗಳಕರಗಳಾದವು. ಯಜ್ಞಯಾಗಾದಿಗಳು ಸಾಂಗವಾಗಿ ನೆರವೇರುವಂತಾದವು.

ಪುಲಸ್ತ್ಯಪುತ್ರೋ ದೈತ್ಯೇಂದ್ರಃ ಸರ್ವಲೋಕೈಕಕಂಟಕಃ ।
ಪಾತಿತಃ ಪೃಥಿವೀ ಸರ್ವಾ ಸುಖಮಾಪ ಮಹೇಶ್ವರ ॥ ೩೪ ॥

ತ್ವಯಿ ರಾಜ್ಞಿ ಜಗತ್ಸರ್ವಂ ಸದೇವಾಸುರಮಾನುಷಂ ।
ಸುಖಂ ಪ್ರಪೇದೇ ವಿಶ್ವಾತ್ಮನ್ ಜಗದ್ಯೋನೇ ನರೋತ್ತಮ ॥ ೩೫ ॥

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾ ನಿಧೇ ।
ಉತ್ಪತ್ತಿಶ್ಚ ವಿಪತ್ತಿಶ್ಚ ಮಯಾ ಮತ್ಯನುಸಾರತಃ ॥ ೩೬ ॥

ಇತ್ಥಂ ನಿಶಮ್ಯ ದನುಜೇಂದ್ರಕುಲಾನುಕಾರಿ-
ವಾರ್ತಾಂ ಮಹಾಪುರುಷ ಈಶ್ವರ ಈಶಿತಾ ಚ ।
ಸಂರುದ್ಧಬಾಷ್ಪಗಳದಶ್ರುಮುಖಾರವಿಂದೋ
ಭೂಮೌ ಪಪಾತ ಸದಸಿ ಪ್ರಥಿತಪ್ರಭಾವಃ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾವಣೋತ್ಪತ್ತಿಕಥನಂ ನಾಮ ಸಪ್ತಮೋಽಧ್ಯಾಯಃ

---

೩೪. ಹೀಗೆ ಪುಲಸ್ತ್ಯನ ಮಗನು ರಾಕ್ಷಸರಾಜನಾಗಿ ಲೋಕಕಂಟಕನಾಗಿದ್ದನು. ನೀನು ಅವನನ್ನು ಕೊಲ್ಲಲಾಗಿ ಭೂಮಿಯು ಸುಗಮವಾಯಿತು.

೩೫. ಎಲೈ ಸ್ವಾಮಿಯೇ, ನೀನು ರಾಜನಾಗಲಾಗಿ ದೇವ, ಅಸುರ, ಮಾನುಷರಿಂದ ಕೂಡಿದ ಪ್ರಪಂಚವೆಲ್ಲವೂ, ಸುಖವನ್ನು ಹೊಂದಿದುವು.

೩೬. ನನ್ನ ಬುದ್ಧಿಗೆ ತಿಳಿದಂತೆ ನೀನು ಕೇಳಿದ ಉತ್ಪತ್ತಿ ನಾಶಗಳೆಲ್ಲವನ್ನೂ ಹೇಳಿದೆನು.

೩೭. ಈ ಸ್ವಾಮಿಯು ಈ ರೀತಿ ಆ ರಾಕ್ಷಸನ ವಂಶವರ್ಣನೆಯಿಂದ ಕೂಡಿದ ಈ ಕಥೆಯನ್ನು ಕೇಳಿ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ, ಆ ಸಭೆಯಲ್ಲಿಯೇ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾವಣೋತ್ಪತ್ತಿಕಥೆಯೆಂಬ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಮೋಽಧ್ಯಾಯಃ

॥ ಶೇಷ ಉವಾಚ ॥

ವಾತ್ಸ್ಯಾಯನ ಮುನಿಶ್ರೇಷ್ಠ ಕಥಾ ಪಾಪಪ್ರಣಾಶಿನೀ ।
ಬ್ರಹ್ಮಣ್ಯ ದೇವದೇವಸ್ಯ ಸರ್ವಧರ್ಮೈಕರಕ್ಷಿತುಃ ॥ ೧ ॥

ರಾಜಾನಂ ಮೂರ್ಛಿತಂ ದೃಷ್ಟ್ವಾ ಕುಂಭಜನ್ಮಾ ತಪೋನಿಧಿಃ ।
ಶನೈಶ್ಶನೈಃ ಕರೇಣಾಶು ಪಸ್ಪರ್ಶಾಶು ಜಗಾದ ಚ ॥ ೨ ॥

ಭೋ ರಾಮಾಶ್ವಸಿಹಿ ಕ್ಷಿಪ್ರಂ ಕಿಮರ್ಥಮವಸೀದಸಿ ।
ಭವಾನ್ದೈತ್ಯಕುಲಚ್ಛೇತ್ತಾ ಮಹಾವಿಷ್ಣುಃ ಸನಾತನಃ ॥ ೩ ॥

---

## ಎಂಟನೆಯ ಅಧ್ಯಾಯವು

೧. ಶೇಷನು ಹೇಳಿದನು:—ಎಲೈ ವಾತ್ಸ್ಯಾಯನನೇ, ಸರ್ವಧರ್ಮವನ್ನು ರಕ್ಷಿಸುವ ಆ ಸ್ವಾಮಿಯ ಕಥೆಯು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ.

೨. ರಾಜನು ಮೂರ್ಛೆಗೊಂಡುದನ್ನು ನೋಡಿ ಆ ಅಗಸ್ತ್ಯನು ಮೆಲ್ಲನೆ ಕೈಯಿಂದ ಸವರುತ್ತಾ ಇಂತೆಂದನು.

೩. ಎಲೈ ರಾಮನೇ, ಬೇಗ ಸುಧಾರಿಸಿಕೋ. ಏತಕ್ಕೋಸ್ಕರ ದುಃಖಪಡು ತ್ತೀಯೆ? ನೀನು ದೈತ್ಯಕುಲವನ್ನು ನಾಶಮಾಡುವ ಸಾಕ್ಷಾದ್ವಿಷ್ಣುವಲ್ಲವೇ?

ಭೂತಂ ಭವ್ಯಂ ಭವಚ್ಚೈವ ಜಗತ್ ಸ್ಥಾಸ್ನು ಚರಿಷ್ಣು ಚ ।
ತ್ವದೃತೇ ನಾಸ್ತಿ ಸಂಚಾರಿ ಕಿಮರ್ಥಮವಸೀದಸಿ ॥ ೪ ॥

ಶ್ರುತ್ವಾ ವಾಕ್ಯಂ ಮಹಾರಾಜಃ ಕುಂಭಜನ್ಮಸಮೀರಿತಂ ।
ಉತ್ತಸ್ಥೌ ವಿಗಳನ್ನೇತ್ರಬಾಷ್ಪಪೂರಿತಸನ್ಮುಖಃ ॥ ೫ ॥

ಉವಾಚ ದೀನದೀನಂ ಚ ವಿಸ್ಪಷ್ಟಾಕ್ಷರವಿಸ್ತರಂ ।
ತ್ರಪಾಭರನಮನ್ಮೂರ್ಧಾ ಬ್ರಹ್ಮದ್ರೋಹಪರಾಙ್ಮುಖಃ ॥ ೬ ॥

॥ ಶ್ರೀರಾಮ ಉವಾಚ ॥

ಅಹೋ ಮೇ ಪಶ್ಯತಾಽಜ್ಞಾನಂ ವಿಮೂಢಸ್ಯ ದುರಾತ್ಮನಃ ।
ಯದ್ಬ್ರಾಹ್ಮಣಕುಲೇ ರೂಢಂ ಹತವಾನ್ಕಾಮಲೋಲುಪಃ ॥ ೭ ॥

ಮಹಿಳಾರ್ಥೇ ತ್ವಹಂ ವಿಪ್ರ ವೇದಶಾಸ್ತ್ರವಿವೇಕವಾನ್ ।
ಹತವಾನ್ಬ್ರಾಹ್ಮಣಕುಲಂ ಬುದ್ಧಿಹೀನೋಽತಿದುರ್ಮತಿಃ ॥ ೮ ॥

---

೪. ಚರಾಚರಗಳಾದ ಭೂತ ಭವ್ಯ ವರ್ತಮಾನಗಳಾದ ಈ ಜಗತ್ತಿನಲ್ಲಿ ನಿನ್ನನ್ನು ಹೊರತಾಗಿ ಸಂಸಾರಿಯಾಗಿರುವವನಿಲ್ಲ. ಎಲ್ಲರಿಗೂ ನೀನೇ ಆಧಾರವು ಏತಕ್ಕೋಸ್ಕರ ದುಃಖಪಡುತ್ತೀಯೆ? ಎನ್ನಲು,

೫. ಅಗಸ್ತ್ಯನ ಮಾತನ್ನು ಕೇಳಿ ರಾಮನು ಕಣ್ಣಿನಲ್ಲಿ ನೀರನ್ನು ತುಂಬಿ ಕೊಂಡೇ ಮೇಲಕ್ಕೆದ್ದು,

೬. ಬ್ರಹ್ಮಹತ್ಯೆಯನ್ನು ಮಾಡಿದೆನಲ್ಲಾ ಎಂಬ ನಾಚಿಕೆಯಿಂದ ತಲೆ ತಗ್ಗಿಸಿ ಕೊಂಡು, ಅಸ್ಪಷ್ಟವಾಗಿ ದುಃಖದಿಂದ ಈ ರೀತಿ ಹೇಳಿದನು.

೭. ಶ್ರೀರಾಮನು ಹೇಳಿದನು:—ಮೂರ್ಖನೂ, ದುರಾತ್ಮನೂ ಆದ ನನ್ನ ಅಜ್ಞಾನವನ್ನು ನೋಡಿ. ಬ್ರಾಹ್ಮಣ ವಂಶದಲ್ಲಿ ಹುಟ್ಟಿದವನನ್ನು ಕಾಮಾಸಕ್ತನಾಗಿ ಕೊಂದೆನಲ್ಲ.

೮. ವೇದಶಾಸ್ತ್ರಗಳನ್ನು ಓದಿ ವಿವೇಕಿಯಾಗಿದ್ದರೂ, ನಾನು ಹೆಂಗಸಿಗೋಸ್ಕರ ಬ್ರಹ್ಮನ ವಂಶವನ್ನೇ ಕೊಂದೆನಲ್ಲಾ. ನಾನು ಬುದ್ಧಿಹೀನನು. ದುರ್ಮತಿಯು.

**ಇಕ್ಷ್ವಾಕೂಣಾಂ ಕುಲೇ ಜಾತು ಬ್ರಾಹ್ಮಣೋ ನ ದುರುಕ್ತಿಭಾಕ್ ।**
**ಈದೃಶಂ ಕುರ್ವತಾ ಕರ್ಮ ಮನ್ಯೈತತ್ಸಕಲಂಕಿತಂ　　　　॥ ೯ ॥**

**ಯೇ ಬ್ರಾಹ್ಮಣಾಸ್ತು ಪೂಜಾರ್ಹಾ ದಾನಸಂಮಾನಭೋಜನೈಃ ।**
**ತೇ ಮಯಾ ನಿಹತಾ ವಿಪ್ರಾಃ ಶರಸಂಘಾತಸಂಹಿತೈಃ　　　　॥ ೧೦ ॥**

**ಕಾಂಸ್ತು ಲೋಕಾನ್ಗಮಿಷ್ಯಾಮಿ ಕುಂಭೀಪಾಕೋಽಪಿ ದುಸ್ಸಹಃ ।**
**ನೇದೃಶಂ ತೀರ್ಥಮಸ್ತ್ಯಸ್ತಿ ಯನ್ಮಾಂ ಪಾವಯಿತುಂ ಕ್ಷಮಂ　　　　॥ ೧೧ ॥**

**ನ ಯಜ್ಞೋ ನ ತಪೋ ದಾನಂ ನ ದೇವಪ್ರತಿಮಾದಿಕಂ ।**
**ಯತ್ತು ವೈ ಬ್ರಾಹ್ಮಣದ್ರೋಗ್ಧುರ್ಮಮ ಪಾವನತಾರಕಂ　　　　॥ ೧೨ ॥**

**ಯೈಃ ಕೋಪಿತಂ ಬ್ರಹ್ಮಕುಲಂ ನರೈರ್ನಿರಯಗಾಮಿಭಿಃ ।**
**ತೇ ನರಾ ಬಹುಶೋ ದುಃಖಂ ಭೋಕ್ಷ್ಯಂತಿ ನಿರಯಂ ಗತಾಃ　　　　॥ ೧೩ ॥**

---

೯. ಇಕ್ಷ್ವಾಕು ಕುಲದವರು ಬ್ರಾಹ್ಮಣರನ್ನು ನೋಡಿ ಒಂದು ಕೆಟ್ಟ ಮಾತನ್ನು ಕೂಡ ಆಡುವವರಲ್ಲ. ಹೀಗಿರುವಲ್ಲಿ ಈ ಕೆಲಸವನ್ನು ಮಾಡಿದುದರಿಂದ ಆ ಕುಲಕ್ಕೇ ಬಹು ಕಳಂಕವನ್ನು ತಂದೆನು.

೧೦. ಬ್ರಾಹ್ಮಣರು ದಾನ, ಮಾನ, ಭೋಜನಗಳಿಗೂ, ಪೂಜೆಗೂ ಅರ್ಹರಾದವರು. ಅಂತಹ ಬ್ರಾಹ್ಮಣರನ್ನು ಬಾಣಗಳಿಂದ ಹೊಡೆದು ಕೊಂದೆನಲ್ಲಾ!

೧೧. ನನಗೆ ಎಂತಹ ದುರ್ಗತಿಯು ಬರುವುದೋ? ನರಕದಲ್ಲಿರುವ ಕುಂಭೀಪಾಕವೂ ಸಹ ನನಗೆ ಹೆಚ್ಚಲ್ಲ. ನನ್ನನ್ನು ಪವಿತ್ರನನ್ನಾಗಿ ಮಾಡುವ ತೀರ್ಥವೂ ಇಲ್ಲವಲ್ಲ?

೧೨. ಬ್ರಾಹ್ಮಣನಿಗೆ ದ್ರೋಹಮಾಡಿದ ನನ್ನನ್ನು ಪಾವನಮಾಡುವಂತಹ ಯಜ್ಞವಾಗಲಿ, ತಪಸ್ಸಾಗಲಿ, ದೇವರಪ್ರತಿಮೆಯಾಗಲಿ ಒಂದೂ ಇಲ್ಲವಲ್ಲ.

೧೩. ಯಾರ ಅಕೃತ್ಯಗಳಿಂದ ಬ್ರಾಹ್ಮಣರು ಕೋಪಗೊಳ್ಳುವರೋ ಅವರು ನರಕಕ್ಕೆ ಹೋಗಿ ಅನೇಕ ದುಃಖಗಳನ್ನು ಅನುಭವಿಸುತ್ತಾರೆ.

ವೇದಾ ಮೂಲಂ ತು ಧರ್ಮಾಣಾಂ ವರ್ಣಾಶ್ರಮವಿವೇಕಿನಾಂ ।
ತನ್ಮೂಲಂ ಬ್ರಾಹ್ಮಣಕುಲಂ ಸರ್ವ ವೇದೈಕಶಾಖಿನಃ ॥ ೧೪ ॥

ಮೂಲಚ್ಛೇತ್ತುರ್ಮಮೌದ್ಧತ್ಯಾತ್ ಕೋ ಲೋಕೋ ನು ಭವಿಷ್ಯತಿ ।
ಕಿಂ ಮಯಾ ಕರಣೀಯಂ ಸ್ಯೈ ಯೇನ ಮೇ ಹಿ ಶಿವಂ ಭವೇತ್ ॥ ೧೫ ॥

॥ ಶೇಷ ಉವಾಚ ॥

ವಿಲಪಸ್ತಂ ಭೃಶಂ ರಾಮಂ ರಾಜೇಂದ್ರಂ ರಘುಪುಂಗವಂ ।
ಮಾಯಾಮನುಷ್ಯವಪುಷಂ ಕುಂಭಜನ್ಮಾಬ್ರವೀದ್ವಚಃ ॥ ೧೬ ॥

॥ ಅಗಸ್ತ್ಯ ಉವಾಚ ॥

ಮಾ ವಿಷಾದಂ ಮಹಾಧೀರ ಕುರು ರಾಜನ್ಮಹಾಮತೇ ।
ನ ತೇ ಬ್ರಹ್ಮಹತ್ಯಾ ಸ್ಯಾದ್ದುಷ್ಟಾನಾಂ ನಾಶಮಿಚ್ಛತಃ ॥ ೧೭ ॥

ತ್ವಂ ಪುಮಾನ್ ಪುರುಷಸ್ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।
ಕರ್ತಾ ಹರ್ತಾಽವಿತಾ ಸಾಕ್ಷಾನ್ನಿರ್ಗುಣಃ ಸ್ವೇಚ್ಛಯಾ ಗುಣೀ ॥ ೧೮ ॥

---

೧೪. ವರ್ಣ ಆಶ್ರಮಗಳನ್ನು ವಿವೇಚಿಸಿ ಬೋಧಿಸುವ ಧರ್ಮಗಳಿಗೆ ವೇದವೇ ಮೂಲವು. ಆ ಸರ್ವವೇದವೆಂಬ ಮರಕ್ಕೆ ಬ್ರಾಹ್ಮಣವಂಶವೇ ಬುಡವು.

೧೫. ಹೆಮ್ಮೆಯಿಂದ ಆ ಬುಡವನ್ನೇ ಕಡಿದ ನನಗೆ ಯಾವ ಲೋಕವು ಬರುವುದೋ? ನಾನು ಏನು ಮಾಡಲಿ? ಏನು ಮಾಡಿದರೆ ನನಗೆ ಒಳ್ಳೆಯದಾಗುವುದು? ಎಂದು ದುಃಖಿಸಿದನು.

೧೬. ಶೇಷನು ಹೇಳಿದನು:—ರಾಜನೂ, ರಘುಪುಂಗವನೂ ಆದ ರಾಮನು ಹೀಗೆ ದುಃಖಿಸುತ್ತಿರುವುದನ್ನು ನೋಡಿ ಆ ಮಾಯಾಮನುಷ್ಯನನ್ನು ಕುರಿತು,

೧೭. ಅಗಸ್ತ್ಯನಿಂತೆಂದನು:—ಎಲೈ ರಾಜನೇ, ಧೀರನಾಗು. ದುಃಖಿಸಬೇಡ. ದುಷ್ಟರ ನಾಶವನ್ನು ಮಾಡಬೇಕೆಂಬ ನಿನಗೆ ಬ್ರಹ್ಮಹತ್ಯೆಯು ಸಂಭವಿಸುವುದಿಲ್ಲ.

೧೮. ನೀನು ಸಾಕ್ಷಾತ್ತಾದ ಈಶ್ವರನು. ಪ್ರಕೃತಿಗಿಂತಲೂ, ಉತ್ತಮನು. ಸೃಷ್ಟಿಸ್ಥಿತಿಲಯಕಾರಕನು. ನೀನು ಗುಣರಹಿತನು. ಇಚ್ಛೆ ಬಂದಾಗ ಗುಣವನ್ನು ಹೊಂದುತ್ತೀಯೆ.

ಸುರಾಪೋ ಬ್ರಹ್ಮಹತ್ಯಾಕೃತ್ ಸ್ವರ್ಣಸ್ತೇಯೀ ಮಹಾಘಕೃತ್ ।
ಸರ್ವೇ ತ್ವನ್ನಾಮವಾದೇನ ಪೂತಾಃ ಶೀಘ್ರಂ ಭವಂತಿ ಹಿ ॥ ೧೯ ॥

ಇಯಂ ದೇವೀ ಜನಕಜಾ ಮಹಾವಿದ್ಯಾ ಮಹಾಮತೇ ।
ಯಸ್ಯಾಸ್ಸ್ಮರಣಮಾತ್ರೇಣ ಮುಕ್ತಾ ಯಾಸ್ಯಂತಿ ಸದ್ಗತಿಂ ॥ ೨೦ ॥

ರಾವಣೋಽಪಿ ನ ವಾ ದೈತ್ಯೋ ವೈಕುಂಠೇ ತವ ಸೇವಕಃ ।
ಋಷೀಣಾಂ ಶಾಪತೋಽವಾಪ್ತಂ ದೈತ್ಯತ್ವಂ ದನುಜಾಂತಕ ॥ ೨೧ ॥

ತಸ್ಯಾನುಗ್ರಹಕರ್ತಾ ತ್ವಂ ನ ತು ಹಂತಾ ದ್ವಿಜನ್ಮನಃ ।
ಏವಂ ಸಂಚಿಂತ್ಯ ಮಾ ಭೂಯೋ ನಿಜಂ ಶೋಚಿತುಮರ್ಹಸಿ ॥ ೨೨ ॥

ಇತಿ ಶ್ರುತ್ವಾ ತತೋ ವಾಕ್ಯಂ ರಾಮಃ ಪರಪುರಂಜಯಃ ।
ಉವಾಚ ಪರಮಂ ವಾಕ್ಯಂ ಗದ್ಗದಸ್ವರಭಾಷಿತಂ ॥ ೨೩ ॥

---

೧೯. ಸುರಾಪಾನ ಮಾಡಿದವನು, ಬ್ರಹ್ಮಹತ್ಯೆ ಮಾಡಿದವನು, ಸ್ವರ್ಣವನ್ನು ಕದ್ದವನು, ಇಂತಹ ಮಹಾಪಾಪಿಗಳೂ ಕೂಡ ನಿನ್ನ ನಾಮವನ್ನು ಉಚ್ಚರಿಸುವುದರಿಂದ ಶೀಘ್ರವಾಗಿ ಪವಿತ್ರರಾಗುತ್ತಾರೆ.

೨೦. ಈ ದೇವಿಯಾದ ಸೀತೆಯು ಮಹಾವಿದ್ಯೆಯೆಂದು ತಿಳಿ. ಇವಳ ಸ್ಮರಣೆಯನ್ನು ಮಾಡಿದ ಮಾತ್ರದಿಂದ ಜನರು ಮುಕ್ತಿಯನ್ನು ಹೊಂದುತ್ತಾರೆ.

೨೧. ರಾವಣನು ರಾಕ್ಷಸನಲ್ಲ. ವೈಕುಂಠದಲ್ಲಿದ್ದ ನಿನ್ನ ಸೇವಕನು. ಋಷಿಗಳ ಶಾಪದಿಂದ ರಾಕ್ಷಸನಾಗಿ ಹುಟ್ಟಿದ್ದನು.

೨೨. ಅವನಿಗೆ ಅನುಗ್ರಹವನ್ನೇ ಮಾಡಿದ್ದೀಯೆ. ಬ್ರಾಹ್ಮಣನನ್ನು ಕೊಲ್ಲಲಿಲ್ಲ. ಇದನ್ನು ಯೋಚಿಸು. ದುಃಖಿಸಲು ಕಾರಣವಿಲ್ಲ ಎಂದನು.

೨೩. ಇದನ್ನು ಕೇಳಿ ಶೂರನಾದ ರಾಮನು ಗದ್ಗದಸ್ವರದಿಂದ ಮತ್ತೆ ಹೇಳಿದನು.

॥ ರಾಮ ಉವಾಚ ॥

ಪಾತಕಂ ದ್ವಿವಿಧಂ ಪ್ರೋಕ್ತಂ ಜ್ಞಾತಾಜ್ಞಾತವಿಭೇದತಃ ।
ಜ್ಞಾತಂ ಯದ್ಬುದ್ಧಿಪೂರ್ವಂ ಹಿ ಹ್ಯಜ್ಞಾತಂ ತದ್ವಿವರ್ಜಿತಂ ॥ ೨೪ ॥

ಬುದ್ಧಿಪೂರ್ವಂ ಕೃತಂ ಕರ್ಮ ಭೋಗೇನೈವ ವಿನಶ್ಯತಿ ।
ನಶ್ಯೇದನುಶಯಾದನ್ಯದಿದಂ ಶಾಸ್ತ್ರವಿನಿಶ್ಚಿತಂ ॥ ೨೫ ॥

ಕುರ್ವತೋ ಬುದ್ಧಿಪೂರ್ವಂ ಮೇ ಬ್ರಹ್ಮಹತ್ಯಾಂ ಸುನಿಂದಿತಾಂ ।
ನ ಮೇ ದುಃಖಾಪನೋದಾಯ ಸಾಧುವಾದಸ್ಸುಸಂಮತಃ ॥ ೨೬ ॥

ಪ್ರಬ್ರೂಹಿ ತಾದೃಶಂ ಮಹ್ಯಂ ಯಾದೃಶಂ ಪಾಪದಾಹಕಂ ।
ವ್ರತಂ ದಾನಂ ಮಖಂ ಕಿಂಚಿತ್ತೀರ್ಥಮಾರಾಧನಂ ಮಹತ್ ॥ ೨೭ ॥

ಯೇನ ಮೇ ವಿಪುಲಾ ಕೀರ್ತಿರ್ಲೋಕಾನ್ವೈ ಪಾವಯಿಷ್ಯತಿ ।
ಪಾಪಾಚಾರಾಪ್ತಕಾಲುಷ್ಯಾನ್ ಬ್ರಹ್ಮಹತ್ಯಾಹತಪ್ರಭಾನ್ ॥ ೨೮ ॥

---

೨೪. ರಾಮನು ಹೇಳಿದನು :— ತಿಳಿದು ಮಾಡಿದುದು, ತಿಳಿಯದೇ ಮಾಡಿದುದೆಂದು ಪಾಪವು ಎರಡು ವಿಧವಷ್ಟೆ? ಬುದ್ಧಿಪೂರ್ವಕವಾದರೆ ಜ್ಞಾತವು. ತಿಳಿಯದುದು ಅಜ್ಞಾತವು.

೨೫. ಬುದ್ಧಿಪೂರ್ವಕ ಮಾಡಿದ ಕರ್ಮವು ಭೋಗಿಸಿದರೇನೇ ಮುಗಿಯುತ್ತದೆ. ಅಜ್ಞಾತವಾದುದು ಪಶ್ಚಾತ್ತಾಪಪಟ್ಟರೆ ಹೋಗುತ್ತದೆ. ಇದು ಶಾಸ್ತ್ರಸಿದ್ಧವು.

೨೬. ಬುದ್ಧಿಪೂರ್ವಕವಾಗಿ ಆ ಅಯೋಗ್ಯವಾದ ಬ್ರಹ್ಮಹತ್ಯೆಯನ್ನು ನಾನು ಮಾಡಿರುವಾಗ, ಒಳ್ಳೆಯ ಮಾತುಗಳಿಂದ ಮಾಡುವ ವಾದವು ನನ್ನ ದುಃಖವನ್ನು ನಾಶಮಾಡಲಾರದು.

೨೭. ಈ ಪಾಪಗಳನ್ನು ನಾಶಮಾಡುವ ತೀರ್ಥವನ್ನಾಗಲೀ, ವ್ರತ, ದಾನ, ಯಾಗಗಳಾಗಲಿ, ಉತ್ತಮವಾದ ಪೂಜೆಗಳಾಗಲಿ ಇದ್ದರೆ ಅಂತಹದನ್ನು ಹೇಳು.

೨೮. ಪಾಪ ಕೆಲಸವಾದ ಬ್ರಹ್ಮಹತ್ಯೆಯಿಂದ ಕಾಂತಿಹೀನರಾದವರನ್ನು ಪಾವನ ಮಾಡಿ ಉತ್ತಮವಾದ ಲೋಕವನ್ನು ಕೊಡುವ ಯಾವುದನ್ನಾದರೂ ಹೇಳು. ಎಂದನು.

॥ ಶೇಷ ಉವಾಚ ॥

ಇತ್ಯುಕ್ತವಂತಂ ತಂ ರಾಮಂ ಜಗಾದ ಸ ತಪೋನಿಧಿಃ ।
ಸುರಾಸುರನಮನ್ಮೌಳಿಮಣಿನೀರಾಜಿತಾಂಘ್ರಿಕಂ ॥ ೨೯ ॥

ಶೃಣು ರಾಮ ಮಹಾವೀರ ಲೋಕಾನುಗ್ರಹಕಾರಕ ।
ವಿಪ್ರಹತ್ಯಾಪನೋದಾಯ ತವ ಯದ್ವಚನಂ ಬ್ರುವೇ ॥ ೩೦ ॥

ಸರ್ವಂ ಸ ಪಾಪಂ ತರತಿ ಯೋಽಶ್ವಮೇಧಂ ಯಜೇತ ವೈ ।
ತಸ್ಮಾತ್ತ್ವಂ ಯಜ ವಿಶ್ವಾತ್ಮನ್ ವಾಜಿಮೇಧೇನ ಶೋಭಿನಾ ॥ ೩೧ ॥

ಸಪ್ತತನ್ತುರ್ಮಹೀಭರ್ತ್ರಾ ತ್ವಯಾ ಸಾಧ್ಯೋ ಮನೀಷಿಣಾ ।
ಮಹಾಸಮೃದ್ಧಿಯುಕ್ತೇನ ಮಹಾಬಲಸುಶಾಲಿನಾ ॥ ೩೨ ॥

ಸ ವಾಜಿಮೇಧೋ ವಿಪ್ರಾಣಾಂ ಹತ್ಯಾಯಾಃ ಪಾಪನೋದನಃ ।
ಕೃತವಾನ್ಯಂ ಮಹಾರಾಜೋ ದಿಲೀಪಸ್ತವ ಪೂರ್ವಜಃ ॥ ೩೩ ॥

---

೨೯. ಶೇಷನು ಹೇಳಿದನು:—ರಾಮನು ಕೇಳಲು, ದೇವಾದಿಗಳಿಂದ ನಮಸ್ಕರಿಸಲ್ಪಟ್ಟ ಆ ಅಗಸ್ತ್ಯನು ಇಂತೆಂದನು.

೩೦. ಎಲೈ ರಾಮನೇ, ನಿನಗೆ ಬ್ರಹ್ಮಹತ್ಯೆಯು ಹೋಗುವಂತೆ ಒಂದು ಮಾತನ್ನು ಹೇಳುತ್ತೇನೆ ಕೇಳು.

೩೧. ಅಶ್ವಮೇಧಯಾಗವನ್ನು ಮಾಡಿದವನು ಸರ್ವಪಾಪಗಳನ್ನೂ ಕಳೆದುಕೊಳ್ಳುತ್ತಾನೆ. ಆದುದರಿಂದ ನೀನು ಆ ಅಶ್ವಮೇಧಯಾಗವನ್ನು ಮಾಡು.

೩೨. ರಾಜನೂ, ವಿದ್ವಾಂಸನೂ, ಸರ್ವಗುಣಸಂಪನ್ನನೂ, ಮಹಾಬಲಶಾಲಿಯೂ ಆದ ನೀನು ಆ ಯಾಗವನ್ನು ಮಾಡಲು ಅರ್ಹನಾಗಿದ್ದೀಯೆ.

೩೩. ಆ ಅಶ್ವಮೇಧವು ಬ್ರಹ್ಮಹತ್ಯಾಪಾಪವನ್ನು ನಾಶಮಾಡತಕ್ಕದ್ದು. ಹಿಂದೆ ನಿನ್ನ ಪೂರ್ವಿಕನಾದ ದಿಲೀಪನು ಅದನ್ನು ಮಾಡಿದ್ದಾನೆ.

ಶತಕ್ರತುಃ ಶತಂ ಕೃತ್ವಾ ಕ್ರತೂನಾಂ ಪುರುಷರ್ಷಭಃ ।
ಪದಮಾಪಾಮರಾವತ್ಯಾಂ ದೇವದೈತ್ಯಪ್ರಸೇವಿತಂ ॥ ೩೪ ॥

ಮನುಶ್ಚ ಸಗರೋ ರಾಜಾ ಮರುತ್ತೋ ನಹುಷಾತ್ಮಜಃ ।
ಏತೇ ತೇ ಪೂರ್ವಜಾಃ ಸರ್ವೇ ಯಜ್ಞಂ ಕೃತ್ವಾ ಪದಂ ಗತಾಃ ॥ ೩೫ ॥

ತಸ್ಮಾತ್ತ್ವಂ ಕುರು ರಾಜೇಂದ್ರ ಸಮರ್ಥೋಽಸಿ ಸಮಂತತಃ ।
ಭ್ರಾತರೋ ಲೋಕಪಾಲಾಭಾ ವರ್ತಂತೇ ತವ ಭಾವುಕಾಃ ॥ ೩೬ ॥

ಇತ್ಯುಕ್ತಮಾಕರ್ಣ್ಯ ಮುನೇಸ್ಸ ಭಾಗ್ಯವಾನ್
ರಘೂತ್ತಮೋ ಬ್ರಾಹ್ಮಣವಾಕ್ಯಭೀತಃ ।
ಪಪ್ರಚ್ಛ ಯಾಗೇ ಸುಮತಿಂ ಚಿಕೀರ್ಷನ್
ವಿಧಿಂ ಪುರಾವಿತ್ಪರಿಗೀಯಮಾನಃ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಘುನಾಥಸ್ಯ ಅಗಸ್ತ್ಯೋಪದೇಶೋನಾಮ ಅಷ್ಟಮೋಽಧ್ಯಾಯಃ

---

೩೪. ಇಂದ್ರನು ನೂರು ಯಾಗಗಳನ್ನು ಮಾಡಿ ದೇವದೈತ್ಯರಿಂದ ಸೇವಿಸಲ್ಪಡುತ್ತಿರುವ ಅಮರಾವತಿಯ ಸ್ಥಾನವನ್ನು ಹೊಂದಿದನು.

೩೫. ಮನು, ಸಗರ, ಮರುತ್ತು, ಯಯಾತಿ ಮೊದಲಾದ ನಿನ್ನ ಪೂರ್ವಿಕರು ಯಜ್ಞವನ್ನು ಮಾಡಿ ಒಳ್ಳೆಯ ಸ್ಥಾನವನ್ನು ಹೊಂದಿದರು.

೩೬. ಆದ್ದರಿಂದ ನೀನು ಈ ಯಜ್ಞವನ್ನು ಮಾಡಲು ಸಮರ್ಥನಾಗಿದ್ದೀಯೆ. ನಿನ್ನ ತಮ್ಮಂದಿರೂ ಕೂಡ ಲೋಕಪಾಲಕರಂತೆ ಧೀರರಾಗಿದ್ದಾರೆ. ಮತ್ತು ನಿನ್ನ ಇಷ್ಟದಂತೆ ನಡೆಯುತ್ತಾರೆ. ಆದುದರಿಂದ ನೀನು ಆ ಯಜ್ಞವನ್ನು ಅವಶ್ಯಕವಾಗಿ ಮಾಡು ಎಂದನು.

೩೭. ಈ ಮಾತನ್ನು ಕೇಳಿ ಆ ಭಾಗ್ಯಶಾಲಿಯಾದ ರಾಮನು ಬ್ರಾಹ್ಮಣನ ಮಾತನ್ನು ಗೌರವಿಸಿ, ಆ ಯಾಗವನ್ನು ಮಾಡಲಿಚ್ಛಿಸಿ ಅದರ ವಿಧಿಯನ್ನು ಸರಿಯಾಗಿ ಹೇಳೆಂದು ಕೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ಅಗಸ್ತ್ಯೋಪದೇಶವೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ನವಮೋಽಧ್ಯಾಯಃ

॥ ಶ್ರೀರಾಮ ಉವಾಚ ॥

ಕೀದೃಶೋಽಶ್ವಸ್ತತ್ರ ಭಾವ್ಯಃ ಕೋ ವಿಧಿಸ್ತತ್ರ ಪೂಜನೇ ।
ಕಥಂ ವಾ ಶಕ್ಯತೇ ಕರ್ತುಂ ಕೇ ಜೇಯಾಸ್ತತ್ರ ವೈರಿಣಃ ॥ ೧ ॥

॥ ಅಗಸ್ತ್ಯ ಉವಾಚ ॥

ಗಂಗಾಜಲಸಮಾನೇನ ವರ್ಣೇನ ವಪುಷಾ ಶುಭಃ ।
ಕರ್ಣೇ ಶ್ಯಾಮೋ ಮುಖೇ ರಕ್ತಃ ಪೀತಃ ಪುಚ್ಛೇ ಸುಲಕ್ಷಿತಃ ॥ ೨ ॥

ಮನೋವೇಗಸ್ಸರ್ವಗತಿಃ ಉಚ್ಚೈಃಶ್ರವಸ್ಸಮಪ್ರಭಃ ।
ವಾಜಿಮೇಧೇ ಹಯಃ ಪ್ರೋಕ್ತಃ ಶುಭಲಕ್ಷಣಲಕ್ಷಿತಃ ॥ ೩ ॥

---

## ಒಂಭತ್ತನೆಯ ಅಧ್ಯಾಯವು

೧. ಶ್ರೀರಾಮನು ಕೇಳಿದನು:—ಆ ಯಾಗದಲ್ಲಿ ಕುದುರೆ ಎಂತಹದಾಗಬೇಕು? ಅದರ ವಿಧಿಯೇನು? ಅದನ್ನು ಮಾಡಲು ಹೇಗೆ ಸಾಧ್ಯ? ಎಂತಹ ವೈರಿಗಳನ್ನು ಜಯಿಸಬೇಕು? ಎಂದು ಕೇಳಲು,

೨-೩. ಅಗಸ್ತ್ಯನು ಹೇಳಿದನು:—ಆ ಕುದುರೆಯು ಶುಭ್ರವಾದ ಗಂಗೆಯ ನೀರಿನಂತೆ ಬಿಳುಪಾಗಿರಬೇಕು. ಕಿವಿಗಳು ಕಪ್ಪಾಗಿರಬೇಕು. ಮುಖವು ಕೆಂಪಗಿರಬೇಕು. ಬಾಲವು ಹೊಂಬಣ್ಣವಾಗಿರಬೇಕು. ಕುದುರೆಯು ನೋಡುವುದಕ್ಕೆ ಲಕ್ಷಣವಾಗಿರಬೇಕು. ವೇಗವುಳ್ಳದಾಗಿದ್ದು ಎಲ್ಲಾ ಕಡೆಯಲ್ಲೂ ಹೋಗತಕ್ಕದ್ದಾಗಿರಬೇಕು.

ವೈಶಾಖಪೌರ್ಣಮಾಸ್ಯಾಂ ತು ಪೂಜಯಿತ್ವಾ ಯಥಾವಿಧಿ ।
ಪತ್ರಂ ಲಿಖಿತ್ವಾ ಫಾಲೇ ತು ಸ್ವನಾಮಬಲಚಿಹ್ನಿತಂ ॥ ೪ ॥

ಮೋಚನೀಯಃ ಪ್ರಯತ್ನೇನ ರಕ್ಷಕೈಃ ಪರಿರಕ್ಷಿತಃ ।
ಯತ್ರ ಗಚ್ಛತಿ ಯಜ್ಞಾಶ್ವಸ್ತತ್ರ ಗಚ್ಛಂತಿ ರಕ್ಷಕಾಃ ॥ ೫ ॥

ಯಸ್ತಂ ಬಲಾನ್ನಿಬಧ್ನಾತಿ ಸ್ವವೀರ್ಯಬಲದರ್ಪಿತಃ ।
ತಸ್ಮಾತ್ಪ್ರಸಭಮಾನೇಯಃ ಪರಿರಕ್ಷಾಕರೈರ್ಹಯಃ ॥ ೬ ॥

ಕರ್ತ್ರಾ ತಾವತ್ಸುವಿಧಿನಾ ಸ್ಥಾತವ್ಯಂ ನಿಯಮಾದಿಹ ।
ಮೃಗಶೃಂಗಧರೋ ಭೂತ್ವಾ ಬ್ರಹ್ಮಚರ್ಯಸಮನ್ವಿತಃ ॥ ೭ ॥

ವ್ರತಂ ಪಾಲಯಮಾನಶ್ಚ ಯಾವದ್ವರ್ಷಂ ಪ್ರತಿಕ್ರಮೇತ್ ।
ತಾವದ್ದೀನಾಂಧಕೃಪಣಾಃ ಪರಿತೋಷ್ಯಾ ಧನಾದಿಭಿಃ ॥ ೮ ॥

---

ಉಚ್ಚೈಶ್ರವಸ್ಸಿನ ತೇಜಸ್ಸಿರಬೇಕು. ಇಂತಹ ಶುಭಲಕ್ಷಣವುಳ್ಳ ಕುದುರೆಯು ಅಶ್ವಮೇಧಕ್ಕೆ ಯೋಗ್ಯವಾಗಿರುವುದೆಂದು ಉಕ್ತವಾಗಿರುವುದು.

೪. ವೈಶಾಖಮಾಸದ ಹುಣ್ಣಿಮೆಯ ದಿನ ಅದನ್ನು ಪೂಜಿಸಿ, ರಾಜನು ತನ್ನ ಹೆಸರು, ಬಿರುದು, ಶಕ್ತಿಗಳನ್ನು ಒಂದು ತಗಡಿನಲ್ಲಿ ಬರೆದು ಅದರ ಹಣೆಗೆ ಕಟ್ಟಿ, ಅದಕ್ಕೆ ರಕ್ಷಕರನ್ನು ಏರ್ಪಡಿಸಿ ಸಂಚರಿಸುವಂತೆ ಬಿಟ್ಟುಬಿಡಬೇಕು.

೫-೬. ಆ ಕುದುರೆಯು ಹೋದ ಕಡೆಗೆಲ್ಲಾ ರಕ್ಷಕರು ಹೋಗಬೇಕು. ಯಾವನಾದರೂ ಬಲಿಷ್ಠನು ಅದನ್ನು ಕಟ್ಟಿ ಹಾಕಿದರೆ, ಅದನ್ನು ಕಾಪಾಡುವವರು ಅವನನ್ನು ಜಯಿಸಿ ತರಬೇಕು.

೭-೮. ಯಜ್ಞಕರ್ತೃವು ಒಳ್ಳೆಯ ನಿಯಮದಿಂದಿರಬೇಕು. ಜಿಂಕೆಯ ಕೊಂಬನ್ನು ಕೈಗೆ ಕಟ್ಟಿಕೊಂಡು ಯಜ್ಞದೀಕ್ಷೆಯನ್ನು ಕೈಗೊಂಡು ಬ್ರಹ್ಮಚರ್ಯವುಳ್ಳವನಾಗಿ ಒಂದು ವರ್ಷ ತುಂಬುವವರೆಗೆ ಬಡವರು, ಕುಂಟರು, ಕುರುಡರುಗಳನ್ನು ಸಂತೋಷಪಡಿಸುತ್ತ ವ್ರತವನ್ನು ಕಾಪಾಡಿಕೊಂಡಿರಬೇಕು.

ಅನ್ನಂ ತು ಬಹುಶೋ ದೇಯಂ ಧನಂ ವಾ ಭೂರಿ ಮಾರಿಷ ।
ಯದ್ಯತ್ಪ್ರಾರ್ಥಯತೇ ಧೀಮಾಂಸ್ತತ್ತದೇವ ಪದಾತಿ ಹಿ ॥ ೯ ॥

ಏವಂ ಪ್ರಕುರ್ವತಃ ಕರ್ಮ ಯಜ್ಞಸ್ಸಂಪೂರ್ಣತಾಂ ಗತಃ ।
ಕರೋತಿ ಸರ್ವಪಾಪಾನಾಂ ನಾಶನಂ ರಿಪುನಾಶನ ॥ ೧೦ ॥

ತಸ್ಮಾದ್ಭವಾನ್ಸಮರ್ಥೋಽಸ್ತಿ ಕರಣೇ ಪಾಲನೇಽರ್ಚನೇ ।
ಕೃತ್ವಾ ಕೀರ್ತಿಂ ಸುವಿಪುಲಾಂ ಪಾವಯಾಸ್ಯಾನ್ ಜನಾನ್ನೃಪ ॥ ೧೧ ॥

॥ ಶ್ರೀರಾಮ ಉವಾಚ ॥

ವಿಲೋಕಯ ದ್ವಿಜಶ್ರೇಷ್ಠ ವಾಜಿಶಾಲಾಂ ಮಮಾಧುನಾ ।
ತಾದೃಶಾಸ್ಸಂತಿ ನೋ ವಾಶ್ವಾಃ ಶುಭಲಕ್ಷಣಲಕ್ಷಿತಾಃ ॥ ೧೨ ॥

ಇತಿ ಶ್ರುತ್ವಾಪಿ ತದ್ವಾಕ್ಯಮಗಸ್ತ್ಯಃ ಕರುಣಾಕರಃ ।
ಉತ್ತಸ್ಥೌ ವೀಕ್ಷ್ಯಮಾಣೋಽಯಂ ಯಾಗಾರ್ಹಾನ್ವಾಜಿನಶ್ಶುಭಾನ್ ॥ ೧೩ ॥

---

೯. ಅನ್ನದಾನವನ್ನೂ ಭೂರಿದಕ್ಷಿಣೆಗಳನ್ನೂ ಯಥೇಚ್ಛವಾಗಿ ಮಾಡಬೇಕು. ಈತನನ್ನು ಯಾರು ಏನು ಕೇಳಿದರೂ ಕೊಡಬೇಕು.

೧೦. ಹೀಗೆ ಮಾಡುತ್ತಿದ್ದರೆ ಯಜ್ಞವು ಪೂರ್ಣವಾಗಿ ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ.

೧೧. ಆದ್ದರಿಂದ ಆ ಯಾಗಮಾಡಲು ನೀನು ಸಮರ್ಥನಾಗಿದ್ದೀಯೆ ಆದುದ ರಿಂದ ಆ ಪೂಜೆಯನ್ನೂ, ಆ ಯಾಗವನ್ನೂ, ಮಾಡಿ ಕೀರ್ತಿಯನ್ನು ಹೊಂದಿ ನಿಕ್ಷ ಜನಗಳನ್ನು ಪಾವನಮಾಡು.

೧೨. ಶ್ರೀರಾಮನು ಮತ್ತೆ ಕೇಳಿದನು:—ಎಲೈ ಋಷಿಯೇ, ನನ್ನ ಕುದು ರೆಯ ಲಾಯವನ್ನು ನೋಡಿ, ಅಂತಹ ಕುದುರೆಯು ನನ್ನಲ್ಲಿ ಇರುವುದೋ ಇಲ್ಲವೋ ಹೇಳು ಎನ್ನಲು,

೧೩. ಕೃಪಾನಿಧಿಯಾದ ಅಗಸ್ತ್ಯನು ಅವನ ಮಾತುಗಳನ್ನು ಕೇಳಿ ಅಂತಹ ಕುದುರೆಯು ಅಲ್ಲಿರುವುದೇ ಎಂದು ನೋಡಲು ಎದ್ದನು.

ಗತ್ವಾಥ ತತ್ರ ಶಾಲಾಯಾಂ ರಾಮಚಂದ್ರಸಮನ್ವಿತಃ ।
ಪದರ್ಶಾಶ್ವಾನ್ವಿಚಿತ್ರಾಂಗಾನ್ಮನೋವೇಗಾನ್ಮಹಾಬಲಾ ॥ ೧೪ ॥

ಅವನಿತಲಗತಾಃ ಕಿಂ ವಾಜಿರಾಜಸ್ಯ ವಂಶ್ಯಾಃ
ಕಿಮುಥ ರಘುಪತೀನಾಮೇಕತಃ ಕೀರ್ತಿಪಿಂಡಾಃ ।
ಕಿಮಿದಮಮೃತರಾಶಿರ್ವಾಹರೂಪೇಣ ಸಿದ್ಧೋ
ಮುನಿರಿತಿ ಮನಸೋಂತರ್ವಿಸ್ಮಯಂ ಪ್ರಾಪ ಪಶ್ಯ ॥ ೧೫ ॥

ಏಕತಃ ಶೋಣದೇಹಾನಾಂ ವಾಜಿನಾಂ ಪಂಕ್ತಿರುತ್ತಮಾ ।
ಏಕತಃ ಶ್ಯಾಮವರ್ಣಾನಾಂ ಕಸ್ತೂರೀಕಾಂತಿಸಪ್ರಭಾಃ ॥ ೧೬ ॥

ಏಕತಃ ಕನಕಾಭಾಶ್ಚ ತ್ವನ್ಯತೋ ನೀಲವರ್ಣಿನಃ ।
ಏಕತಃ ಶಬಲೈರ್ವರ್ಣೈರ್ವಿಶಿಷ್ಟೈರ್ವಾಜಿಭಿರ್ವೃತಾಃ ॥ ೧೭ ॥

ಏವಂ ಪಶ್ಯನ್ಮುನಿಸ್ಸರ್ವಾನ್ ಕೌತುಕಾವಿಷ್ಟಮಾನಸಃ ।
ಯಯಾವನ್ಯತ್ರ ತಾನ್ದ್ರಷ್ಟುಂ ಯಾಗಯೋಗ್ಯಾನ್ಹಯಾನ್ಮುನಿಃ ॥ ೧೮ ॥

---

೧೪. ರಾಮಚಂದ್ರನೊಡನೆ ಅವನ ಲಾಯಕ್ಕೆ ಹೋಗಿ ನಾನಾ ವಿಧವಾದ ಕುದುರೆಗಳನ್ನು ನೋಡಿದನು.

೧೫. ಕುದುರೆಗಳಿಗೆ ರಾಜನೆನಿಸಿರುವ ಉಚ್ಚೈಶ್ರವಸ್ಸಿನ ವಂಶಗಳೇ ಭೂಮಿಗೆ ಇಳಿದುಬಂದಿವೆಯೋ, ಅಥವಾ ರಘುವಂಶದ ರಾಜರ ಕೀರ್ತಿಗಳೇನಾದರೂ ಈ ರೀತಿ ಆಕಾರವನ್ನು ಹೊಂದಿವೆಯೋ, ಇಲ್ಲದಿದ್ದರೆ ಅಮೃತದ ರಾಶಿಗಳೇ ಕುದುರೆಯ ರೂಪದಿಂದಿವೆಯೋ ಎಂಬಂತಿದ್ದ ಆ ಕುದುರೆಗಳನ್ನು ನೋಡಿ ಋಷಿಯು ಮನಸ್ಸಿನಲ್ಲಿ ಆಶ್ಚರ್ಯಚಕಿತನಾದನು.

೧೬-೧೭. ಒಂದೆಡೆಯಲ್ಲಿ ಕೆಂಪಗಿರುವ ಕುದುರೆಗಳೂ, ಮತ್ತೊಂದೆಡೆಯಲ್ಲಿ ಕಪ್ಪುಕಿವಿಗಳುಳ್ಳ ಕುದುರೆಗಳೂ, ಇನ್ನೊಂದು ಕಡೆಯಲ್ಲಿ ಚಿನ್ನದಬಣ್ಣದ ಕುದುರೆಗಳೂ, ಮತ್ತೊಂದೆಡೆಯಲ್ಲಿ ಕಪ್ಪುಬಣ್ಣದವೂ, ಇನ್ನೊಂದುಕಡೆ ಬೂದುಬಣ್ಣದ ಕುದುರೆಗಳೂ ಹೀಗೆ ಗುಂಪುಗುಂಪಾಗಿ ವಿಧವಿಧ ಬಣ್ಣಗಳ ಕುದುರೆಗಳೂ ಬೇರೆಬೇರೆಯಾಗಿದ್ದುವು.

೧೮-೧೯. ಅವೆಲ್ಲವನ್ನೂ ನೋಡಿ ಆಶ್ಚರ್ಯಪಡುತ್ತಾ ಯಾಗಯೋಗ್ಯವಾದ

ದದರ್ಶ ತತ್ರ ಶತಶೋ ಬದ್ಧಾಂಸ್ತಾದೃಶವರ್ಣಕಾನ್ ।
ದೃಷ್ಟ್ವಾ ವಿಸ್ಮಯಮಾಪೇದೇ ವಿಸ್ಮಯಾದ್ಧರ್ಷಿತಾಂಗಕಃ　　॥ ೧೯ ॥

ಏಕತಃ ಶ್ಯಾಮವರ್ಣಾಂಶ್ಚ ಸರ್ವಾಂಗೇಷು ಪಯಃಪ್ರಭಾನ್ ।
ಪೀತಪುಚ್ಛಾನ್ಮುಖೇ ರಕ್ತಾನ್ ಶುಭಲಕ್ಷಣಲಕ್ಷಿತಾನ್　　॥ ೨೦ ॥

ನಿರೀಕ್ಷ್ಯ ಪರಿತೋನರ್ಘಾನ್ ವಿಮಲನೀರಧಾರಾನಿಭಾನ್
ಪ್ರಭಂಜನಮನೋಜವಾನ್ ವಿಮಲಕೀರ್ತಿಪುಂಜಪ್ರಭಾನ್ ।
ಪಯೋನಿಧಿವಿಶೋಷಕೋ ಮುನಿರುವಾಚ ಸೀತಾಪತಿಂ
ವಿಚಿತ್ರಹಯದರ್ಶನಾದ್ಧೃಷಿತನೇತ್ರವಕ್ತ್ರಪ್ರಭಃ　　॥ ೨೧ ॥

॥ ಅಗಸ್ತ್ಯ ಉವಾಚ ॥

ಹಯಮೇಧಕ್ರತೋರ್ಯೋಗ್ಯಾನ್ ವಾಹಾಂಸ್ತೇ ಬಹುಶಶ್ಶುಭಾನ್ ।
ಪಶ್ಯತೋ ನೇತ್ರಯೋರ್ನೋಽದ್ಯ ತೃಪ್ತಿರ್ನಾಸ್ತಿ ರಘೂತ್ತಮ　　॥ ೨೨ ॥

---

ಕುದುರೆಯನ್ನು ನೋಡಲು ಮತ್ತೊಂದೆಡೆಗೆ ಹೋಗಿ ಅಲ್ಲಿ ಕಟ್ಟಿರುವ ಕುದುರೆಗಳನ್ನೆಲ್ಲಾ ನೋಡಿದನು. ಅವೆಲ್ಲವನ್ನೂ ನೋಡಿ ಆಶ್ಚರ್ಯಪಟ್ಟನು.

೨೦. ಒಂದುಕಡೆಯಲ್ಲಿ ಇವನು ಹೇಳಿರುವಂತೆ ಕಪ್ಪುಕಿವಿ, ಮೈಯೆಲ್ಲಾ ಬಿಳುಪು, ಬಾಲ ಹೊಂಬಣ್ಣ, ಮುಖ ಕೆಂಪು, ಈ ರೀತಿ ಶುಭಲಕ್ಷಣಗಳಿಂದ ಕೂಡಿರುವುವುಗಳನ್ನು ನೋಡಿ ಹರ್ಷಪಟ್ಟನು.

೨೧. ಮತ್ತು ಅಲ್ಲಿ ನಿರ್ದುಷ್ಟವಾದ, ಬೆಳ್ಳಗಿರುವ, ವೇಗವುಳ್ಳ, ಕೀರ್ತಿಯ ಗುಂಪೋ ಎಂಬಂತಿರುವ ನಾನಾ ಬಗೆಯಾದ ಕುದುರೆಗಳನ್ನು ಆ ಋಷಿಯು ನೋಡಿ ತುಂಬಾ ಹರ್ಷಿತನಾದನು.

೨೨. ಅಗಸ್ತ್ಯನು ಹೇಳಿದನು:—ಅಶ್ವಮೇಧಕ್ಕೆ ಯೋಗ್ಯವಾದ ಕುದುರೆಗಳು ಇಲ್ಲಿರುವವು. ಅವುಗಳನ್ನು ಎಷ್ಟು ನೋಡಿದರೂ ನನ್ನ ಕಣ್ಣುಗಳಿಗೆ ತೃಪ್ತಿಯೇ ಉಂಟಾಗುವುದಿಲ್ಲ.

ರಾಮಚಂದ್ರ ಮಹಾಭಾಗ ಸುರಾಸುರನಮಸ್ಕೃತ ।
ಯಜ್ಞಂ ಕುರು ಮಹಾರಾಜ ಹಯಮೇಧಂ ಸುವಿಸ್ತರಂ || ೨೩ ||

ಸುರಪತಿರಿವ ಸರ್ವಾನ್ಯಜ್ಞಸಂಘಾನ್ ಕರಿಷ್ಯನ್
ತಪನ ಇವ ಸಪತ್ನಾರಾತಿತೋಯಂ ವಿಶೋಷ್ಯನ್ ।
ಹತರಿಪುಗಣಮುಖ್ಯಂ ಸಾಂಪರಾಯಂ ವಿಜಿತ್ಯ
ಕ್ಷಿತಿತಳಸುಖಭೋಗಂ ಕುರ್ವಿದಂ ಭೂರಿಭೋಗ || ೨೪ ||

ಇತ್ಯೇವಂ ವಾಕ್ಯನಾದೇನ ಪರಿತುಷ್ಟಾಖಿಲೇಂದ್ರಿಯಃ ।
ಸರ್ವಾಸ್ತ್ವ ಯಜ್ಞಸಂಭಾರಾನಾಜಹಾರ ಮನೋಹರಾನ್ || ೨೫ ||

ಮುನ್ಯನ್ವಿತೋ ಮಹಾರಾಜಃ ಸರಯೂತೀರಮಾಗತಃ ।
ಸುವರ್ಣಲಾಂಗಲ್ಯೈರ್ಭೂಮಿಂ ವಿಚಕರ್ಷ ಮಹೀಯಸೀಂ || ೨೬ ||

ವಿಲಿಖ್ಯ ಭೂಮಿಂ ಬಹುಶಶ್ಚತುರ್ಯೋಜನಸಂಮಿತಾಂ ।
ಮಂಟಪಾನ್ ರಚಯಾಮಾಸ ಯಜ್ಞಾರ್ಥಂ ಸ ನರೋತ್ತಮಃ || ೨೭ ||

---

೨೩. ದೇವಾದಿ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಶ್ರೀರಾಮಚಂದ್ರನೇ, ಅಶ್ವಮೇಧಯಾಗವನ್ನು ಅವಶ್ಯಕವಾಗಿ ಮಾಡು.

೨೪. ಇಂದ್ರನಂತೆ ಎಲ್ಲಾ ಯಾಗಗಳನ್ನೂ ಮಾಡಿ, ಸೂರ್ಯನು ನೀರನ್ನು ಶೋಷಿಸುವಂತೆ ನೀನು ಶತ್ರುಗಳೆಂಬ ನೀರನ್ನು ಶೋಷಿಸಿ, ಶತ್ರುನಾಶಕವಾದ ಯುದ್ಧಗಳಲ್ಲಿ ಗೆದ್ದು, ಪ್ರಪಂಚದ ಭೋಗಗಳನ್ನು ಅನುಭವಿಸು. ಎಂದು ರಾಮನನ್ನು ಅಭಿನಂದಿಸಿದನು.

೨೫-೨೬. ಈ ಮಾತಿನಿಂದ ಸಂತೋಷಪಟ್ಟು, ರಾಮನು ಯಜ್ಞದ ಸಾಮಾನುಗಳನ್ನು ತರಿಸಿ ಸಿದ್ಧಮಾಡಿಕೊಂಡು, ಆ ಅಗಸ್ತ್ಯನೊಡನೆ ಸರಯೂತೀರಕ್ಕೆ ಬಂದು, ಚಿನ್ನದ ನೇಗಿಲಿನಿಂದ ಯಾಗಭೂಮಿಯನ್ನು ಉಳಿಸಿದನು.

೨೭. ನಾಲ್ಕುಯೋಜನದಷ್ಟಗಲ ಭೂಮಿಯನ್ನು ಉತ್ತು, ಶೋಧಿಸಿ, ಅಲ್ಲಿ ಯಜ್ಞಕ್ಕೆ ಬೇಕಾದ ಮಂಟಪಗಳನ್ನು ಕಟ್ಟಿಸಿದನು.

ಕುಂಡಂ ತು ವಿಧಿವತ್ಕೃತ್ವಾ ಯೋನಿಮೇಖಲಯಾನ್ವಿತಂ ।
ಅನೇಕರತ್ನರಚಿತಂ ಸರ್ವಶೋಭಾಸಮನ್ವಿತಂ ॥ ೨೮ ॥

ಮುನೀಶ್ವರೋ ಮಹಾಭಾಗೋ ವಸಿಷ್ಠಸ್ಸುಮಹಾತಪಾಃ ।
ಸರ್ವಂ ತತ್ಕಾರಯಾಮಾಸ ವೇದಶಾಸ್ತ್ರವಿಧಿಶ್ರಿತಂ ॥ ೨೯ ॥

ಪ್ರೇಷಿತಾಸ್ತೇನ ಮುನಿನಾ ಶಿಷ್ಯಾ ಮುನಿವರಾಶ್ರಮಾನ್ ।
ಕಥಯಾಮಾಸುರುದ್ಯುಕ್ತಂ ಹಯಮೇಧೇ ರಘೂತ್ತಮಂ ॥ ೩೦ ॥

ಆಕಾರಿತಾಸ್ತದಾ ಸರ್ವ ಋಷಯಸ್ತಪತಾಂ ವರಾಃ ।
ಆಜಗ್ಮುಃ ಪರಮೇಶಸ್ಯ ದರ್ಶನೇ ತ್ವತಿಲಾಲಸಾಃ ॥ ೩೧ ॥

ನಾರದೋಽಸಿತನಾಮಾ ಚ ಪರ್ವತಃ ಕಪಿಲೋ ಮುನಿಃ ।
ಜಾತೂಕರ್ಣ್ಯೋಂಽಗಿರಾ ವ್ಯಾಸ ಆರ್ಷ್ಟಿಷೇಣೋಽತ್ರಿಗೌತಮೌ ॥ ೩೨ ॥

ಹಾರೀತೋ ಯಾಜ್ಞವಲ್ಕ್ಯಶ್ಚ ಸಂವರ್ತಃ ಶುಕಸಂಜ್ಞಕಃ ।
ಇತ್ಯೇವಮಾದಯೋ ರಾಮಹಯಮೇಧವರಂ ಯಯುಃ ॥ ೩೩ ॥

---

೨೮-೨೯. ಪುರೋಹಿತನಾದ ವಸಿಷ್ಠಮುನಿಯು ಮಧ್ಯಭಾಗ ಹೊರಭಾಗಗಳಿಂದ ಕೂಡಿದ ಕುಂಡವನ್ನು ಶಾಸ್ತ್ರದಂತೆ ಮಾಡಿ, ಅದರಲ್ಲಿ ರತ್ನಗಳನ್ನು ಹಾಕಿ ಶುದ್ಧಿಗೊಳಿಸಿ, ಶಾಸ್ತ್ರದ ರೀತಿಯಂತೆ ಎಲ್ಲವನ್ನೂ ಮಾಡಿಸಿದನು.

೩೦-೩೧. ಆ ಋಷಿಯು, ಆಶ್ರಮಗಳಿಗೆಲ್ಲಾ ರಾಮನು ಅಶ್ವಮೇಧಯಾಗವನ್ನು ಮಾಡುತ್ತಾನೆಂಬುದನ್ನು ತಿಳಿಸಲು, ತನ್ನ ಶಿಷ್ಯರುಗಳನ್ನು ಕಳುಹಿಸಿ ಅವರಿಂದ ಋಷಿಗಳನ್ನು ಕರೆಸಿದನು. ಅವರೆಲ್ಲರೂ ರಾಮದರ್ಶನಕುತೂಹಲರಾಗಿ ಯಜ್ಞಕ್ಕೆ ಬಂದರು.

೩೨-೩೩. ನಾರದ, ಅಸಿತ, ಪರ್ವತ, ಕಪಿಲ, ಜಾತುಕರ್ಣಿ, ಅಂಗೀರಸ, ವ್ಯಾಸ, ಆರ್ಷ್ಟಿಷೇಣ, ಅತ್ರಿ, ಗೌತಮ, ಹಾರೀತ, ಯಾಜ್ಞವಲ್ಕ್ಯ, ಸಂವರ್ತ, ಶುಕ. ಇವರೇ ಮೊದಲಾದ ಋಷಿಗಳು ರಾಮನ ಯಾಗಕ್ಕೆ ಬಂದರು.

ತಾನ್ಸರ್ವಾನ್ಪೂಜಯಾಮಾಸ ರಘುರಾಜೋ ಮಹಾಮುದಾ ।
ಪ್ರತ್ಯುತ್ಥಾನಾಭಿವಾದಾಭ್ಯಾಮರ್ಘ್ಯವಿಷ್ಟರಕಾಸನೈಃ ॥ ೩೪ ॥

ಗಾಂ ಹಿರಣ್ಯಂ ದದೌ ತೇಭ್ಯಃ ಪ್ರಾಯಶೋ ದೃಷ್ಟವಿಕ್ರಮಃ ।
ಮಹದ್ಭಾಗ್ಯಂ ತ್ವದ್ಯ ಮೇಽಸ್ತಿ ಯದ್ಯೂಯಂ ದರ್ಶನಂ ಗತಾಃ ॥ ೩೫ ॥

॥ ಶೇಷ ಉವಾಚ ॥

ಏವಂ ಸಮಾಕುಲೇ ಬ್ರಹ್ಮನ್ ಋಷಿವರ್ಯಸಮಾಗಮೇ ।
ಧರ್ಮವಾರ್ತಾ ಬಭೂವಾಹೋ ವರ್ಣಾಶ್ರಮಸುಸಂಮತಾ ॥ ೩೬ ॥

॥ ವಾತ್ಸ್ಯಾಯನ ಉವಾಚ ॥

ಕಾ ಧರ್ಮವಾರ್ತಾ ತತ್ರಾಸೀತ್ ಕಿಂ ವಾ ಕಥಿತಮದ್ಭುತಂ ।
ಸಾಧವಸ್ಸರ್ವಲೋಕಾನಾಂ ಕಾರುಣ್ಯಾತ್ಕಿಮುತಾಬ್ರುವನ್ ॥ ೩೭ ॥

---

೩೪. ರಾಮನು ಅವರನ್ನೆಲ್ಲಾ ಪ್ರತ್ಯುತ್ಥಾನ, ಅಭಿವಾದನಗಳಿಂದ ಸತ್ಕರಿಸಿದನು. ಮತ್ತು ಅವರಿಗೆ ಅರ್ಘ್ಯ, ಪಾದ್ಯ, ಆಸನಗಳನ್ನು ಕೊಟ್ಟು ಗೋಭೂಹಿರಣ್ಯಗಳಿಂದ ಸತ್ಕರಿಸಿದನು.

೩೫. ನನ್ನ ಭಾಗ್ಯವು ಮಹತ್ತಾದುದು. ಆದ್ದರಿಂದಲೇ ನೀವೆಲ್ಲರೂ ನನ್ನ ಮೇಲೆ ದಯವಿಟ್ಟು ಇಲ್ಲಿಗೆ ಬಿಜಯಮಾಡಿಸಿದಿರೆಂದು ಉಪಚಾರೋಕ್ತಿಗಳಿಂದ ಅವರನ್ನು ಆದರಿಸಿದನು.

೩೬. ಶೇಷನು ಹೇಳಿದನು :—ಈ ರೀತಿ ಋಷಿಗಳೆಲ್ಲರೂ ಒಂದೆಡೆ ಸೇರಿರುವಲ್ಲಿ ವರ್ಣಾಶ್ರಮಗಳಿಗೆ ಸಂಬಂಧಪಟ್ಟ ಅನೇಕ ವಿಷಯಗಳು ಅಲ್ಲಿ ಚರ್ಚಿಸಲ್ಪಟ್ಟವು.

೩೭. ವಾತ್ಸ್ಯಾಯನನು ಕೇಳಿದನು :—ಅಲ್ಲೇನು ಧರ್ಮವಾರ್ತೆಗಳು ಬಂದುವು? ಏನು ವಿಶೇಷ ಸಂಗತಿಗಳನ್ನು ಹೇಳಿದರು? ದಯವಿಟ್ಟು ಅದನ್ನೆಲ್ಲಾ ನನಗೆ ಹೇಳು ಎಂದನು.

॥ ಶೇಷ ಉವಾಚ ॥

ತಾನ್ಸಮೇತಾನ್ ಮುನೀನ್ದೃಷ್ಟ್ವಾ ರಾಮೋ ದಾಶರಥಿರ್ಮಹಾನ್ ।
ಪಪ್ರಚ್ಛ ಸರ್ವಧರ್ಮಾಂಶ್ಚ ಸರ್ವವರ್ಣಾಶ್ರಮೋಚಿತಾನ್ ॥ ೩೮ ॥

ತೇ ತು ಪೃಷ್ಟಾ ಹಿ ರಾಮೇಣ ಧರ್ಮಾನ್ಪ್ರೋಚುರ್ಮಹಾಗುಣಾನ್ ।
ತಾನ್ ಪ್ರವಕ್ಷ್ಯಾಮಿ ತೇ ಸರ್ವಾನ್ ಯಥಾವಿಧಿ ಶೃಣುಷ್ವ ತಾನ್ ॥ ೩೯ ॥

॥ ಋಷಯ ಊಚುಃ ॥

ಬ್ರಾಹ್ಮಣೇನ ಸದಾ ಕಾರ್ಯಂ ಯಜನಾಧ್ಯಾಪನಾದಿಕಂ ।
ವೇದಾನ್ಪಠಿತ್ವಾ ವಿರಜೇನ್ನೋ ವಾ ಗಾರ್ಹಸ್ಥ್ಯಮಾವಿಶೇತ್ ॥ ೪೦ ॥

ಬ್ರಾಹ್ಮಣೇನ ಸದಾ ತ್ಯಾಜ್ಯಂ ನೀಚಸೇವಾನುಜೀವನಂ ।
ಆಪದ್ಗತೋಽಪಿ ಜೀವೇತ ನ ಶ್ವವೃತ್ತ್ಯಾ ಕದಾಚನ ॥ ೪೧ ॥

ಋತುಕಾಲಾಭಿಗಮನಂ ಧರ್ಮೋಽಯಂ ಗೃಹಿಣಃ ಪರಃ ।
ಸ್ತ್ರೀಣಾಂ ವರಮನುಸ್ಮೃತ್ಯಾ ಪತ್ಯಕಾಮೋಽಥವಾ ಭವೇತ್ ॥ ೪೨ ॥

---

೩೮. ಶೇಷನು ಹೇಳಿದನು:—ರಾಮನು ಅಲ್ಲಿ ಸೇರಿರುವ ಋಷಿಗಳನ್ನು ನೋಡಿ ಸರ್ವಾಶ್ರಮಗಳಿಗೂ ಸಮಾನವಾದ ಧರ್ಮಗಳನ್ನು ಹೇಳಿರಿ ಎಂದನು.

೩೯. ಆ ರಾಮನು ಹೀಗೆ ಕೇಳಲು, ಅವರು ಅವನಿಗೆ ಧರ್ಮಗಳನ್ನೆಲ್ಲಾ ಹೇಳಿದರು. ಅವರು ಹೇಳಿದುದೆಲ್ಲವನ್ನೂ ಶಾಸ್ತ್ರರೀತಿಯಂತೆ ಹೇಳುತ್ತೇನೆ ಕೇಳು.

೪೦. ಋಷಿಗಳು ಹೇಳಿದರು :—ಬ್ರಾಹ್ಮಣನು ಯಾವಾಗಲೂ ಅಧ್ಯಯನ ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹಗಳನ್ನು ಮಾಡಬೇಕು. ವೇದಗಳನ್ನು ಓದಿದನಂತರ ಬ್ರಹ್ಮಚರ್ಯಾಶ್ರಮವನ್ನು ಸಮಾಪ್ತಿಗೊಳಿಸಿ ಗಾರ್ಹಸ್ಥವನ್ನಾಶ್ರಯಿಸಬಹುದು. ಇಲ್ಲವೇ ಸನ್ಯಾಸಾಶ್ರಮವನ್ನು ಹೊಂದಬಹುದು.

೪೧. ಬ್ರಾಹ್ಮಣರು ನೀಚಸೇವೆಯಿಂದ ಜೀವನಮಾಡಕೂಡದು. ಎಷ್ಟೇ ಕಷ್ಟಬಂದರೂ ಸೇವೆಯ ಜೀವನವು ಕೂಡದು.

೪೨. ಗೃಹಸ್ಥನಾದವನು ಋತುಕಾಲದಲ್ಲಿ ಸ್ತ್ರೀಸಂಗವನ್ನು ಮಾಡಿಯೇ ತೀರಬೇಕು. ಸ್ತ್ರೀಯರಿಗೆ ದೇವರು ಕೊಟ್ಟಿರುವುದು ಈ ವರವು. ಆ ಧರ್ಮವನ್ನು

ದಿವಾಭಿಗಮನಂ ಪುಂಸಾಮನಾಯುಷ್ಯಕರಂ ಮತಂ ।
ಶ್ರಾದ್ಧಾಹಃ ಸರ್ವಪರ್ವಾಣಿ ಯತಸ್ತ್ಯಾಜ್ಯಾನಿ ಧೀಮತಾ ॥ ೪೩ ॥

ತತ್ರ ಗಚ್ಛನ್ ಸ್ತ್ರಿಯಂ ಮೋಹಾದ್ಧರ್ಮಾತ್ಪ್ರಚ್ಯವತೇ ಪರಾತ್ ।
ಋತುಕಾಲಾಭಿಗಾಮೀ ಯಃ ಸ್ವದಾರನಿರತಶ್ಚ ಯಃ ॥ ೪೪ ॥

ಸ ಸದಾ ಬ್ರಹ್ಮಚಾರೀಹ ವಿಜ್ಞೇಯಃ ಸದ್ಗೃಹಾಶ್ರಮೀ ।
ಋತುಷ್ಷೋಡಶ ಯಾಮಿನ್ಯಶ್ಚತಸ್ರಸ್ತಾಸು ಗರ್ಹಿತಾಃ ॥ ೪೫ ॥

ಪುತ್ರದಾಸ್ತಾಸು ಯಾ ಯುಗ್ಮಾ ಅಯುಗ್ಮಾಃ ಕನ್ಯಕಾಪ್ರದಾಃ ।
ತ್ಯಕ್ತ್ವಾ ಚಂದ್ರಮಸಂ ದುಷ್ಟಂ ಮಘಾಂ ಮೂಲಂ ವಿಹಾಯ ಚ ॥ ೪೬ ॥

ಶುಚಿಸ್ಸನ್ನಿರ್ವಿಶೇತ್ಪತ್ನೀಂ ಪುನ್ನಾಮರ್ಕ್ಷೇ ವಿಶೇಷತಃ ।
ಶುಚಿಂ ಪುತ್ರಂ ಪ್ರಸೂಯೇತ ಪುರುಷಾರ್ಥಪ್ರಸಾಧನಂ ॥ ೪೭ ॥

---

ಅನುಸರಿಸಿಯಾಗಲಿ, ಅಥವಾ ಮಕ್ಕಳಾಗಬೇಕೆಂಬಾಸೆಯಿಂದಾಗಲಿ ಸ್ತ್ರೀಸಂಗವನ್ನು ಮಾಡಬೇಕು.

೪೩. ಹಗಲು ಹೊತ್ತಿನಲ್ಲಿ ಸ್ತ್ರೀಸಂಗವು ಗಂಡಸಿಗೆ ಆಯುಸ್ಸನ್ನು ನಾಶಮಾಡುತ್ತದೆ. ಶ್ರಾದ್ಧದ ದಿವಸ, ಪರ್ವದಿನಗಳನ್ನು ಬುದ್ಧಿಶಾಲಿಯು ಬಿಡಬೇಕು.

೪೪. ಆ ಕಾಲಗಳಲ್ಲಿ ಮೋಹದಿಂದ ಸ್ತ್ರೀಗಮನಮಾಡಿದರೆ ಧರ್ಮವು ನಾಶವಾಗುತ್ತದೆ. ಋತುಕಾಲದಲ್ಲಿ ಸ್ತ್ರೀಸಂಗಮಾಡುತ್ತಾ ತನ್ನ ಹೆಂಡತಿಯಲ್ಲೇ ಯಾವನು ನಿರತನಾಗಿ ಪರರ ಹೆಂಡಿರನ್ನು ಕಣ್ಣೆತ್ತಿ ನೋಡುವುದಿಲ್ಲವೋ ಅಂತಹ ಗೃಹಸ್ಥನನ್ನು ಬ್ರಹ್ಮಚಾರಿಯೆಂದು ತಿಳಿಯಬೇಕು.

೪೫-೪೭. ಋತುವೆಂಬುದು ಹದಿನಾರು ರಾತ್ರಿಗಳೆಂದು ಗಣಿಸಲ್ಪಟ್ಟಿದೆ. ಅವುಗಳಲ್ಲಿ ಮೊದಲಿನ ನಾಲ್ಕು ರಾತ್ರಿಗಳು ನಿಂದಿತವಾದುವು. ಚಂದ್ರನು ದುಷ್ಟನಾದ ಕಾಲದಲ್ಲಿ, ಮಘ, ಮೂಲ ನಕ್ಷತ್ರಗಳನ್ನು ಬಿಟ್ಟು ಶುಚಿಯಾಗಿ ಪುರುಷ ನಕ್ಷತ್ರಗಳಲ್ಲಿ ಹೆಂಡತಿಯ ಸಂಗವನ್ನು ಮಾಡಬೇಕು. ಹಾಗೆ ಮಾಡಿದರೆ ಪುರುಷಾರ್ಥಗಳಿಗೆ ಸಾಧಕನಾದ ಮಗನನ್ನು ಹೊಂದುತ್ತಾರೆ. ಆ ಹದಿನಾರು ದಿನಗಳಲ್ಲಿ ಸಮದಿನಗಳಲ್ಲಿ ಸಂಗಮಾಡಿದರೆ ಗಂಡೂ, ವಿಷಮದಿನ (ಬೆಸದಿನ) ಗಳಲ್ಲಿ ಸಂಗಮಾಡಿದರೆ ಹೆಣ್ಣೂ ಹುಟ್ಟುತ್ತವೆ.

**ಆರ್ಷೇ ವಿವಾಹೇ ಗೋದ್ವಂದ್ವಂ ಯದುಕ್ತಂ ತತ್ಪ್ರಶಸ್ಯತೇ ।**
**ಶುಲ್ಕಮಣ್ವಪಿ ಕನ್ಯಾಯಾಃ ಕನ್ಯಾವಿಕ್ರೇತೃಪಾಪಕೃತ್ ॥ ೪೮ ॥**

**ವಾಣಿಜ್ಯಂ ನೃಪತೇಸ್ಸೇವಾ ವೇದಾನಧ್ಯಯನಂ ತಥಾ ।**
**ಕುವಿವಾಹಃ ಕ್ರಿಯಾಲೋಪಃ ಕುಲಪಾತನಹೇತವಃ ॥ ೪೯ ॥**

**ಅನ್ನೋದಕಪಯೋಮೂಲಫಲೈರ್ವಾಪಿ ಗೃಹಾಶ್ರಮೀ ।**
**ಗೋದಾನೇನ ತು ಯತ್ಪುಣ್ಯಂ ಪಾತ್ರಾಯ ವಿಧಿಪೂರ್ವಕಂ ॥ ೫೦ ॥**

**ಅನರ್ಚಿತೋಽತಿಥಿರ್ಗೇಹಾದ್ಭಗ್ನಾಶೋ ಯಸ್ಯ ಗಚ್ಛತಿ ।**
**ಆಜನ್ಮಸಂಚಿತಾತ್ಪುಣ್ಯಾತ್ ಕ್ಷಣಾತ್ಸ ಹಿ ಬಹಿರ್ಭವೇತ್ ॥ ೫೧ ॥**

**ಪಿತೃದೇವಮನುಷ್ಯೇಭ್ಯೋ ದತ್ವಾಶ್ನೀತಾಮೃತಂ ಗೃಹೀ ।**
**ಸ್ವಾರ್ಥಂ ಪರಮಘಂ ಭುಂಕ್ತೇ ಕೇವಲಂ ಸ್ವೋದರಂಭರಿಃ ॥ ೫೨ ॥**

---

೪೮. ಧರ್ಮಶಾಸ್ತ್ರವನ್ನನುಸರಿಸಿ ಋಷಿಗಳು ಆಚರಿಸುವ ವಿವಾಹಪದ್ಧತಿಯಲ್ಲಿ ಎರಡು ಗೋದಾನಮಾಡಬೇಕು. ಅದು ಯೋಗ್ಯವು. ಕನ್ಯೆಗೋಸ್ಕರ ಹಣವನ್ನು ತೆಗೆದುಕೊಳ್ಳಬಾರದು. ಹಾಗೆ ಮಾಡಿದರೆ ಕನ್ಯೆಯನ್ನು ಮಾರಿದ ಪಾಪ ಬರುತ್ತದೆ.

೪೯. ವ್ಯಾಪಾರ, ರಾಜಸೇವೆ, ವೇದವನ್ನು ಓದದಿರುವುದು, ಕೆಟ್ಟರೀತಿ ವಿವಾಹ, ಕ್ರಿಯಾಲೋಪ, ಇವುಗಳು ಕುಲವನ್ನು ನಾಶಮಾಡುತ್ತವೆ.

೫೦. ಪಾತ್ರನಾದವನಿಗೆ ವಿಧಿವತ್ತಾಗಿ ಅನ್ನ, ನೀರು, ಹಾಲು, ಗೆಣಸು, ಹಣ್ಣುಗಳನ್ನು ಗೃಹಸ್ಥನು ಕೊಟ್ಟರೆ, ಅವನಿಗೆ ಗೋದಾನಮಾಡಿದ ಪುಣ್ಯಬರುತ್ತದೆ.

೫೦. ಅತಿಥಿಯು ಯಾವನ ಮನೆಗೆ ಬಂದು ಗೌರವಿಸಲ್ಪಡದೇ ಆಶಾಭಂಗ ಹೊಂದಿ ಹೋಗುತ್ತಾನೋ ಹೋಗುವಾಗ ಆ ಯಜಮಾನನ ಜನ್ಮಪ್ರಭೃತಿ ಗಳಿಸಿದ ಪುಣ್ಯಗಳನ್ನೂ ಕೊಂಡುಹೋಗುತ್ತಾನೆ.

೫೨. ಒಳ್ಳೆಯ ಪದಾರ್ಥಗಳನ್ನು ಮಾಡಿದರೆ ಪಿತೃಗಳಿಗೂ, ದೇವತೆಗಳಿಗೂ, ಅತಿಥಿಗಳಿಗೂ, ಕೊಟ್ಟು ತಿನ್ನಬೇಕು. ತಾನೊಬ್ಬನೇ ತಿಂದರೆ ಪಾಪವನ್ನು ತಿಂದ ಹಾಗಾಗುತ್ತದೆ.

ಷಷ್ಟ್ಯಷ್ಟಮ್ಯೋರ್ವಿಶೇತ್ಪಾಪಂ ತೈಲೇ ಮಾಂಸೇ ಸದೈವ ಹಿ ।
ಚತುರ್ದಶ್ಯಾಂ ತಥಾಮಾಯಾಂ ತ್ಯಜೇತ ಕ್ಷುರಮಂಗನಾಂ ॥ ೫೩ ॥

ರಜಸ್ವಲಾಂ ನ ಸೇವೇತ ನಾಶ್ನೀಯಾತ್ಸಹ ಭಾರ್ಯಯಾ ।
ಏಕವಾಸಾ ನ ಭುಂಜೀತ ನ ಭುಂಜೀತೋತ್ಕಟಾಸನೇ ॥ ೫೪ ॥

ನಾಶ್ನಂತೀಂ ಸ್ತ್ರೀಂ ಸಮೀಕ್ಷೇತ ತೇಜಃಕಾಮೋ ನರೋತ್ತಮಃ ।
ಮುಖೇನೋಪಧಮೇನ್ನಾಗ್ನಿಂ ನಗ್ನಾಂ ನೇಕ್ಷೇತ ಯೋಷಿತಂ ॥ ೫೫ ॥

ನಾಚಕ್ಷೀತ ಧಯಂತೀಂ ಗಾಂ ನೇಂದ್ರಚಾಪಂ ಪ್ರದರ್ಶಯೇತ್ ।
ನ ದಿವೋದ್ಧತಸಾರಂ ಚ ಭಕ್ಷಯೇದ್ದಧಿ ನೋ ನಿಶಿ ॥ ೫೬ ॥

---

೫೩. ಷಷ್ಟಿ ಅಷ್ಟಮಿಗಳಲ್ಲಿ ತೈಲದಲ್ಲಿಯೂ, ಮಾಂಸದಲ್ಲಿಯೂ, ಪಾಪಗಳಿರುತ್ತವೆ. ಆದುದರಿಂದ ಆ ದಿನಗಳಲ್ಲಿ ಅವುಗಳನ್ನು ಸೇವಿಸಬಾರದು. ಚತುರ್ದಶೀ, ಅಮಾವಾಸ್ಯೆಗಳಲ್ಲಿ ಪತ್ನೀಸಂಭೋಗವನ್ನು ಮಾಡಕೂಡದು. ಕ್ಷೌರಮಾಡಿಸಿಕೊಳ್ಳಕೂಡದು.

೫೪. ಮುಟ್ಟಾದವಳನ್ನು ನೋಡಕೂಡದು. ಹೆಂಡತಿಯೊಡನೆ ಏಕಪಂಕ್ತಿಯಲ್ಲಿ ಕುಳಿತು ಊಟಮಾಡಬಾರದು. ಒಂದೇ ಬಟ್ಟೆಯಲ್ಲಿ ಊಟಮಾಡಬಾರದು. ಎತ್ತರವಾದ ಆಸನದಲ್ಲಿ ಕುಳಿತು ಊಟಮಾಡಬಾರದು.

೫೫. ಊಟಮಾಡುತ್ತಿರುವಾಗ ಹೆಂಗಸನ್ನು ನೋಡಬಾರದು. ಅದರಿಂದ ತೇಜಸ್ಸು ಹಾಳಾಗುತ್ತದೆ. ಬಾಯಿಂದ ಬೆಂಕಿಯನ್ನೂದಬಾರದು. ಬೆತ್ತಲೆಯಿರುವ ಹೆಂಗಸನ್ನು ನೋಡಬಾರದು.

೫೬. ಕರು ಹಾಲು ಕುಡಿಯುತ್ತಿದ್ದರೆ ಹೇಳಬಾರದು. ಕಾಮನಬಿಲ್ಲನ್ನು ತೋರಿಸಬಾರದು. ಹಗಲಿನಲ್ಲಿ ಮಜ್ಜಿಗೆಯನ್ನೂ, ರಾತ್ರಿಯಲ್ಲಿ ಮೊಸರನ್ನೂ ಊಟಮಾಡಬಾರದು.

ನಾಂಘ್ರೀ ಪ್ರತಾಪಯೇದಗ್ನೌ ನ ವಸ್ತ್ವಶುಚಿ ನಿಕ್ಷಿಪೇತ್ ।
ಪ್ರಾಣಿಹಿಂಸಾಂ ನ ಕುರ್ವೀತ ನಾಶ್ನೀಯಾತ್ಸಂಧ್ಯಯೋರ್ದ್ವಯೋಃ ॥ ೫೭ ॥

ಸ್ತ್ರೀಧರ್ಮಿಣೀಂ ನಾಭಿವಾದೇನ್ನಾದ್ಯಾದಾತೃಪ್ತಿ ರಾತ್ರಿಷು ।
ತೌರ್ಯತ್ರಿಕಪ್ರಿಯೋ ನ ಸ್ಯಾತ್ ಕಾಂಸ್ಯೇ ಪಾದೌ ನ ಧಾವಯೇತ್ ॥ ೫೮ ॥

ನ ಧಾರಯೇದನ್ಯಭುಕ್ತಂ ವಾಸಶ್ಚೋಪಾನಹಾವಪಿ ।
ನ ಭಿನ್ನಭಾಜನೇಽಶ್ನೀಯಾನ್ನಾಶ್ನೀತಾನ್ಯವಿದೂಷಿತೇ ॥ ೫೯ ॥

ಸಂವಿಶೇನ್ನಾರ್ದ್ರಚರಣೋ ನೋಚ್ಛಿಷ್ಟಃ ಕ್ವಚಿದಾವ್ರಜೇತ್ ।
ಶಯಾನೋ ವಾ ನ ಚಾಶ್ನೀಯಾನ್ನೋಚ್ಛಿಷ್ಟಃ ಸಂಸ್ಪೃಶೇಚ್ಛಿರಃ ॥ ೬೦ ॥

---

೫೭. ಬೆಂಕಿಯಲ್ಲಿ ಕಾಲುಗಳನ್ನು ಕಾಸಬಾರದು. ಅಶುಚಿಯಾದ ಜಾಗದಲ್ಲಿ ಪದಾರ್ಥಗಳನ್ನು ಹಾಕಬಾರದು. ಪ್ರಾಣಿಹಿಂಸೆ ಮಾಡಬಾರದು. ಸಂಧ್ಯಾಕಾಲ ಗಳಲ್ಲಿ ಊಟಮಾಡಬಾರದು.

೫೮. ಮುಟ್ಟಾಗಿರುವ ಹೆಂಗಸಿಗೆ ನಮಸ್ಕಾರಮಾಡಬಾರದು. ರಾತ್ರಿಯವೇಳೆ ತೃಪ್ತಿಯಾಗುವವರೆಗೂ ಊಟಮಾಡಬಾರದು. ಸ್ವಲ್ಪ ಕಡಿಮೆಯಾಗಿಯೇ ಮಾಡ ಬೇಕು. ನೃತ್ಯಗೀತಗಳಲ್ಲಿ ಹೆಚ್ಚು ಆಸಕ್ತನಾಗಬಾರದು. ಕಂಚಿನ ಪಾತ್ರೆಯಲ್ಲಿ ಕಾಲು ತೊಳೆಯಬಾರದು.

೫೯. ಬೇರೆಯವರು ಉಪಯೋಗಿಸಿದ ಬಟ್ಟೆ, ಜೋಡುಗಳನ್ನು ಉಪಯೋಗಿಸ ಬಾರದು. ವ್ಯತ್ಯಾಸವಾದ ಎರಡುಬಗೆ ಎಂದರೆ ಎರಡು ಲೋಹಗಳನ್ನು ಸೇರಿಸಿ ಮಾಡಿದ ಪಾತ್ರೆಗಳಲ್ಲಿ ಊಟಮಾಡಬಾರದು. ಮತ್ತೊಬ್ಬನು ತಿಂದು ಮಿಕ್ಕಿದ್ದನ್ನು ಊಟಮಾಡಬಾರದು.

೬೦. ಕಾಲು ಒದ್ದೆಯಾಗಿರುವಾಗ ಕೂತುಕೊಳ್ಳಬಾರದು. ಅಶುಚಿಯಾಗಿ ಎಲ್ಲೂ ಹೋಗಬಾರದು. ಮಲಗಿಕೊಂಡು ಊಟಮಾಡಬಾರದು. ಅಶುಚಿಯಾಗಿ ತಲೆಯನ್ನು ಮುಟ್ಟಿಕೊಳ್ಳಬಾರದು.

ನ ಮನುಷ್ಯಸ್ತುತಿಂ ಕುರ್ಯಾನ್ನಾತ್ಮಾನಮವಮಾನಯೇತ್ ।
ಅಭ್ಯುದ್ಯಂತಂ ನ ಪ್ರಣಮೇತ್ಪರಮರ್ಮಾಣಿ ನೋ ವದೇತ್ ॥ ೬೧ ॥

ಏವಂ ಗಾರ್ಹಸ್ಥ್ಯಮಾಶ್ರಿತ್ಯ ವಾನಪ್ರಸ್ಥಾಶ್ರಮಂ ವ್ರಜೇತ್ ।
ಸಸ್ತ್ರೀಕೋ ವಿಗತಸ್ತ್ರೀಕೋ ವಿರಜೇತ ತತಃ ಪರಂ ॥ ೬೨ ॥

ಇತ್ಯೇವಮಾದಯೋ ಧರ್ಮಾ ಗದಿತಾ ಋಷಿಭಿಸ್ತದಾ ।
ಶ್ರುತಾ ರಾಮೇಣ ಮಹತಾ ಸರ್ವ ಲೋಕಹಿತೈಷಿಣಾ ॥ ೬೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ಶ್ರೀ ರಾಮಾಶ್ವಮೇಧೇ ಸರ್ವಧರ್ಮನಿರೂಪಣಂ ನಾಮ ನವಮೋಽಧ್ಯಾಯಃ



---

೬೧. ಮನುಷ್ಯನ ಸ್ತುತಿಯನ್ನು ಮಾಡಬಾರದು. ತನ್ನನ್ನು ತಾನು ಅವಮಾನಿಸಿಕೊಳ್ಳಬಾರದು. ಏಳುತ್ತಿರುವವರನ್ನು ನಮಸ್ಕರಿಸಬಾರದು. ಪರರಿಗೆ ಸಂಕಟವಾಗುವ ಮಾತುಗಳನ್ನಾಡಬಾರದು.

೬೨. ಈ ರೀತಿ ಗೃಹಸ್ಥಾಶ್ರಮವನ್ನು ಆಶ್ರಯಿಸಿದ್ದು, ಅನಂತರ ವಾನಪ್ರಸ್ಥನಾಗಬೇಕು, ಹೆಂಡತಿಯೊಡನಾಗಲಿ ಅಥವಾ ಅವಳನ್ನು ಬಿಟ್ಟಾಗಲಿ ವಾನಪ್ರಸ್ಥನಾಗಿ ಕೆಲವು ಕಾಲವಿದ್ದು, ಆ ಮೇಲೆ ಸನ್ಯಾಸವನ್ನು ಸ್ವೀಕರಿಸಬೇಕು.

೬೩. ಇವೇ ಮೊದಲಾದ ಧರ್ಮಗಳನ್ನು ಋಷಿಗಳು ಹೇಳಿದರು. ಲೋಕಹಿತೈಷಿಯಾದ ರಾಮನು ಇವೆಲ್ಲವನ್ನೂ ಕೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ಶ್ರೀ ರಾಮಾಶ್ವಮೇಧದ ಸರ್ವಧರ್ಮನಿರೂಪಣವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದಶಮೋಽಧ್ಯಾಯಃ

---

॥ ಶೇಷ ಉವಾಚ ॥

**ಇತ್ಥಂ ಸಂಶೃಣ್ವತೋ ಧರ್ಮಾ್ ವಸನ್ತಃ ಸಮುಪಸ್ಥಿತಃ ।**
**ಯತ್ರ ಯಜ್ಞಕ್ರಿಯಾದೀನಾಂ ಪಾರಂಭಸ್ಸುಮಹಾತ್ಮನಾಂ ॥ ೧ ॥**

---

## ಹತ್ತನೆಯ ಅಧ್ಯಾಯವು

೧. ಶೇಷನು ಹೇಳಿದನು:—ಹೀಗೆಯೇ ಮಾತನಾಡುತ್ತಿರುವಲ್ಲಿ ಮಹಾತ್ಮರು ಯಜ್ಞಗಳನ್ನು ಪ್ರಾರಂಭಿಸುವ ವಸಂತಋತುವು ಪ್ರಾಪ್ತವಾಯಿತು.

ಯಜ್ಞಯಾಗಾದಿಗಳನ್ನು ವಸಂತಋತು, ಗ್ರೀಷ್ಮಋತು, ಶರದೃತುಗಳಲ್ಲಿ ಮಾಡಬೇಕೆಂದು ವಿಧಿಯಿರುವುದು.—ವಸಂತಾ ಬ್ರಾಹ್ಮಣೋಽಗ್ನಿಮಾದಧೀತ। ವಸಂತೋ ವೈ ಬ್ರಾಹ್ಮಣಸ್ಯರ್ತುಃ। ಸ್ವ ಏವೈನಮೃತಾವಾಧಾಯ। ಬ್ರಹ್ಮವರ್ಚಸೀ ಭವತಿ। ಗ್ರಿಷ್ಮೇ ರಾಜನ್ಯ ಆದಧೀತ। ಗ್ರೀಷ್ಮೋ ವೈ ರಾಜನ್ಯಸ್ಯರ್ತುಃ। ಸ್ವ ಏವೈನಮೃತಾವಾಧಾಯ। ಇಂದ್ರಿಯಾವೀ ಭವತಿ। ಶರದಿ ವೈಶ್ಯ ಆಧಧೀತ। ಶರದ್ವೈ ವೈಶ್ಯಸ್ಯರ್ತುಃ। ಸ್ವ ಏವೈನಮೃತಾವಾಧಾಯ। ಪಶುಮಾನ್ಭವತಿ॥ ಎಂದು ಶ್ರುತಿಯಿರುವುದು. (ತೈತ್ತಿರೀಯ ಬ್ರಾಹ್ಮಣ ಪ್ರ. ಕಾಂಡ). ಎಂದರೆ, ವಸಂತಋತುವಿನಲ್ಲಿ ಬ್ರಾಹ್ಮಣನೂ, ಗ್ರೀಷ್ಮಋತುವಿನಲ್ಲಿ ರಾಜನೂ, ಶರದೃತುವಿನಲ್ಲಿ ವೈಶ್ಯನೂ ಯಜ್ಞಗಳನ್ನು ಮಾಡಬೇಕು. ಹೀಗೆ ಮಾಡುವುದರಿಂದ ಬ್ರಾಹ್ಮಣನು ಬ್ರಹ್ಮವರ್ಚಸ್ವಿಯಾಗಿಯೂ, ರಾಜನು ಪರಾಕ್ರಮಶಾಲಿಯಾಗಿಯೂ, ವೈಶ್ಯನು ಐಶ್ವರ್ಯವಂತನಾಗಿಯೂ ಆಗುವನು.

ದೃಷ್ಟ್ವಾ ತಂ ಸಮಯಂ ಧೀಮಾನ್ ವಸಿಷ್ಠಃ ಕಲಶೋದ್ಭವಃ ।
ರಾಮಂ ಲೋಕಮಹಾರಾಜಂ ಪ್ರತ್ಯುವಾಚ ಯಥೋಚಿತಂ ॥ ೨ ॥

॥ ವಸಿಷ್ಠ ಉವಾಚ ॥

ರಾಮಚಂದ್ರ ಮಹಾಬಾಹೋ ಸಮಯಃ ಪರ್ಯಭೂತ್ತವ ।
ಹಯೋ ಯತ್ರ ಪ್ರಮುಚ್ಯೇತ ಯಜ್ಞಾರ್ಥಂ ಪರಿಪೂಜಿತಃ ॥ ೩ ॥

ಸಾಮಗ್ರೀ ಕ್ರಿಯತಾಂ ತತ್ರ ಆಹೂಯನ್ತಾಂ ದ್ವಿಜೋತ್ತಮಾಃ ।
ಕರೋತು ಪೂಜಾಂ ಭಗವಾನ್ ಬ್ರಾಹ್ಮಣಾನಾಂ ಯಥೋಚಿತಾಂ ॥ ೪ ॥

ದೀನಾಂಧಕೃಪಣಾನಾಂ ಚ ದಾನಂ ಸ್ವಾನ್ತಸಮುದ್ಗತಂ ।
ದದಾತು ವಿಧಿವತ್ತೇಷಾಂ ಪ್ರತಿಪೂಜ್ಯಾಧಿವಾಸನೈಃ ॥ ೫ ॥

ಭವಾನ್ ಕನಕಸತ್ಪತ್ನ್ಯಾ ದೀಕ್ಷಿತೋಽತ್ರ ವ್ರತಂ ಚರ ।
ಭೂಮಿಶಾಯೀ ಬ್ರಹ್ಮಚಾರೀ ವಸುಭೋಗವಿವರ್ಜಿತಃ ॥ ೬ ॥

---

೨. ಆ ಸಮಯವನ್ನು ತಿಳಿದು ವಸಿಷ್ಠಾಗಸ್ತ್ಯರು ರಾಮನನ್ನು ಕುರಿತು ಸಮಯಾನುಸಾರವಾಗಿ ಹೀಗೆಂದನು.

೩. ವಸಿಷ್ಠನು ಹೇಳಿದನು:—ರಾಮಚಂದ್ರನೇ, ಯಾಗವನ್ನು ಆರಂಭಿಸುವ ಸಮಯವು ಬಂದಿತು. ಈಗಲೇ ಯಾಗದ ಕುದುರೆಯನ್ನು ಪೂಜಿಸಿ ಬಿಡಬಹುದು. (ಬಿಡಬೇಕು).

೪. ಈಗ ಯಜ್ಞಕ್ಕಾಗಿ ಸಾಮಾನುಗಳನೆಲ್ಲಾ ಸಿದ್ಧಪಡಿಸಿಕೋ. ಬ್ರಾಹ್ಮಣರನ್ನು ಕರೆಸು. ಆ ಬ್ರಾಹ್ಮಣರಿಗೆ ಯೋಗ್ಯವಾದ ಪೂಜೆಗಳನ್ನು ಮಾಡಿ ಗೌರವಿಸು.

೫. ಬಡವರು, ಕುರುಡರು, ಮುಂತಾದ ಯಾಚಕರಿಗೆ ಯಥೇಚ್ಛವಾಗಿ ದಾನ ಮಾಡು. ಅವರಿಗೆಲ್ಲಾ ಬಟ್ಟೆ ಮೊದಲಾದುವುಗಳನ್ನು ದಾನಮಾಡು.

೬. ನೀನು ಸುವರ್ಣದ ಹೆಂಡತಿಯೊಡನೆ ದೀಕ್ಷಿತನಾಗಿ ವ್ರತವನ್ನು ಮಾಡು. ದೀಕ್ಷಾಕಾಲದಲ್ಲಿ ನೆಲದ ಮೇಲೆ ಮಲಗಬೇಕು. ಬ್ರಹ್ಮಚಾರಿಯಾಗಿರಬೇಕು. ಭೂಮಿಯ ತಿಂಡಿ ತೀರ್ಥ ಮೊದಲಾದ ಭೋಗಗಳು ಕೂಡದು.

**ಮೃಗಶೃಂಗಧರಃ ಕಟ್ಯಾಂ ಮೇಖಲಾಜಿನದಂಡಭೃತ್ ।**
**ಕರೋತು ಸರ್ವಸಂಭಾರಃ ಸರ್ವದ್ರವ್ಯಸಮನ್ವಿತಃ ॥ ೭ ॥**

**ಇತಿ ಶ್ರುತ್ವಾ ಮಹದ್ವಾಕ್ಯಂ ವಸಿಷ್ಠಸ್ಯ ಯಥಾರ್ಥಕಂ ।**
**ಉವಾಚ ಲಕ್ಷ್ಮಣಂ ಧೀಮಾನ್ನಾನಾರ್ಥಪರಿಬೃಂಹಿತಂ ॥ ೮ ॥**

**॥ ಶ್ರೀರಾಮ ಉವಾಚ ॥**

**ಶೃಣು ಲಕ್ಷ್ಮಣ ಮದ್ವಾಕ್ಯಂ ಶ್ರುತ್ವಾ ತತ್ಕುರು ಸತ್ವರಂ ।**
**ಹಯಮಾನಯ ಯತ್ನೇನ ವಾಜಿಮೇಧಕ್ರಿಯೋಚಿತಂ ॥ ೯ ॥**

---

ಯಜ್ಞಮಾಡುವ ಕಾಲದಲ್ಲಿ ಯಜಮಾನನ ಪತ್ನಿಯೂ ಮಾಡಬೇಕಾದ ಕೆಲವು ವಿಶೇಷಗಳಿರುವವು. ಆದುದರಿಂದ ಯಜಮಾನನಿಗೆ ಪತ್ನಿಯಿದ್ದೇ ಇರಬೇಕು. ಅಪತ್ನೀಕನಾಗಿ ಯಜ್ಞವನ್ನು ಮಾಡಲಾಗದು. ಪ್ರಕೃತಸಂದರ್ಭದಲ್ಲಿ ರಾಮನ ಪತ್ನಿಯಾದ ಸೀತೆಯು ಕಾಡಿನಲ್ಲಿ ವಾಲ್ಮೀಕಿಋಷಿಯ ಆಶ್ರಮದಲ್ಲಿದ್ದುದರಿಂದ ರಾಮನು ಅಪತ್ನೀಕನಾಗಿ ಯಾಗವನ್ನು ಮಾಡುವಂತಿರಲಿಲ್ಲ. ಆದುದರಿಂದ ಚಿನ್ನದಲ್ಲಿ ಸೀತೆಯ ವಿಗ್ರಹವನ್ನು ಮಾಡಿ ಅದರಿಂದ ಸಹಿತನಾಗಿ ಯಜ್ಞಕಾರ್ಯಗಳನ್ನು ನೆರವೇರಿಸಿದನೆಂದು ತಾತ್ಪರ್ಯವು.

೭. ಯಜ್ಞದೀಕ್ಷೆಯ ಕಾಲದಲ್ಲಿ ಜಿಂಕೆಯ ಕೊಂಬನ್ನೂ ಮೇಖಲೆಯನ್ನೂ ಕಟ್ಟಿಕೊಂಡು, ಚರ್ಮದಂಡಗಳನ್ನು ಧರಿಸಿರಬೇಕು. ಸಮಸ್ತ ದ್ರವ್ಯಗಳನ್ನೂ ಸೇರಿಸಿಕೊಂಡು ಪದಾರ್ಥಗಳನ್ನೆಲ್ಲಾ ಸಿದ್ಧಪಡಿಸಿಕೋ.

೮. ವಸಿಷ್ಠನ ಸರಿಯಾದ ಈ ಮಾತುಗಳನ್ನು ಕೇಳಿ ರಾಮನು ಲಕ್ಷ್ಮಣನನ್ನು ಕುರಿತು ನಾನಾರ್ಥಗಳಿಂದ ಕೂಡಿದ ಈ ಮಾತನ್ನು ಹೇಳಿದನು.

೯. ಶ್ರೀರಾಮನು ಹೇಳಿದನು:—ಎಲೈ ಲಕ್ಷ್ಮಣನೇ, ನನ್ನ ಮಾತನ್ನು ಕೇಳು. ನೀನು ಅದರಂತೆ ಜಾಗ್ರತೆಯಾಗಿ ನಡೆಸು. ಅಶ್ವಮೇಧಯಾಗಕ್ಕೆ ಯೋಗ್ಯವಾದ ಕುದುರೆಯನ್ನು ತೆಗೆದುಕೊಂಡು ಬಾ. ಎಂದನು.

॥ ಶೇಷ ಉವಾಚ ॥

ಶ್ರುತ್ವಾ ವಾಕ್ಯಂ ರಘುಪತೇಃ ಶತ್ರುಜಿಲ್ಲಕ್ಷ್ಮಣಸ್ತದಾ ।
ಸೇನಾಪತಿಮುವಾಚೇದಂ ವಚೋ ವಿವಿಧವರ್ಣನಂ ॥ ೧೦ ॥

॥ ಲಕ್ಷ್ಮಣ ಉವಾಚ ॥

ವೀರಾಕರ್ಣಯ ಮೇ ವಚಃ ಸುಮಧುರಂ ಶ್ರುತ್ವಾ ತ್ವರಾತಃ ಪುನಃ
ಕುರ್ವಂತು ಕ್ಷಿತಿಪಾಲಮೌಳಿಮುಕುಟಸ್ಫ್ರೇಂಖಾಂ ಹಿ ರಾಮಾಜ್ಞಯಾ ।
ಸೇನಾಂ ಕಾಲಬಲಪ್ರಘಾತನವಲಪ್ರೋದ್ಯತ್ಸಮರ್ಥಾಂಗಿನೀಂ
ಸಜ್ಜಾಂ ಸದ್ರಥಹಸ್ತಿಪತ್ತಿಹಯಿನೀಮಾರಾದ್ವಿಧೇಹ್ಯನ್ವಿತಃ ॥ ೧೧ ॥

ಸಜ್ಜೀಕೃತಾ ವಾಯುಜವಾಸ್ತುರಂಗಾ
ಸ್ತರಂಗಮಾಲಾಲಲಿತಾಂಘ್ರಿಪಾತಾಃ ।
ಸದಶ್ವಚಾರೈರ್ಬಹುಶಸ್ತ್ರಧಾರಿಭಿಃ
ಸಂರೋಹಿತಾ ವೈರಿಬಲಪ್ರಹಾರಿಭಿಃ ॥ ೧೨ ॥

---

೧೦. ಶೇಷನು ಹೇಳಿದನು:—ಶತ್ರುಸಂಹಾರಕನಾದ ಲಕ್ಷ್ಮಣನು ಶ್ರೀರಾಮನ ಆ ಮಾತನ್ನು ಕೇಳಿ ಸೇನಾಪತಿಯನ್ನು ಕುರಿತು ಇಂತೆಂದನು.

೧೧. ಲಕ್ಷ್ಮಣನು ಹೇಳಿದನು:—ಎಲೈ ಸೇನಾಪತಿಯೇ, ನನ್ನ ಮಾತನ್ನು ಕೇಳು. ರಾಜಾಧಿರಾಜರ ತಲೆಯ ಕಿರೀಟಗಳನ್ನು ಉರುಳಿಸಲು ಸಮರ್ಥವಾದ, ಯಮನ ಸೈನ್ಯವನ್ನು ಸಹ ನಾಶಮಾಡಲು ಶಕ್ತಿಯುಳ್ಳ ರಥ, ಆನೆ, ಕುದುರೆ ಕಾಲಾಳುಗಳಿಂದ ಸಹಿತವಾದ ಮಹಾಸೇನೆಯನ್ನು ಸಿದ್ಧಪಡಿಸು. ಜಾಗ್ರತೆಯಾಗಿ ರಾಮಾಜ್ಞೆಯಿಂದ ಇವುಗಳು ಮಾಡಲ್ಪಡಲಿ.

೧೨—೧೫. ಆ ಸೈನ್ಯದಲ್ಲಿ ಕುದುರೆಗಳು ನಡೆಯುತ್ತಿರುವಾಗ ಒಂದರ ಹಿಂದೆ ಮತ್ತೊಂದು ನುಗ್ಗಿ ಬರುತ್ತಿರುವ ಸಮುದ್ರದ ಅಲೆಗಳಂತೆ ಅವುಗಳ ಪಾದವಿಕ್ಷೇಪವಿರಬೇಕು ಶಸ್ತ್ರಗಳನ್ನು ಧರಿಸಿ ಆ ಕುದುರೆಗಳನ್ನೇರಿ ಸರಿಯಾಗಿ ನಡೆಸುವ ಸವಾರರಿರಬೇಕು. ಆನೆಗಳು ಬೆಟ್ಟದಂತೆ ದೊಡ್ಡವಾಗಿರಬೇಕು. ಅವುಗಳನ್ನೇರಿರುವ ಮಾವುತರು ತಮ್ಮ ಕೈಗಳಲ್ಲಿ ಪ್ರಾಸ, ಕುಂತ ಮೊದಲಾದ ಆಯುಧಗಳನ್ನು ಹಿಡಿದು ಮದೋದಕವನ್ನು ಸುರಿಸುತ್ತಿರುವ ಆ ಗಜಗಳನ್ನು ನಡೆಸುತ್ತಿರಬೇಕು. ಯುದ್ಧ

ಸಂಲಕ್ಷ್ಯಂತಾಂ ಹಸ್ತಿನಃ ಪರ್ವತಾಭಾ
ಆಧೋರಣ್ಯೈಃ ಪ್ರಾಸಕುಂತಾಗ್ರಹಸ್ತೈಃ ।
ಶೂರೈಃ ಸ್ರಂಸದ್ಭೂರಿದಾನೋಪಹಾರಾಃ
ಕ್ಷೀಬಾಣಾಸ್ತೇ ಸರ್ವಶಸ್ತ್ರಾಸ್ತ್ರಪೂರ್ಣಾಃ ॥ ೧೬ ॥

ವಿತತಬಹುಸಮೃದ್ಧಿಭ್ರಾಜಮಾನಾ ರಥಾ ಮೇ
ಪವನಜವನವೇಗೈರ್ವಾಜಿಭಿರ್ಯುಕ್ತದೇಹಾಃ ।
ವಿಬುಧರಿಪುವಿನಾಶಸ್ಮಾರಕೈರಾಯುಧಾಸ್ತ್ರೈ-
ರ್ಭೃತವಲಭಿವಿಭಾಗಾ ನೀಯತಾಂ ಸೂತವೃಂದೈಃ ॥ ೧೪ ॥

ಪತ್ತಯಃ ಶತಶೋ ಮಹ್ಯಮಾಯಾನ್ತ್ವತ್ರಾಸ್ತ್ರಪಾಣಯಃ ।
ಹಯಮೇಧಾರ್ಹವಾಹಸ್ಯ ರಕ್ಷಣೇ ವಿತತೋದ್ಯಮಾಃ ॥ ೧೫ ॥

ಇತ್ಯಾಕರ್ಣ್ಯ ವಚಸ್ತಸ್ಯ ಲಕ್ಷ್ಮಣಸ್ಯ ಮಹಾತ್ಮನಃ ।
ಸೇನಾನೀಃ ಕಾಲಜಿನ್ನಾಮಾ ಕಾರಯಾಮಾಸ ಸಜ್ಜಿತಂ ॥ ೧೬ ॥

---

ಮಾಡಲು ಮಾನುತರು ದಿವ್ಯಾಯುಧಗಳನ್ನು ಧರಿಸಿರಬೇಕು. ಇಂತಹ ದೊಡ್ಡ ದೊಡ್ಡ ಆನೆಗಳು ಆ ಸೈನ್ಯದಲ್ಲಿರಬೇಕು. ರಥಗಳಿಗೆ ವಾಯುವೇಗಕ್ಕೆ ಸಮನಾದ ವೇಗವುಳ್ಳ ಕುದುರೆಗಳನ್ನು ಹೂಡಿರಬೇಕು. ಹಿಂದೆ ಲಂಕಾಯುದ್ಧದಲ್ಲಿ ರಾವಣನೊಡನೆ ಯುದ್ಧ ವೆಸಗಿದಾಗ ಉಪಯೋಗಿಸಿದ ಶಸ್ತ್ರಾಸ್ತ್ರಗಳಂತೆ ಇರುವ ಉತ್ತಮ ಆಯುಧಗಳನ್ನು ಆ ರಥಗಳಲ್ಲಿ ಸಜ್ಜುಗೊಳಿಸಿ ಇಟ್ಟಿರಬೇಕು. ರಥಗಳನ್ನು ನಡೆಸುವುದರಲ್ಲಿ ಕುಶಲ ರಾದ ಸೂತರು ಆ ರಥಗಳನ್ನು ನಡೆಸಬೇಕು. ಮತ್ತು ಕಾಲಾಳುಗಳು ಬಗೆಬಗೆ ಯಾದ ತಮ್ಮ ತಮ್ಮ ಆಯುಧಗಳನ್ನು ಹಿಡಿದು ಆ ಸೈನ್ಯವನ್ನನುಸರಿಸಿ ಬರಬೇಕು. ಇಂತಹ ಸೈನ್ಯವನ್ನು ತೆಗೆದುಕೊಂಡು ಅಶ್ವಮೇಧಯಾಗದ ಕುದುರೆಯನ್ನು ರಕ್ಷಿಸುತ್ತಾ ನನ್ನ ಜತೆಯಲ್ಲಿ ಬರಲಿ ಎಂದು ಆಜ್ಞಾಪಿಸಿದನು.

೧೬. ಲಕ್ಷ್ಮಣನು ಈ ರೀತಿಯಾಗಿ ಹೇಳಿದ ಮಾತನ್ನು ಕೇಳಿ ಕಾಲಜಿತ್ತೆಂಬ ಸೇನಾಪತಿಯು ಅದರಂತೆ ಎಲ್ಲವನ್ನೂ ಸಿದ್ಧಪಡಿಸಿದನು.

ದಶಧ್ರುವಕಮುಂಡಿತೋ ಲಘುಸುರೋಮಶೋಭಾನ್ವಿತೋ
ವಿವಿಕ್ತಗಲಶುಕ್ತಿಭೃದ್ವಿತತಕಂಠಕೋಶೇ ಮಣೌ ।
ಮುಖೇ ವಿಶದಕಾಂತಿಧೃಕ್ಸಿತಿಸುಹ್ರಸ್ವಕರ್ಣದ್ವಯೋ
ವ್ಯರಾಜತ ತದಾ ಹಯೋ ಧೃತನರಾಗ್ರ್ಯರಶ್ಮಿಚ್ಛಟಃ ॥ ೧೭ ॥

ಕಮಲಾಶೋಭಿತಮುಖಃ ಸ್ಫುರದ್ರತ್ನವಿಶೋಭಿತಃ ।
ಮುಕ್ತಾಫಲಾನಾಂ ಮಾಲಾಭಿಃ ಶೋಭಿತೋ ನಿರ್ಯಯೌ ಹಯಃ ॥ ೧೮ ॥

ಶ್ವೇತಾತಪತ್ರರಚಿತಃ ಸಿತಚಾಮರಶೋಭಿತಃ ।
ಬಹುಶೋಭಾಪರೀತಾಂಗೋ ನಿರ್ಯಯೌ ಹರಿರಾಟ್ ತತಃ ॥ ೧೯ ॥

ಅಗ್ರತೋ ಮಧ್ಯತಶ್ಚೈಕೇ ಪೃಷ್ಠತಸ್ಸೈನಿಕಾಸ್ತಥಾ ।
ದೇವಾ ಹರಿಂ ಯಥಾ ಪೂರ್ವಂ ಸೇವಂತೇ ಸೇವನೋಚಿತಂ ॥ ೨೦ ॥

ಅಥ ಸೈನ್ಯಂ ಸಮಾಹೂಯ ಸರ್ವಮಾಜ್ಞಾಪಯತ್ತದಾ ।
ಹಸ್ತ್ಯಶ್ವರಥಪತ್ತೀನಾಂ ವೃಂದೈಸ್ಸುಬಹುಸಂಕುಲಂ ॥ ೨೧ ॥

---

೧೭—೧೯. ಸಂಚಾರಕ್ಕಾಗಿ ಬಿಟ್ಟ ಆ ಯಜ್ಞಾಶ್ವವು ಹೀಗಿದ್ದಿತು. ಅಶ್ವ ಶಾಸ್ತ್ರ ಬಲ್ಲವರು ಹೇಳುವಂತೆ ಆ ಕುದುರೆಯ ನಾನಾಂಗಗಳಲ್ಲಿ ಹತ್ತು ಉತ್ತಮವಾದ ಸುಳಿಗಳಿದ್ದವು. ಅದರ ರೋಮಗಳು ನಯವಾಗಿಯೂ ಮೃದುವಾಗಿಯೂ ಇದ್ದವು. ಕತ್ತು ನೀಳವಾಗಿ ಮನೋಹರವಾದ ರೋಮಪಂಕ್ತಿಯಿಂದಲೂ, ಕಂಠಾಭರಣವೆಂಬ ಸುಳಿಯಿಂದಲೂ ಕೂಡಿದ್ದಿತು. ಅದರ ಕಿವಿಗಳು ಚಿಕ್ಕವಾಗಿದ್ದವು. ಕತ್ತಿನ ಮೇಲೆ ನಿಬಿಡವಾದ ಕೇಸರಗಳು ಒಪ್ಪುತ್ತಿದ್ದವು. ಮುಖದಲ್ಲಿ ಕಾಂತಿಯು ಬೆಳಗುತ್ತಿತ್ತು. ಹಲ್ಲುಗಳಿಂದ ದವಡನ್ನು ಕಚ್ಚುತ್ತಿತ್ತು. ಆ ಕುದುರೆಗೆ ಮುತ್ತಿನ ಹಾರಗಳನ್ನು ಹಾಕಿ ಅಲಂಕರಿಸಿದ್ದರು. ರಾಜಚಿಹ್ನೆಗಳಾದ ಶ್ವೇತಚ್ಛತ್ರಿಯನ್ನು ಹಿಡಿದು ಚಾಮರಗಳಿಂದ ಬೀಸುತ್ತಿದ್ದರು. ಇಂತಹ ದಿವ್ಯವಾದ ಯಜ್ಞಾಶ್ವವು ರಾಜೋಪಚಾರಗಳನ್ನು ಕೈಗೊಳ್ಳುತ್ತಾ ಹೊರಟಿತು.

೨೦. ಆ ಅಶ್ವದ ಮುಂದೆ ಮಧ್ಯದಲ್ಲಿ ಮೂರು ಭಾಗವಾಗಿ, ವಿಷ್ಣುವನ್ನು ಸೇವಿಸುವಂತೆ ಸೈನಿಕರು ಅದನ್ನು ಸೇವಿಸುತ್ತಾ ಹೊರಟರು.

೨೧. ಬಳಿಕ ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿದ ಸೈನ್ಯವನ್ನು ಕರೆದು ಇಂತು ಅಪ್ಪಣೆಮಾಡಿದನು.

**ತತಸ್ತತಃ ಸಮೇತಾನಾಂ ಸೈನ್ಯಾನಾಂ ಶ್ರೂಯತೇ ಧ್ವನಿಃ ।**
**ತತೋ ದುಂದುಭಿನಾದೋಽಭೂತ್ತಸ್ಮಿನ್ ಪುರವರೇ ತದಾ ॥ ೨೨ ॥**

**ತನ್ನಿನಾದೇನ ಶೂರಾಣಾಂ ಪ್ರಿಯೇಣ ಮಹತಾ ತದಾ ।**
**ಕಂಪಂತೇ ಗಿರಯಸ್ತುಂಗಾಃ ಪ್ರಾಸಾದಾ ವಿಚಲಂತಿ ಚ ॥ ೨೩ ॥**

**ಹೇಷಾರವೋ ಮಹಾನಾಸೀದ್ವಾಜಿನಾಂ ಮುಷ್ಯತಾಂ ನೃಪ ।**
**ರಥಾಂಗವ್ರಾತಸಂಘುಷ್ಟಾ ಧರಾ ಸಂಚಲತೀವ ಸಾ ॥ ೨೪ ॥**

**ಚಲಿತೈರ್ಗಜಯೂಥೈಶ್ಚ ಪೃಥ್ವೀ ರುದ್ಧಾ ಸಮಸ್ತತಃ ।**
**ರಜಸ್ತು ಪ್ರಚಲತ್ತತ್ರ ಜನಾಸ್ತದ್ಧರ್ಾನಮಾದಧಾತ್ ॥ ೨೫ ॥**

**ನಿರ್ಜಗಾಮ ಮಹಾಸೈನ್ಯಂ ಛತ್ರೈಃ ಸಂಛಾದ್ಯ ಭಾಸ್ಕರಂ ।**
**ಸೇನಾನ್ಯಾ ಕಾಲಜಿನ್ನಾಮ್ನಾ ಪ್ರೇರಿತಂ ಜನಸಂಕುಲಂ ॥ ೨೬ ॥**

**ಗರ್ಜನ್ತಸ್ತತ್ರ ವೀರಾಗ್ರ್ಯಾಃ ಕುರ್ವಂತೋ ರಣಸಂಭ್ರಮಂ ।**
**ರಘುನಾಥಸ್ಯ ಯಾಗಾಯ ಸಜ್ಜಾಸ್ತೇ ಪ್ರಯಯುರ್ಮುದಾ ॥ ೨೭ ॥**

---

೨೨. ಅಲ್ಲಲ್ಲಿ ಗುಂಪು ಸೇರಿದ ಸೈನ್ಯದ ಧ್ವನಿಯು ಕೇಳಿಸುತ್ತಿತ್ತು. ಅನಂತರ ಆ ಪಟ್ಟಣದಲ್ಲಿ ರಮಡೋಲಿನ ಧ್ವನಿಯಾಯಿತು,

೨೩. ಶೂರರಿಗೆ ಪ್ರಿಯವಾದ ಆ ಧ್ವನಿಯಿಂದ ದೊಡ್ಡದೊಡ್ಡ ಪರ್ವತಗಳು ಕೂಡ ಅಲುಗಿದವು. ದೊಡ್ಡದೊಡ್ಡ ಮನೆಗಳೂ ಅಲ್ಲಾಡಿದವು.

೨೪. ವಿಚಿತ್ರನಮನವುಳ್ಳ ಕುದುರೆಗಳ ಹೇಷಾಧ್ವನಿಯೂ ಬಹುವಾಯಿತು. ರಥದ ಚಕ್ರಗಳ ಗುಂಪಿನಿಂದ ಭೂಮಿಯು ಅದರುವಂತಿತ್ತು.

೨೫. ಹೋಗುತ್ತಿರುವ ಆನೆಗಳ ಗುಂಪಿನಿಂದ ಭೂಮಿಯು ಮರೆಯಾಯಿತು. ಅದರಿಂದ ಹೊರಟ ಧೂಳು ಜನಗಳನ್ನು ಮರೆಮಾಡಿತು.

೨೬. ಈ ರೀತಿ ಕಾಲಜಿತ್ತೆಂಬ ಸೇನಾಪತಿಯ ಅಧೀನದಲ್ಲಿರುವ ಸೈನ್ಯವು ಸೂರ್ಯನನ್ನು ಮರೆಮಾಡಿ ಹೊರಟಿತು.

೨೭. ವೀರರು ಅಲ್ಲಿ ಯುದ್ಧದ ಸಂಭ್ರಮದಿಂದ ಗರ್ಜಿಸುತ್ತಾ, ರಾಮನ ಯಾಗವನ್ನು ಮಾಡಿಸಲು ಸಿದ್ಧರಾಗಿ ಹೊರಟರು.

ಮೃಗಮದಮುಖ್ಯಮಂಗೇಷ್ವಂಗರಾಗಂ ದಧಾನಾಃ
ಕುಸುಮವಿಮಲಮಾಲಾಶೋಭಿತಶ್ರೋತ್ರಮಾಂಗಾಃ ।
ಮುಕುಟಕಟಿಕಭೂಷಾ ಭೂಷಿತಾಂಗಾಃ ಸಮಸ್ತಾ
ಯಯುರವನಿಪತೇಸ್ತೇ ತ್ವಾಜ್ಞಯಾ ಚಾಪಿ ಸರ್ವೇ ॥ ೨೮ ॥

ಇತ್ಯೇವಂ ತೇ ಮಹಾರಾಜಂ ಯಯುಃ ಸೇನಾಚರಾಸ್ತ್ವರಾಃ ।
ಧನುರ್ಧರಾಃ ಪಾಶಧರಾಃ ಖಡ್ಗಧರಾಃ ಸ್ಫುಟಕ್ರಮಾಃ ॥ ೨೯ ॥

ಏವಂ ಶನೈಶ್ಶನೈಃ ಪ್ರಾಪ್ತೋ ಮಂಟಪಂ ಯಾಗಚಿಹ್ನಿತಂ ।
ಹಯಃ ಖುರಕ್ಷತತಳಾಂ ಭೂಮಿಂ ಕುರ್ವನ್ನಭಃ ಪ್ಲವನ್ ॥ ೩೦ ॥

ರಾಮೋ ದೃಷ್ಟ್ವಾ ಹರಿಂ ಪ್ರಾಪ್ತಂ ಬಹುಸಂತುಷ್ಟಮಾನಸಃ ।
ವಸಿಷ್ಠಂ ಪ್ರೇರಯಾಮಾಸ ಕ್ರಿಯಾಕರ್ತವ್ಯತಾಂ ಪ್ರತಿ ॥ ೩೧ ॥

ವಸಿಷ್ಠೋ ರಾಮಮಾಹೂಯ ಸ್ವರ್ಣಪತ್ನೀಸಮನ್ವಿತಂ ।
ಪ್ರಯೋಗಂ ಕಾರಯಾಮಾಸ ಬ್ರಹ್ಮಹತ್ಯಾಪನೋದನಂ ॥ ೩೨ ॥

---

೨೮. ಅವರೆಲ್ಲರೂ ಮೈಗೆ ಕಸ್ತೂರಿಯನ್ನು ಬಳಿದುಕೊಂಡು, ತಲೆಗೆ ಹೂ ಮುಡಿದುಕೊಂಡು, ಕಿರೀಟ ಮೊದಲಾದ ಆಭರಣಗಳನ್ನು ಹಾಕಿಕೊಂಡು ಹೊರಟರು.

೨೯. ಈ ರೀತಿಯಾದ ಸೇನೆಯವರು ಧನುಸ್ಸು, ಪಾಶ, ಖಡ್ಗಗಳನ್ನು ಹಿಡಿದು, ಕಾಲನ್ನು ಸರಿಯಾಗಿ ಇಡುತ್ತ ರಾಜನನ್ನು ಅನುಸರಿಸಿದರು.

೩೦. ಆ ಕುದುರೆಯು ಭೂಮಿಯನ್ನು ತನ್ನ ಗೊರಸುಗಳಿಂದ ಹಳ್ಳಮಾಡುತ್ತ ಮೇಲಕ್ಕೆ ಹಾರುತ್ತ ಮೆಲ್ಲಮೆಲ್ಲಗೆ ಯಾಗಭೂಮಿಯ ಮಂಟಪಕ್ಕೆ ಬಂದಿತು.

೩೧. ರಾಮನು ಆ ಕುದುರೆ ಬಂದುದನ್ನು ನೋಡಿ ಸಂತೋಷಗೊಂಡು ವಸಿಷ್ಠನನ್ನು ಕುರಿತು ಮುಂದಿನ ಕರ್ತವ್ಯವನ್ನು ಮಾಡೆಂದನು.

೩೨. ವಸಿಷ್ಠನು ಸ್ವರ್ಣಪತ್ನಿಯೊಡನಿರುವ ರಾಮನನ್ನು ಕರೆದು, ಬ್ರಹ್ಮಹತ್ಯಾನಾಶಕವಾದ ಪ್ರಯೋಗವನ್ನು ಮಾಡಿಸಿದನು.

ಬ್ರಹ್ಮಚರ್ಯವ್ರತಧರೋ ಮೃಗಶೃಂಗಪರಿಗ್ರಹಃ ।
ತತ್ಕರ್ಮ ಕಾರಯಾಮಾಸ ರಾಮಃ ಪರಸ್ಪರಂಜಯಃ ॥ ೩೩ ॥

ಪ್ರಾರೇಭೇ ಯಾಗಕರ್ಮಾರ್ಥಂ ಕುಂಡಂ ಮಂಟಪಸಮ್ಮಿತಂ ।
ತತ್ರಾಚಾರ್ಯೋಽಭವದ್ಧೀಮಾನ್ ವೇದಶಾಸ್ತ್ರವಿಚಾರವಿತ್ ॥ ೩೪ ॥

ವಸಿಷ್ಠೋ ರಘುನಾಥಸ್ಯ ಕುಲಪೂರ್ವಗುರುರ್ಮುನಿಃ ।
ಬ್ರಹ್ಮಂಸ್ತತ್ರಾಚರದ್ಬ್ರಾಹ್ಮ್ಯಂ ಕರ್ಮಾಗಸ್ತ್ಯಸ್ತಪೋನಿಧಿಃ ॥ ೩೫ ॥

ವಾಲ್ಮೀಕಿರ್ಮುನಿರಧ್ವರ್ಯುರ್ಮುನಿಃ ಕಣ್ವಸ್ತು ದ್ವಾರಪಃ ।
ಅಷ್ಟೌ ದ್ವಾರಾಣಿ ತತ್ರಾಸನ್ ಸುತೋರಣಶುಭಾನಿ ವೈ ॥ ೩೬ ॥

ದ್ವಾರಿ ದ್ವಾರಿ ದ್ವಯಂ ವಿಪ್ರ ಬ್ರಾಹ್ಮಣಸ್ಯಾಧಿಮಂತ್ರವಿತ್ ।
ಪೂರ್ವದ್ವಾರೇ ಮುನಿಶ್ರೇಷ್ಠೌ ದೇವಲಾಸಿತಸಂಜ್ಞಿತೌ ॥ ೩೭ ॥

ದಕ್ಷಿಣದ್ವಾರಿ ಭೂಮಾನೌ ಕಶ್ಯಪಾತ್ರೀ ತಪೋನಿಧೀ ।
ಪಶ್ಚಿಮದ್ವಾರಿ ಋಷಭೌ ಜಾತೂಕರ್ಣ್ಯೋಽಥ ಜಾಬಲಿಃ ॥ ೩೮ ॥

---

೩೩. ಬ್ರಹ್ಮಚಾರಿಯಾಗಿ, ಯಜ್ಞದೀಕ್ಷೆಗಾಗಿ ಜಿಂಕೆಯ ಕೋಂಬನ್ನು ಧರಿಸಿ ಬಂದ ರಾಮನ ಕೈಯಲ್ಲಿ ಆ ಕೆಲಸವನ್ನು ಮಾಡಿಸಿದನು.

೩೪-೩೫. ಹೀಗೆ ರಾಮನು ಮಂಟಪದಲ್ಲಿರುವ ಕುಂಡದಲ್ಲಿ ಯಾಗವನ್ನು ಪ್ರಕ್ರಮಿಸಿದನು. ವೇದಶಾಸ್ತ್ರಗಳನ್ನು ಬಲ್ಲ ವಸಿಷ್ಠನು ಆಚಾರ್ಯನಾದನು. ಅಗಸ್ತ್ಯನು ಬ್ರಹ್ಮತ್ವವನ್ನು ಮಾಡಿದನು.

೩೬. ವಾಲ್ಮೀಕಿಋಷಿಯು ಅಧ್ವರ್ಯುವಾದನು. ಕಣ್ವನು ದ್ವಾರಪಾಲಕನಾದನು. ಆ ಯಾಗಮಂಟಪದಲ್ಲಿ ತೋರಣಗಳಿಂದ ಕೂಡಿ ಎಂಟು ಬಾಗಿಲುಗಳಿದ್ದುವು. ಒಂದೊಂದು ಬಾಗಿಲಲ್ಲೂ ಇಬ್ಬಿಬ್ಬರು ಅಧಿಮಂತ್ರಗಳಾದ ಬ್ರಾಹ್ಮಣರಿದ್ದರು.

೩೭-೩೮. ಪೂರ್ವಬಾಗಿಲಿನಲ್ಲಿ ದೇವಲ, ಅಸಿತರೂ, ದಕ್ಷಿಣದ್ವಾರದಲ್ಲಿ ಕಶ್ಯಪ, ಅತ್ರಿಗಳೂ, ಪಶ್ಚಿಮದ್ವಾರದಲ್ಲಿ ಜಾತೂಕರ್ಣಿ, ಜಾಬಾಲಿಗಳೂ, ಉತ್ತರದ್ವಾರದಲ್ಲಿ ದ್ವಿತೀಯ, ಏಕತರೂ ರಕ್ಷಣೆಗೆ ನಿಂತರು.

ಉತ್ತರದ್ವಾರಿ ಮುನೀ ದ್ವೌ ಸ್ಥಿತೀಕೈಕತತಾಪಸೌ ।
ಏವಂ ದ್ವಾರವಿಧಿಂ ಕೃತ್ವಾ ವಸಿಷ್ಠಃ ಕುಂಭಸಂಭವಃ ।
ಹಯವರ್ಯಸ್ಯ ಸತ್ಪೂಜಾಂ ಕರ್ಮ ಮಾರಭತ ದ್ವಿಜ ॥ ೩೯ ॥

ಸುವಾಸಿನ್ಯಃ ಸ್ತ್ರಿಯಸ್ತತ್ರ ವಾಸೋಲಂಕಾರಶೋಭಿತಾಃ ।
ಹರಿದ್ರಾಕ್ಷತಗಂಧಾದ್ಯೈಃ ಪೂಜಯಾಮಾಸುರರ್ಚಿತಂ ॥ ೪೦ ॥

ನೀರಾಜನಂ ತತಃ ಕೃತ್ವಾ ಧೂಪಯಿತ್ವಾಗರೂಕ್ಷಣೈಃ ।
ವರ್ಧಾಪನಂ ಜನಾ ವೇಶ್ಯಾಶ್ಚಕ್ರುಸ್ತಾ ಬಾಡಬಾಜ್ಞಯಾ ॥ ೪೧ ॥

ಏವಂ ಸಂಪೂಜ್ಯ ವಿಮಲೇ ಫಾಲೇ ಚಂದನಚರ್ಚಿತೇ ।
ಕುಂಕುಮಾದಿಕಗಂಧಾಢ್ಯೇ ಸರ್ವಶೋಭಸಮನ್ವಿತೇ ॥ ೪೨ ॥

ಬಬಂಧ ಭಾಸ್ವರಂ ಪತ್ರಂ ತಪ್ತಹಾಟಕನಿರ್ಮಿತಂ ।
ತತ್ರಾಲಿಖದ್ದಾಶರಥೇಃ ಪ್ರತಾಪಬಲಮೂರ್ಜಿತಂ ॥ ೪೩ ॥

---

೩೯. ವಸಿಷ್ಠನೂ, ಅಗಸ್ತ್ಯನೂ, ಈ ರೀತಿ ದ್ವಾರವಿಧಿಯನ್ನು ಮಾಡಿಕೊಂಡು ಕುದುರೆಯ ಪೂಜೆಗೆ ಪ್ರಾರಂಭಿಸಿದರು.

೪೦. ಉಡಿಗೆತೊಡಿಗೆಗಳಿಂದ ಅಲಂಕೃತರಾದ ಮುತ್ತೈದೆಯರು ಅರಶಿನ ಕುಂಕುಮ ಅಕ್ಷತೆ ಮುಂತಾದುವುಗಳಿಂದ ಆ ಕುದುರೆಯನ್ನು ಪೂಜಿಸಿದರು.

೪೧. ಬ್ರಾಹ್ಮಣರ ಅಪ್ಪಣೆಯಿಂದ ವೇಶ್ಯೆಯರು ಧೂಪದೀಪಗಳನ್ನು ಹಾಕಿ ಆರತಿಯನ್ನು ಮಾಡಿ ಹಾಡಿನಿಂದ ಶುಭವನ್ನು ಕೋರಿದರು.

೪೨. ಈ ರೀತಿ ಕುದುರೆಗೆ ಪೂಜೆಮಾಡಿ ಕುಂಕುಮವನ್ನು ಹಚ್ಚಿರುವ ಅದರ ಹಣೆಯಲ್ಲಿ ಗಂಧಾದಿಗಳನ್ನು ಪೂಸಿ, ಕುಂಕುಮವನ್ನು ಹಚ್ಚಿರುವ ಅದರ ಹಣೆಯಲ್ಲಿ ಚಿನ್ನದ ತಗಡನ್ನು ಕಟ್ಟಿದರು.

೪೩. ಅದರಲ್ಲಿ ಶ್ರೀರಾಮನ ಬಲವನ್ನೂ ಯಶಸ್ಸನ್ನೂ ಬಿರುದುಗಳನ್ನೂ ಮುಂದೆ ಹೇಳುವ ರೀತಿಯಲ್ಲಿ ಬರೆದಿದ್ದರು.

**ಸೂರ್ಯವಂಶಧ್ವಜೋ ಧನ್ವೀ ಧನುರ್ದೀಕ್ಷಾಗುರೋರ್ಗುರುಃ ।**
**ಯಂ ದೇವಾಃ ಸಾಸುರಾಸ್ಸರ್ವೇ ನಮಂತಿ ಮಣಿಮೌಳಿಭಿಃ ॥ ೪೪ ॥**

**ತಸ್ಯಾತ್ಮಜೋ ವೀರಬಲದರ್ಪಹಾರೀ ರಘೂದ್ವಹಃ ।**
**ರಾಮಚಂದ್ರೋ ಮಹಾಭಾಗಃ ಸರ್ವಶೂರಶಿರೋಮಣಿಃ ॥ ೪೫ ॥**

**ತನ್ಮಾತಾ ಕೋಸಲನೃಪಪತ್ನೀಗರ್ಭಸಮುದ್ಭವಾ ।**
**ತಸ್ಯಾಃ ಕುಕ್ಷಿಭವಂ ರತ್ನಂ ರಾಮಃ ಶತ್ರುಕ್ಷಯಂಕರಃ ॥ ೪೬ ॥**

**ಕರೋತಿ ಹಯಮೇಧಂ ವೈ ಬ್ರಾಹ್ಮಣೇನ ಸುಶಿಕ್ಷಿತಃ ।**
**ರಾವಣಾಭಿದವಿಪ್ರೇಂದ್ರವಧಪಾಪಾಪನುತ್ತಯೇ ॥ ೪೭ ॥**

**ಮೋಚಿತಸ್ತೇನ ವಾಹಾನಾಂ ಮುಖ್ಯೋಽಸೌ ವಾಜಿನಾಂ ವರಃ ।**
**ಮಹಾಬಲಪರೀವಾರಪರಿಖಾಭಿಃ ಸುರಕ್ಷಿತಃ ॥ ೪೮ ॥**

**ತದ್ರಕ್ಷಕೋಽಸ್ತಿ ತದ್ಭ್ರಾತಾ ಶತ್ರುಘ್ನೋ ಲವಣಾನ್ತಕಃ ।**
**ಹಸ್ತ್ಯಶ್ವರಥಪಾದಾತಸಂಘಸೇನಾಸಮನ್ವಿತಃ ॥ ೪೯ ॥**

---

೪೪. ಧನುಸ್ಸನ್ನು ಹಿಡಿದಿರುವವರಲ್ಲಿ ಅಗ್ರಗಣ್ಯನಾದ, ಸೂರ್ಯವಂಶಜನಾದ. ದಶರಥನು ದೇವಾಸುರರಿಂದ ನಮಸ್ಕೃತನಾಗಿದ್ದನು.

೪೫. ಶತ್ರುವೀರಬಲವನ್ನೂ ದರ್ಪವನ್ನೂ ನಾಶಮಾಡುವ ಅವನ ಮಗನಾದ ರಾಮಚಂದ್ರನು ಸರ್ವಶೂರರಿಗೂ ಅಲಂಕಾರಪ್ರಾಯನಾಗಿರುವನು.

೪೬. ಅವನ ತಾಯಿಯು ಕೋಶಲದೇಶದ ರಾಜನ ಮಗಳು. ಅವಳ ಉದರದಲ್ಲಿ ಶತ್ರುಕ್ಷಯಕರನಾದ, ಪುತ್ರರತ್ನನಾದ, ರಾಮನು ಉದಯಿಸಿದನು.

೪೭–೪೮. ಆ ಶ್ರೀರಾಮಚಂದ್ರನು ರಾವಣನೆಂಬ ಬ್ರಾಹ್ಮಣನನ್ನು ಕೊಂದ ಬ್ರಹ್ಮಹತ್ಯಾ ನಾಶಕ್ಕೋಸ್ಕರ ಬ್ರಾಹ್ಮಣರಿಂದ ಉಪದೇಶಿಸಲ್ಪಟ್ಟು, ಅಶ್ವಮೇಧಯಾಗ. ವನ್ನು ಮಾಡುತ್ತಾನೆ. ಅವನು ಬಲಿಷ್ಠವಾದ ಸೇನೆಯೆಂಬ ಕೋಟೆಯಿಂದ ರಕ್ಷಿತ ವಾದ ಈ ಉತ್ತಮಾಶ್ವವನ್ನು ಯಜ್ಞಾರ್ಥವಾಗಿ ಬಿಟ್ಟಿದ್ದಾನೆ.

೪೯. ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿದ ಲವಣಾಂತಕನಾದ, ಆ ಶ್ರೀರಾಮಚಂದ್ರನ ತಮ್ಮನಾದ ಶತ್ರುಘ್ನನೆಂಬುವನು ಈ ಕುದುರೆಯ ರಕ್ಷಕನಾಗಿದ್ದಾನೆ.

ಯಸ್ಯ ರಾಜ್ಞ ಇತಿ ಶ್ರೇಷ್ಠೋ ಮಾನಸಸ್ಸ್ಯಾತ್ಸ್ವಬಲೋನ್ಮದಾತ್ ।
ಶೂರಾ ವಯಂ ಧನುರ್ಧಾರಿಶ್ರೇಷ್ಠಾ ವಯಮಿಹೋತ್ಕಟಾಃ ॥ ೫೦ ॥

ತೇ ಗೃಹ್ಣನ್ತು ಬಲಾದ್ವಾಹಂ ರತ್ನಮಾಲಾವಿಭೂಷಿತಂ ।
ಮನೋವೇಗಂ ಕಾಮಜವಂ ಸರ್ವಗತ್ಯಾಭಿಭಾಸ್ವರಂ ॥ ೫೧ ॥

ತತೋ ಮೋಚಯಿತಾ ಭ್ರಾತಾ ಶತ್ರುಘ್ನೋ ಲೀಲಯಾ ಹಠಾತ್ ।
ಶರಾಸನವಿನಿರ್ಮುಕ್ತವತ್ಸದನ್ತೈಸ್ತು ತತ್ಪರಃ ॥ ೫೨ ॥

ಇತ್ಯೇವಮಾದಿ ಚ ವಿಲಿಖ್ಯ ಮಹಾಮುನೀಂದ್ರಃ
ಶ್ರೀ ರಾಮಚಂದ್ರಭುಜವೀರ್ಯಲಸತ್ಪ್ರತಾಪಂ ।
ಶೋಭಾನಿಧಾನಮನಿಲೋತ್ತಮವೀರ್ಯವೇಗಂ
ಪಾತಾಳಭೂತಳವಿಶೇಷಗತಿಂ ಮುಮೋಚ ॥ ೫೩ ॥

ಶತ್ರುಘ್ನಮಾದಿದೇಶಾಥ ರಾಮಃ ಶಸ್ತ್ರಭೃತಾಂ ವರಃ ।
ಯಾಹಿ ವಾಹಸ್ಯ ರಕ್ಷಾರ್ಥಂ ಪೃಷ್ಠತಃ ಸ್ವೇಚ್ಛಯಾ ಗತೇಃ ॥ ೫೪ ॥

---

೫೦-೫೧. ರಾಜನಾದ ಆ ರಾಮನಿಗಿಂತಲೂ ನಾನು ಶ್ರೇಷ್ಠನೆಂಬ ಹೆಮ್ಮೆಯೂ ನಾವು ಶೂರರು, ಧನುರ್ಧಾರಿಗಳು, ಅವನಿಗಿಂತ ಉತ್ಕೃಷ್ಟರು ಎಂಬ ಭಾವನೆ ಯಾವ ಶೂರನಿಗೆ ಇದೆಯೋ ಅವನು ಈ ರತ್ನಹಾರವುಳ್ಳ, ವಾಯುವೇಗವುಳ್ಳ ಕುದುರೆಯನ್ನು ಹಿಡಿಯಬಹುದು.

೫೨. ಮೊನೆಯೂ ಹರಿತವೂ ಆದ ಬಾಣಗಳಿಂದ ಅಶ್ವರಕ್ಷಕನಾದ ಆ ಶತ್ರುಘ್ನನು ಬಲದಿಂದಲೂ, ಹಠದಿಂದಲೂ, ಆ ಕುದುರೆಯನ್ನು ಬಿಡಿಸಿಕೊಂಡು ಬರುತ್ತಾನೆ.

೫೩. ಈ ರೀತಿಯಾಗಿ ಆ ಮುನಿಯು ರಾಮಚಂದ್ರನ ಭುಜಪ್ರತಾಪಗಳನ್ನು ಬರೆದು ಕಾಂತಿಮತ್ತಾದ, ಮಹಾವೇಗವುಳ್ಳ, ಸ್ವರ್ಗಮರ್ತ್ಯ ಪಾತಾಳಗಳಲ್ಲಿ ಗಮನವುಳ್ಳ ಆ ಕುದುರೆಯನ್ನು ಬಿಟ್ಟನು.

೫೪-೫೫. ಆ ಮೇಲೆ ಶೂರನಾದ ರಾಮನು ಶತ್ರುಘ್ನನನ್ನು ಕರೆದು, ಎಲೈ ಶತೃಘ್ನನೇ, ಈ ಕುದುರೆಯು ಹೋಗುವುದನ್ನು ಅನುಸರಿಸಿ ಹೋಗು. ನಿನಗೆ

ಶತ್ರುಘ್ನ ಗಚ್ಛ ವಾಹಸ್ಯ ಮಾರ್ಗಂ ಭದ್ರಂ ಭವೇತ್ತವ ।
ಭವೇತಾಂ ಶತ್ರುವಿಜಯೌ ರಿಪುಕರ್ಷಣ ತೇ ಭುಜೌ ॥ ೫೫ ॥

ಯೇ ಯೋದ್ಧಾರಃ ಪ್ರತಿರಣಗತಾಸ್ತೇ ತ್ವಯಾ ವಾರಣೀಯಾ
ವಾಹಂ ರಕ್ಷ ಸ್ವಕಗುಣಗಣೈಃ ಸಂಯುತಸ್ಸನ್ಮಹೋಽತ್ಯಂ ।
ಸುಪ್ತಾನ್ ಭ್ರಷ್ಟಾನ್ ವಿಗತವಸನಾನ್ ಭೀತಭೀತಾನ್ ಪ್ರಣಮ್ರಾನ್
ಮಾ ಹನ್ಯಾಸ್ತ್ವಂ ಸುಕೃತಿಕೃತಿನೋ ಯೇ ನ ಶಂಸಂತಿ ಕರ್ಮ ॥ ೫೬ ॥

ವಿರಥಾನ್ ರಥಸಂಸ್ಥಸ್ತ್ವಂ ಯೇ ವದಂತಿ ವಯಂ ತವ ।
ತೇ ತ್ವಯಾ ನ ನಿಹಂತವ್ಯಾಃ ಶತ್ರುಘ್ನ ಸುಕೃತೈಷಿಣಾ ॥ ೫೭ ॥

ಯೋ ಹನ್ಯಾದ್ವಿಮದಂ ಮತ್ತಂ ಸುಪ್ತಂ ಭಗ್ನಭಯಾತುರಂ ।
ತಾವಕೋಽಹಂ ಬ್ರುವಾಣಂ ಚ ಸ ವ್ರಜತ್ಯಧಮಾಂ ಗತಿಂ ॥ ೫೮ ॥

ಪರಸ್ವೇ ಚಿತ್ತವೃತ್ತಿಂ ತ್ವಂ ಮಾ ಕೃಥಾಃ ಪರದಾರಕೇ ।
ನೀಚೇ ರತಿಂ ಮಾ ವಿದಧ್ಯಾಃ ಸರ್ವಸದ್ಗುಣಪೂರಿತಃ ॥ ೫೯ ॥

---

ಮಂಗಳವಾಗಲಿ. ನಿನ್ನ ಬಾಹುಗಳು ಶತ್ರುಗಳನ್ನು ಜಯಿಸುವುವುಗಳಾಗಿಯೂ ಅವರನ್ನು ಹಿಡಿದೆಳೆತರುವುದರಲ್ಲಿ ಸಾಮರ್ಥ್ಯವನ್ನೂ ಹೊಂದಲಿ.

೫೬. ನಿನ್ನೊಡನೆ ಯುದ್ಧಕ್ಕೆ ಬಂದವರನ್ನು ಜಯಿಸು. ನಿನ್ನ ಶಕ್ತಿಯಿಂದಲೂ, ನಿನ್ನ ಗುಣಗಳಿಂದಲೂ, ಕುದುರೆಯನ್ನು ಕಾಪಾಡು. ಮಲಗಿರುವವರು, ಓಡಿಹೋಪವರೂ, ಬಟ್ಟೆಯನ್ನು ತೆಗೆದವರೂ, ಹೆದರಿದವರು, ನಮ್ರರಾದವರು. ಇವರನ್ನು ಕೊಲ್ಲಬೇಡ. ಅದು ಸನ್ಮಾರ್ಗಾವಲಂಬಿಗಳ ಲಕ್ಷಣವಲ್ಲ.

೫೭. ರಥದಲ್ಲಿ ಕುಳಿತು ಕೆಳಗಿರುವವರೊಡನೆ ಯುದ್ಧಮಾಡಬೇಡ. ನಾನು ನಿಮ್ಮವನು ಎನ್ನುವವನೊಡನೆ ಯುದ್ಧಮಾಡಬೇಡ. ಇದು ಯುದ್ಧದ ರಹಸ್ಯವು

೫೮. ನಮ್ರನನ್ನೂ, ಮದಿಸಿದವನನ್ನೂ, ಮಲಗಿರುವವನನ್ನೂ, ಸೋತವನನ್ನೂ, ಭಯಿಷ್ಠನನ್ನೂ, ನಾನು ಶರಣಾಗತನೆಂದು ಅನ್ನುವವನನ್ನೂ ಕೊಂದರೆ ನರಕ ಪ್ರಾಪ್ತಿಯಾಗುತ್ತದೆ.

೫೯. ಪರರ ಧನದಲ್ಲಿ ಮನಸ್ಸಿಡಬೇಡ. ಪರರ ಹೆಂಡಿರಲ್ಲಿ ಆಸೆ ಮಾಡಬೇಡ. ಅಯೋಗ್ಯರಲ್ಲಿ ಸ್ನೇಹಮಾಡಬೇಡ. ಸದ್ಗುಣಗಳಿಂದ ಕೂಡಿಕೊಂಡಿರು.

ಪೂರ್ವಂ ಪ್ರಹಾರಂ ವೃದ್ಧಾನಾಂ ಮಾ ಕುರ್ವೀಥಾ ಹ್ಯರಿಂಜಯ ।
ಪೂಜ್ಯಪೂಜಾವ್ಯತಿಕ್ರಮಂ ಮಾ ವಿಧೇಹಿ ದಯಾನ್ವಿತಃ ॥ ೬೦ ॥

ಗಾಂ ವಿಪ್ರಂ ತ್ವಂ ನಮಸ್ಕುರ್ಯಾ ವೈಷ್ಣವಂ ಧರ್ಮಸಂಯುತಂ ।
ಅಭಿವಾದ್ಯ ತತೋ ಗಚ್ಛೇತ್ತತ್ರ ಸಿದ್ಧಿಮವಾಪ್ನುಯಾತ್ ॥ ೬೧ ॥

ವಿಷ್ಣುಸ್ಸರ್ವೇಶ್ವರಸ್ಸಾಕ್ಷೀ ಸರ್ವವ್ಯಾಪಕದೇಹಭೃತ್ ।
ಯೇ ತದೀಯಾ ಮಹಾಬಾಹೋ ತದ್ರೂಪಾ ವಿಚರಂತಿ ಹಿ ॥ ೬೨ ॥

ಯೇ ಸ್ಮರಂತಿ ಮಹಾವಿಷ್ಣುಂ ಸರ್ವಭೂತಹೃದಿ ಸ್ಥಿತಂ ।
ತೇ ಮಂತವ್ಯಾ ಮಹಾವಿಷ್ಣುಸಮರೂಪಾ ರಘೂತ್ತಮ ॥ ೬೩ ॥

ಯಸ್ಯ ಸ್ವೀಯೋ ನ ಪಾರಕ್ಯೋ ಯಸ್ಯ ಮಿತ್ರಸಮೋ ರಿಪುಃ ।
ತೇ ವೈಷ್ಣವಾಃ ಕ್ಷಣಾದೇವ ಪಾಪಿನಂ ಪಾವಯಂತಿ ಹಿ ॥ ೬೪ ॥

ಯೇಷಾಂ ಪ್ರಿಯಂ ಭಾಗವತಂ ತೇಷಾಂ ವೈ ಬ್ರಾಹ್ಮಣಾಃ ಪ್ರಿಯಾಃ ।
ವೈಕುಂಠಾತ್ ಪ್ರೇಷಿತಾಸ್ತೇಽತ್ರ ಲೋಕಪಾವನಹೇತವೇ ॥ ೬೫ ॥

---

೬೦. ದೊಡ್ಡವರೊಡನೆ ಯುದ್ಧಮಾಡುವಾಗ ಮೊದಲು ಹೊಡೆಯಬೇಡ. ಪೂಜ್ಯಪೂಜಕರಿಗೆ ಇರುವ ವ್ಯತ್ಯಾಸವನ್ನು ಗಮನಿಸಿ ದಯದಿಂದ ಪ್ರವರ್ತಿಸು.

೬೧. ಗೋವನ್ನೂ, ಬ್ರಾಹ್ಮಣನನ್ನೂ, ಧರ್ಮಿಷ್ಠನಾದ ವೈಷ್ಣವನನ್ನೂ ನಮಸ್ಕರಿಸು. ಅವರಿಗೆ ನಮಸ್ಕರಿಸಿ ಹೊರಟರೆ ಸಿದ್ಧಿಯನ್ನು ಹೊಂದುತ್ತೀಯೆ

೬೨. ವಿಷ್ಣುವು ಸರ್ವೇಶ್ವರನು, ಸರ್ವಸಾಕ್ಷಿಯು, ಮತ್ತು ಸರ್ವವ್ಯಾಪಕನು. ಆ ವಿಷ್ಣುವು ಭಕ್ತರ ರೂಪದಿಂದ ಸಂಚರಿಸುತ್ತಾನೆ.

೬೩. ಸರ್ವವ್ಯಾಪಕನಾದ ವಿಷ್ಣುವನ್ನು ಯಾರು ಸ್ಮರಿಸುತ್ತಾರೆಯೋ ಅವರನ್ನು ವಿಷ್ಣುವಿಗೆ ಸಮಾನರೂಪರೆಂದು ತಿಳಿ.

೬೪. ಯಾರು ತನ್ನವನನ್ನೂ, ಪರನನ್ನೂ, ಮಿತ್ರನನ್ನೂ, ಶತ್ರುವನ್ನೂ ಒಂದೇ ಎಂದು ಭಾವಿಸುತ್ತಾರೋ ಅವರು ವೈಷ್ಣವರು. ಪಾಪಿಯನ್ನು ಸಹ ಅವರು ಪಾವನಮಾಡುತ್ತಾರೆ.

೬೫. ಯಾರಿಗೆ ಭಾಗವತವು ಪ್ರಿಯವೋ, ಅವರಿಗೆ ಬ್ರಾಹ್ಮಣರು ಪ್ರಿಯರು. ಅವರನ್ನು ವೈಕುಂಠದಿಂದ ಬಂದವರನ್ನಾಗಿ ತಿಳಿ.

ಯೇಷಾಂ ಮುಖೇ ಹರೇರ್ನಾಮ ಹೃದಿ ವಿಷ್ಣುಸ್ಸನಾತನಃ ।
ಉದರೇ ವಿಷ್ಣುನೈವೇದ್ಯಂ ಸ ಶ್ವಪಾಕೋಽಪಿ ವೈಷ್ಣವಃ ॥ ೬೬ ॥

ಯೇಷಾಂ ವೇದಾಃ ಪ್ರಿಯತಮಾ ನ ಚ ಸಂಸಾರಜಂ ಸುಖಂ
ಸ್ವಧರ್ಮನಿರತಾ ಯೇಽತ್ರ ತಾನ್ನಮಸ್ಕುರ್ವಿಹಾನ್ವಿತಾನ್ ॥ ೬೭ ॥

ಶಿವೇ ವಿಷ್ಣೌ ನ ವಾ ಭೇದೋ ನ ಚ ಬ್ರಹ್ಮಮಹೇಶಯೋಃ ।
ತೇಷಾಂ ಪಾದರಜಃ ಪೂತಂ ವಹಾಮ್ಯಘವಿನಾಶನಂ ॥ ೬೮ ॥

ಗೌರೀ ಗಂಗಾ ಮಹಾಲಕ್ಷ್ಮೀರ್ಯಸ್ಯ ನಾಸ್ತಿ ಪೃಥಕ್ತಯಾ ।
ತೇ ಮಂತವ್ಯಾ ನರಾಸ್ಸರ್ವೇ ಸ್ವರ್ಗಲೋಕಾದಿಹಾಮರಾಃ ॥ ೬೯ ॥

ಶರಣಾಗತರಕ್ಷೀ ಚ ಮಹಾದಾನರಾಯಣಃ ।
ಯಥಾಶಕ್ತಿ ಹರೇಃ ಪ್ರೀತ್ಯೈ ಸ ಜ್ಞೇಯೋ ವೈಷ್ಣವೋತ್ತಮಃ ॥ ೭೦ ॥

---

೬೬. ಯಾರು ಹರಿನಾಮವನ್ನು ಮುಖದಲ್ಲಿಟ್ಟುಕೊಂಡು ಅವನ ಸ್ಮರಣೆ ಮಾಡುತ್ತಾ ಅವನ ನೈವೇದ್ಯವನ್ನು ಭಕ್ಷಿಸುಸುತ್ತಾರೋ ಅವರು ಚಂಡಾಲರಾದರೂ, ವೈಷ್ಣವರು.

೬೭. ವೇದಗಳೇ ಪ್ರಿಯವೆಂದು ತಿಳಿದು ಸಂಸಾರಸುಖವನ್ನು ಆಶಿಸದೆ ಸ್ವಧರ್ಮದಲ್ಲಿರುವವರನ್ನು ನಮಸ್ಕರಿಸು.

೬೮. ಶಿವ ವಿಷ್ಣುಗಳಲ್ಲಿ ಭೇದವೆಣಿಸದೆ ಬ್ರಹ್ಮ ಈಶ್ವರರಲ್ಲಿ ವ್ಯತ್ಯಾಸವನ್ನೆಣಿಸದವರ ಪಾದಧೂಳಿಯನ್ನೇ ನಾನು ಧರಿಸುತ್ತೇನೆ. ಅದು ಪಾಪಹರವು ಮತ್ತು ಅತಿ ಪವಿತ್ರವಾದುದೆಂದು ತಿಳಿ.

೬೯. ಗೌರಿ, ಗಂಗೆ, ಲಕ್ಷ್ಮಿಯರನ್ನು ಯಾರು ಒಂದು ಎಂದು ತಿಳಿದಿದ್ದಾರೋ. ಅವರನ್ನು ಮನುಷ್ಯಲೋಕದ ದೇವತೆಗಳೆಂದು ತಿಳಿ.

೭೦. ಯಾವ ಪುರುಷನು ಶರಣಾಗತರನ್ನು ಕಾಪಾಡುತ್ತ, ದಾನಗಳನ್ನು ಮಾಡುತ್ತ, ಅವೆಲ್ಲವೂ ಹರಿಯ ಪ್ರೀತಿಗೋಸ್ಕರವೆಂದೆನ್ನುತ್ತಾನೋ ಅವನೇ ವೈಷ್ಣವನು.

ಯಸ್ಯ ನಾಮ ಮಹಾಪಾಪರಾಶಿಂ ದಹತಿ ಸತ್ವರಂ ।
ತದೀಯಚರಣದ್ವಂದ್ವೇ ಭಕ್ತಿರ್ಯಸ್ಯ ಸ ವೈಷ್ಣವಃ ॥ ೭೧ ॥

ಇಂದ್ರಿಯಾಣಿ ವಶೇ ಯೇಷಾಂ ಮನೋಽಪಿ ಹರಿಚಿಂತಕಂ ।
ತಾನ್ನಮಸ್ಕೃತ್ಯ ಪೂಯಾತ್ಸ ಆ ಜನ್ಮಮರಣಾಂತಕಂ ॥ ೭೨ ॥

ಪರಸ್ತ್ರಿಯಂ ತ್ವಂ ಕರವಾಲವತ್ತ್ಯಜನ್
ಭವೇರ್ಯಶೋಭೂಷಣಭೂತಭೂಮಿಃ ।
ಏವಂ ಮಮಾದೇಶಮಥಾಽಽಚರಂಶ್ಚ
ಲಭೇಃ ಪದಂ ಧಾಮ ಸುಯೋಗಿಮೀಡ್ಯಂ ॥ ೭೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ಶ್ರೀ ರಾಮಾಶ್ವಮೇಧೇ ಶತ್ರುಘ್ನಶಿಕ್ಷಾಕಥನಂ ನಾಮ ದಶಮೋಽಧ್ಯಾಯಃ

---

೭೧. ಯಾವ ವಿಷ್ಣುವಿನ ನಾಮಸ್ಮರಣೆಯು ಪಾಪರಾಶಿಯನ್ನು ನಾಶಮಾಡುತ್ತದೋ ಆ ನಾಮಗಳ ಸ್ಮರಣೆ ಮಾಡುವವನೇ ವೈಷ್ಣವನೆಂದು ತಿಳಿ.

೭೨. ಇಂದ್ರಿಯಗಳನ್ನು ನಿಗ್ರಹಿಸಿ ಹರಿಯನ್ನೇ ಚಿಂತಿಸುವವರನ್ನು ನಮಸ್ಕರಿಸಿ ಜನ್ಮವನ್ನು ಸಾರ್ಥಕಮಾಡಿಕೋ.

೭೩. ಪರಸ್ತ್ರೀಯನ್ನು ಕತ್ತಿಯಂತೆ ಕ್ರೂರವೆಂದು ತಿಳಿದು, ಅದರ ಗೋಜಿಗೆ ಹೋಗಬೇಡ. ಅದರಿಂದ ಯಶಸ್ಸು ಬರುತ್ತದೆ. ಈ ರೀತಿ ನನ್ನ ಅಪ್ಪಣೆಯನ್ನು ಪಾಲಿಸುತ್ತಾ ಉತ್ತಮಲೋಕವನ್ನು ಹೊಂದು. ಎಂದು ಶತ್ರುಘ್ನನಿಗೆ ಬುದ್ಧಿವಾದ ಹೇಳಿ ಅವನನ್ನು ಯಜ್ಞಾಶ್ವರಕ್ಷಣೆಗಾಗಿ ಅದರ ಜತೆಯಲ್ಲಿ ಕಳುಹಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ಶ್ರೀ ರಾಮಾಶ್ವಮೇಧಕಥನದಲ್ಲಿ ರಾಮನು ಶತ್ರುಘ್ನನಿಗೆ ಹಿತೋಪದೇಶ ಮಾಡಿದನೆಂಬ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
## ಏಕಾದಶೋಽಧ್ಯಾಯಃ

॥ ಶೇಷ ಉವಾಚ ॥

ಏವಮಾಜ್ಞಾಪ್ಯ ಭಗವಾನ್ ರಾಮಶ್ಶಾತ್ರುಕರ್ಷಣಃ ।
ವೀರಾನಾಲೋಕಯನ್ಸರ್ವಾನ್ ಜಗಾದ ಶುಭಯಾ ಗಿರಾ ॥ ೧ ॥

ಶತ್ರುಘ್ನಸ್ಯ ಮಮ ಭ್ರಾತುರ್ವಾಜಿರಕ್ಷಾಕರಸ್ಯ ವೈ ।
ಕೋ ಗನ್ತಾ ಪೃಷ್ಠತೋ ರಕ್ಷಂಸ್ತನ್ನಿದೇಶಪ್ರಪಾಲಕಃ ॥ ೨ ॥

ಯಃ ಸರ್ವವೀರಾನ್ಪ್ರತಿಮುಖ್ಯಮಾಗತಾನ್
ವಿನಿರ್ಜಯೇನ್ಮರ್ಮಭಿದಸ್ತ್ರಸಂಘೈಃ ।
ಗೃಹ್ಣಾತ್ವಸೌ ಮೇ ಕರವೀಟಿಕಂ ತತ್
ಭೂಮೌ ಯಶಃ ಸಂಪ್ರಥಯನ್ಸುವಿಸ್ತರಂ ॥ ೩ ॥

---

### ಹನ್ನೊಂದನೆಯ ಅಧ್ಯಾಯವು

೧. ಶೇಷನು ಹೇಳಿದನು:—ವೀರನಾದ ಶ್ರೀರಾಮನು ಹಿಂದೆ ಹೇಳಿದಂತೆ ಶತ್ರುಘ್ನನಿಗೆ ಅಪ್ಪಣೆಮಾಡಿ, ಅಲ್ಲಿದ್ದ ವೀರರನ್ನು ಸಂಬೋಧಿಸಿ ಈ ರೀತಿ ಹೇಳಿದನು.

೨. ಕುದುರೆಯನ್ನು ರಕ್ಷಿಸುವ ನನ್ನ ತಮ್ಮ ಶತ್ರುಘ್ನನ ಹಿಂದೆ ಅವನ ಅಪ್ಪಣೆಯನ್ನು ಪಾಲಿಸುತ್ತ ಯಾರು ಹೋಗುತ್ತೀರಿ?

೩. ಯಾವ ಶೂರನು ತನ್ನ ಯಶಸ್ಸನ್ನೇ ಗಮನಿಸಿ, ತನಗೆ ಎದುರಾಗಿ ಬರುವ ಶತ್ರುಗಳನ್ನು ಅಸ್ತ್ರಗಳಿಂದ ಜಯಿಸುತ್ತಾನೋ ಅಂತಹ ಪರಾಕ್ರಮಶಾಲಿಯು ಇಲ್ಲಿಗೆ ಬಂದು ನಾನು ಕೊಡುವ ವೀಳೆಯವನ್ನು ತೆಗೆದುಕೊಂಡು ಯಜ್ಞಾಶ್ವರಕ್ಷಕನಾಗಿ ಹೊರಡಲಿ.

ಇತ್ಯುಕ್ತವತಿ ರಾಮೇ ತು ಪುಷ್ಕಲೋ ಭರತಾತ್ಮಜಃ ।
ಜಗ್ರಾಹ ವೀಟಕಂ ತಸ್ಮಾದ್ರಘುರಾಜಕರಾಂಬುಜಾತ್ ॥ ೪ ॥

ಸ್ವಾಮಿನ್ ಗಚ್ಛಾಮಿ ಶತ್ರುಘ್ನಪೃಷ್ಠರಕ್ಷಾಂ ಕರೋಮ್ಯಹಂ ।
ಸನ್ನದ್ಧಃ ಸರ್ವತಶ್ಶಸ್ತ್ರಚಾಪಬಾಣಧರಪ್ರಭೋ ॥ ೫ ॥

ಸರ್ವಮದ್ಯ ಕ್ಷಿತಿತಳಂ ತ್ವತ್ಪ್ರತಾಪೋ ವಿಜೇಷ್ಯತೇ ।
ಏತೇ ನಿಮಿತ್ತಭೂತಾ ವೈ ರಾಮಚಂದ್ರ ಮಹಾಮತೇ ॥ ೬ ॥

ಭವತ್ಕೃಪಾತಸ್ಸಕಲಂ ಸಸುರಾಸುರಮಾನುಷಂ ।
ಉಪಸ್ಥಿತಂ ಪ್ರಯುದ್ಧಾರ್ಥಂ ನಿವಾರಣಕ್ಷಮೋ ಹ್ಯಹಂ ॥ ೭ ॥

ಸರ್ವಂ ಸ್ವಾಮೀ ಜ್ಞಾಸ್ಯತಿ ಯನ್ಮಮ ವಿಕ್ರಮದರ್ಶನಾತ್ ।
ಏಷ ಗನ್ತಾಸ್ಮಿ ಶತ್ರುಘ್ನಪೃಷ್ಠರಕ್ಷಾಪ್ರಕಾರಕಃ ॥ ೮ ॥

---

೪. ರಾಮನು ಹೀಗೆ ಹೇಳುತ್ತಲೂ, ಭರತನ ಮಗನಾದ ಪುಷ್ಕಳನು ರಾಮನ ಕೈಯಿಂದ ಆ ವೀಳೆಯವನ್ನು ತೆಗೆದುಕೊಂಡನು.

೫. ಸ್ವಾಮಿ, ಸರ್ವಶಸ್ತ್ರಗಳನ್ನು ಧರಿಸಿ, ಬಿಲ್ಲನ್ನು ಹಿಡಿದು ಶತ್ರುಘ್ನನ ಹಿಂದೆ ರಕ್ಷಕನಾಗಿ ನಾನು ಹೋಗುತ್ತೇನೆ.

೬. ಎಲೈ ರಾಮಚಂದ್ರನೇ, ನಿನ್ನ ಪ್ರತಾಪವೇ ಭೂಮಂಡಲವನ್ನು ಜಯಿಸುತ್ತದೆ. ನಾವುಗಳು ನಿಮಿತ್ತ ಮಾತ್ರವಷ್ಟೆ?

೭. ದೇವದಾನವಮನುಷ್ಯರೆಲ್ಲರೂ ಒಂದಾಗಿ ಯುದ್ಧಕ್ಕೆ ಬಂದರೂ, ನಿನ್ನ ಕೃಪೆಯಿಂದೆಲ್ಲವನ್ನೂ ನಿವಾರಿಸುವ ಶಕ್ತಿ ನನಗಿದೆ.

೮. ನನ್ನ ಪರಾಕ್ರಮವನ್ನು ತೋರಿಸಲು ಕಾಲಬಂದಾಗ ಅದನ್ನು ತಿಳಿದುಕೊಳ್ಳಬಹುದು. ಇಗೋ, ನಾನು ಶತ್ರುಘ್ನನ ಬೆನ್ನನ್ನು ರಕ್ಷಿಸುತ್ತಾ ಹೋಗುತ್ತೇನೆ ಎಂದನು.

ಏವಂ ಬ್ರುವಂತಂ ಭರತಾತ್ಮಜಂ ಸ
ಪ್ರಸ್ತೂಯ ಸಾಧ್ವಿತ್ಯನುಮೋದಮಾನಃ ।
ಶಶಂಸ ಸರ್ವಾನ್ ಕಪಿವೀರಮುಖ್ಯಾನ್
ಪ್ರಭಂಜನೋದ್ಭೂತಮುಖಾನ್ ಹರಿಃ ಪ್ರಭುಃ　　॥ ೯ ॥

ಭೋ ಹನೂಮನ್ಮಹಾವೀರ ಶೃಣು ಮದ್ವಾಕ್ಯಮಾದೃತಃ ।
ತ್ವತ್ಪ್ರಸಾದಾನ್ಮಯಾ ಪ್ರಾಪ್ತಮಿದಂ ರಾಜ್ಯಮಕಂಟಕಂ　　॥ ೧೦ ॥

ಸೀತಯಾ ಮಮ ಸಂಯೋಗೋ ಯೋಽಭವಜ್ಜಲಧಿರ್ನರೈಃ ।
ತಾರಿತಸ್ತದ್ಬಲಂ ವೇದ್ಮಿ ಸರ್ವಂ ತವ ಕಪೀಶ್ವರ　　॥ ೧೧ ॥

ತ್ವಂ ಗಚ್ಛ ಮಮ ಸೈನ್ಯಸ್ಯ ಪಾಲಕಸ್ತನ್ಮಮಾಜ್ಞಯಾ ।
ಶತ್ರುಘ್ನಃ ಸೋದರೋ ಮಹ್ಯಂ ಪಾಲನೀಯಸ್ತ್ವಹಂ ಯಥಾ　　॥ ೧೨ ॥

ಯತ್ರ ಯತ್ರ ಮತಿಭ್ರಂಶಃ ಶತ್ರುಘ್ನಸ್ಯ ಪ್ರಜಾಯತೇ ।
ತತ್ರ ತತ್ರ ಪ್ರಬೋದ್ಧವ್ಯೋ ಭ್ರಾತಾ ಮಮ ಮಹಾಮತೇ　　॥ ೧೩ ॥

---

೯. ಹೀಗೆ ಹೇಳುತ್ತಿರುವ ಪುಷ್ಕಲನನ್ನು ಭಲಾ, ಒಳ್ಳೆಯದು ಎಂದು ಹೊಗಳುತ್ತಾ, ಹನುಮಂತನೇ ಮೊದಲಾದ ಕಪಿವೀರರನ್ನೂ ಸಹ ಹೊಗಳಿದನು.

೧೦. ಎಲೈ! ವೀರನಾದ ಹನುಮಂತನೇ ನನ್ನ ಮಾತನ್ನು ಕೇಳು. ನಿನ್ನ ಸಾಹಸದಿಂದಲೇ ಈ ರಾಜ್ಯವನ್ನು ತೊಂದರೆಯಿಲ್ಲದೇ ಹೊಂದಿದೆನು.

೧೧. ಸೀತೆಯೊಡನೆ ಸೇರಿದುದೂ, ಸಮುದ್ರವನ್ನೂ ದಾಟಿದುದೂ, ನಿನ್ನ ಕೃಪೆಯಿಂದಲೇ ಎಂಬುದನ್ನು ಬಲ್ಲೆ.

೧೨. ಈಗ ನನ್ನ ಅಪ್ಪಣೆಯ ಮೇರೆ ನನ್ನ ಸೈನ್ಯದ ಪಾಲಕನಾಗಿ ಹೋಗು. ಶತ್ರುಘ್ನನು ನನಗೆ ಸೋದರನು. ನನ್ನಂತೆ ಅವನನ್ನೂ ಕಾಪಾಡು.

೧೩. ಶತ್ರುಘ್ನನಿಗೆ ಯಾವ ಯಾವ ವಿಷಯದಲ್ಲಿ ಎಲ್ಲೆಲ್ಲಿ ಏನೇನು ಮಾಡಬೇಕೆಂದು ತೋರುವುದಿಲ್ಲವೋ ಅಲ್ಲಲ್ಲಿ ಅವನಿಗೆ ನೀನು ಬುದ್ಧಿಯನ್ನು ಹೇಳು.

ಇತಿ ಶ್ರುತ್ವಾ ಮಹದ್ವಾಕ್ಯಂ ರಾಮಚಂದ್ರಸ್ಯ ಧೀಮತಃ ।
ಶಿರಸಾ ತತ್ಸಮಾದಾಯ ಪ್ರಣಾಮಮಕರೋತ್ತದಾ ॥ ೧೪ ॥

ಅಥಾದಿಶನ್ಮಹಾರಾಜೋ ಜಾಂಬವಂತಂ ಕಪೀಶ್ವರಂ ।
ರಘುನಾಥಸ್ಯ ಸೇವಾಯೈ ಕಪೀಶ್ವರಮಜಃ ಪ್ರಭುಃ ॥ ೧೫ ॥

ಅಂಗದೋ ಗವಯೋ ಮೈಂದಸ್ತಥಾ ದಧಿಮುಖಃ ಕಪಿಃ ।
ಸುಗ್ರೀವಃ ಪ್ಲವಗಾಧೀಶಃ ಶತಾವಳ್ಯಕ್ಷಿತೌ ಕಪೀ ॥ ೧೬ ॥

ನಲೋ ನೀಲೋ ಮನೋವೇಗೋಽಧಿಗನ್ತಾ ವಾನರಾಂಗಜಃ ।
ಇತ್ಯೇವಮಾದಯೋ ಯೂಯಂ ಸಜ್ಜೀಭೂತಾ ಭವಂತು ಭೋಃ ॥ ೧೭ ॥

ಸರ್ವೇ ರಥೈಸ್ಸದಶ್ವೈಶ್ಚ ತಪ್ತಹಾಟಕಭೂಷಣೈಃ ।
ಕವಚೇನ ಶಿರಸ್ತ್ರಾಣೈರ್ಭೂಷಿತಾ ಯಾನ್ತು ಸತ್ವರಾಃ ॥ ೧೮ ॥

॥ ಶೇಷ ಉವಾಚ ॥

ಸುಮಂತ್ರಮಾಹೂಯ ಸುಮಂತ್ರಿಣಂ ತದಾ
ಜಗಾದ ರಾಮೋ ಬಲವೀರ್ಯಶೋಭಿತಃ ।

---

೧೪. ರಾಮಚಂದ್ರನ ಈ ಮಾತನ್ನು ಕೇಳಿ ಒಪ್ಪಿಕೊಂಡು ಹನುಮಂತನು ಶ್ರೀರಾಮನಿಗೆ ನಮಸ್ಕರಿಸಿದನು.

೧೫. ಜಾಂಬವಂತನನ್ನು ಶತ್ರುಘ್ನನ ಸೇವೆಗೆ ಶ್ರೀರಾಮನು ನೇಮಿಸಿದನು.

೧೬-೧೭. ಅಂಗದ, ಗವಯ, ಮೈಂದ, ದಧಿಮುಖ, ಸುಗ್ರೀವ, ಶತಾವಳಿ, ಅಕ್ಷಿತ, ನೀಲ, ನಲ, ಮನೋವೇಗ, ಅಧಿಗಂತಾ ಇವರೇ ಮುಂತಾದ ಕಪಿವೀರರೆಲ್ಲರೂ ಸಿದ್ಧರಾಗಿರಿ ಎಂದನು.

೧೮. ಎಲ್ಲರೂ ಸ್ವರ್ಣಭೂಷಿತವಾದ ಕುದುರೆಗಳಿಂದಲೂ, ರಥಗಳಿಂದಲೂ, ಕವಚಗಳಿಂದಲೂ, ತಲೆಯ ಟೊಪ್ಪಿಗೆಗಳಿಂದಲೂ ಅಲಂಕೃತರಾಗಿ, ವೇಗವಾಗಿ ಶತ್ರುಘ್ನನನ್ನು ಅನುಸರಿಸಿ ಹೋಗಿರಿ ಎಂದನು.

೧೯. ಶೇಷನು ಹೇಳಿದನು :—ವೀರನಾದ ರಾಮನು ಬುದ್ಧಿವಂತನಾದ

ಅಮಾತ್ಯಮೌಳೇ ವದ ಕೇsತ್ರ ಯೋಜ್ಯಾ
ನರಾ ಹಯಂ ಪಾಲಯಿತುಂ ಸಮರ್ಥಾಃ ॥ ೧೯ ॥

ತದುಕ್ತಮೇವಮಾಕರ್ಣ್ಯ ಜಗಾದ ಪರವೀರಹಾ ।
ಹಯಸ್ಯ ರಕ್ಷಣೇ ಯೋಗ್ಯಾನ್ ಬಲಿನೋsತ್ರ ನರಾಧಿಪಾನ್ ॥ ೨೦ ॥

ರಘುನಾಥ ಶೃಣುಷ್ವೇತಾಂಸ್ತವ ವೀರಾನ್ ಸುಸಂಹಿತಾನ್ ।
ಧನುರ್ಧರಾನ್ ಮಹಾವಿದ್ಯಾನ್ ಸರ್ವಶಸ್ತ್ರಾಸ್ತ್ರಕೋವಿದಾನ್ ॥ ೨೧ ॥

ಪ್ರತಾಪಾಗ್ರ್ಯಂ ನೀಲರತ್ನಂ ತಥಾ ಲಕ್ಷ್ಮೀನಿಧಿಂ ನೃಪಂ ।
ರಿಪುತಾಪಂ ಚೋಗ್ರಹಯಂ ತಥಾ ಶಸ್ತ್ರವಿದಂ ನೃಪಂ ॥ ೨೨ ॥

ರಾಜನ್ಯೋsಸೌ ನೀಲರತ್ನೋ ಮಹಾವೀರೋ ರಥಾಗ್ರಣೀಃ ।
ಸ ಏವ ಲಕ್ಷಂ ರಕ್ಷೇತ ಲಕ್ಷಂ ಯುಧ್ಯೇತ ನಿರ್ಭಯಃ ॥ ೨೩ ॥

ಅಕ್ಷೌಹಿಣೀಭಿರ್ದಶಭಿರ್ಯಾತು ವಾಹಸ್ಯ ರಕ್ಷಣೇ ।
ದಂಶಿತೈಸ್ಸಶಿರಸ್ತ್ರಾಣೈರ್ಮಹಾಬಾಹುಭಿರುದ್ಧತೈಃ ॥ ೨೪ ॥

---

ಸುಮಂತ್ರನೆಂಬ ಮಂತ್ರಿಯನ್ನು ಕರೆದು, ಎಲೈ ಸುಮಂತ್ರನೇ, ಕುದುರೆಯ ರಕ್ಷಣೆಗೆ ಯಾರನ್ನು ನೇಮಿಸಬೇಕು ಎಂದು ಕೇಳಿದನು.

೨೦-೨೧. ಸುಮಂತ್ರನು ರಾಮನು ಹೇಳಿದುದನ್ನು ಕೇಳಿ, ಎಲೈ ರಾಮನೇ! ಕುದುರೆಯನ್ನು ರಕ್ಷಿಸಲು ರಾಜರಲ್ಲಿ ಯೋಗ್ಯರಾಗಿಯೂ, ಧನುರ್ಧರರಾಗಿಯೂ, ಮಹಾವಿದ್ಯೆಯನ್ನು ತಿಳಿದು ಶಸ್ತ್ರಾಸ್ತ್ರಗಳಲ್ಲಿ ಬುದ್ಧಿವಂತರಾಗಿಯೂ ಇರುವ ನಿನ್ನ ಕಡೆಯ ವೀರರನ್ನು ಹೇಳುತ್ತೇನೆ ಕೇಳು.

೨೨. ಪ್ರತಾಪಾಗ್ರ್ಯ, ನೀಲರತ್ನ, ಲಕ್ಷ್ಮೀನಿಧಿ, ರಿಪುತಾಪ, ಉಗ್ರಹಯ ಇವರುಗಳು ಗಟ್ಟಿಗರು, ಶೂರರು.

೨೩. ನೀಲರತ್ನನು, ಪಟ್ಟಾಭಿಷಕ್ತನಾದ ರಾಜನು. ವೀರಶ್ರೇಷ್ಠನು. ಅವನು ಒಂದುಲಕ್ಷ ಸೈನ್ಯಗಳನ್ನು ಕಾಪಾಡಬಲ್ಲನು. ಲಕ್ಷ ಸೈನ್ಯದೊಂದಿಗೆ ಯುದ್ಧಮಾಡ ಬಲ್ಲನು.

೨೪. ಇವನು ಅಕ್ಷೌಹಿಣಿ ಸೈನ್ಯಗಳಿಗೆ ಕವಚಗಳನ್ನು ತೊಡಿಸಿ ತಲೆಗೆ ಕಬ್ಬಿಣದ ಟೊಪ್ಪಿಗೆಯನ್ನು ಹಾಕಿಸಿ ಕುದುರೆಯ ರಕ್ಷಣೆಗೆ ಹೋಗಲಿ.

ಪ್ರತಾಪಾಗ್ರ್ಯೋ ಯೋಹಿ ಜಿಷ್ಣಂ ರಿಪುವರ್ಗಮಶಾತಯತ್ ।
ಸವ್ಯಾಪಸವ್ಯಬಾಣಾನಾಂ ಮೋಕ್ತಾ ಸರ್ವಾಸ್ತ್ರವಿತ್ತಮಃ ॥ ೨೫ ॥

ಏಷೋಕ್ಷೌಹಿಣೀ ವಿಂಶತ್ಯಾ ಯಾತು ಯಜ್ಞಹಯಾವನೇ ।
ಸನ್ನದ್ಧೋ ರಿಪುನಾಶಾಯ ಯುಕ್ತಃ ಕೋದಂಡದಂಡಭೃತ್ ॥ ೨೬ ॥

ತಥಾ ಲಕ್ಷ್ಮೀನಿಧಿಸ್ತ್ವೇಷ ಯಾತು ರಾಜನ್ಯಸತ್ತಮಃ ।
ಯಸ್ತಪೋಭಿಃ ಶತಧೃತಿಂ ಪ್ರಸಾದ್ಯಾಸ್ತ್ರಾಣಿ ಚಾಭ್ಯಸತ್ ॥ ೨೭ ॥

ಬ್ರಹ್ಮಾಸ್ತ್ರಂ ಪಶುಪತ್ಯಸ್ತ್ರಂ ಗಾರುಡಂ ನಾಗಸಂಜ್ಞಿತಂ ।
ಮಾಯೂರಂ ನಾಕುಲಂ ರೌದ್ರಂ ವೈಷ್ಣವಂ ಮೇಘಸಂಭವಂ ॥ ೨೮ ॥

ವಜ್ರಂ ಪಾರ್ವತಸಂಜ್ಞಂ ಚ ತಥಾ ವಾಯವ್ಯಸಂಜ್ಞಿತಂ ।
ಇತ್ಯಾದಿಕಾನಾಮಸ್ತ್ರಾಣಾಂ ಸಂಪ್ರಯೋಗವಿಸರ್ಗವಿತ್ ॥ ೨೯ ॥

ಸ ಏವ ನಿಜಸೈನ್ಯಾನಾಮಕ್ಷೌಹಿಣ್ಯೈಕಯಾ ಯುತಃ ।
ಯಾತು ಶೂರಾಗ್ರ್ಯಮುಕುಟಃ ಸರ್ವವೈರಿಪ್ರಭಂಜನಃ ॥ ೩೦ ॥

---

೨೫. ಪ್ರತಾಪಾಗ್ರ್ಯನು ಕಪಟಿಗಳಾದ ಶತ್ರುವರ್ಗವನ್ನು ನಾಶಮಾಡಿದವನು. ಇವನು ಬಲಗೈ ಎಡಗೈಗಳೆರಡರಿಂದಲೂ ಬಾಣವನ್ನು ಬಿಡುತ್ತಾನೆ. ಸರ್ವಾಸ್ತ್ರ ಪ್ರಯೋಗಗಳನ್ನು ಬಲ್ಲವನು.

೨೬. ಇವನು ಇಪ್ಪತ್ತು ಅಕ್ಷೌಹಿಣೀ ಸೇನೆಗಳೊಡನೆ ಯಜ್ಞೀಯಾಶ್ವವನ್ನು ಕಾಪಾಡುವುದರಲ್ಲಿ ಸನ್ನದ್ಧನಾಗಿ ರಿಪುನಾಶಕ್ಕಾಗಿ ಹೊರಡಲಿ.

೨೭. ಈ ಲಕ್ಷ್ಮೀನಿಧಿಯೂ ಕೂಡ, ಉತ್ತಮವಾದ ವೀರನೇ. ಇವನು ತಪಸ್ಸಿನಿಂದ ಬ್ರಹ್ಮನನ್ನು ಒಲಿಸಿಕೊಂಡು ಅವನಿಂದ ಅಸ್ತ್ರಗಳನ್ನು ಕಲಿತಿರುವನು.

೨೮-೨೯. ಬ್ರಹ್ಮಾಸ್ತ್ರ, ಪಾಶುಪತ, ಗಾರುಡ, ಸರ್ಪಾಸ್ತ್ರ, ಮಾಯೂರ, ನಾಕುಲ, ರೌದ್ರ, ವೈಷ್ಣವ, ಮೇಘ, ವಜ್ರ, ಪರ್ವತ, ವಾಯವ್ಯ ಇವೇ ಮೊದಲಾದ ಅಸ್ತ್ರಗಳ ತ್ಯಾಗ ಉಪಸಂಹಾರಗಳನ್ನೂ ಬಲ್ಲನು.

೩೦. ಅವನಿಗೇನೇ ಒಂದು ಅಕ್ಷೌಹಿಣೀ ಸೈನ್ಯವಿದೆ. ಅವರೊಡನೆ ಅವನು ಹೊರಡಲಿ.

ರಿಪುತಾಪೋಽ ಯಮೇವಾದ್ಯ ಗಚ್ಛತ್ವಗ್ರ್ಯೇ ಧನುರ್ಭೃತಾಂ ।
ಸರ್ವಶಸ್ತ್ರಾಸ್ತ್ರಕುಶಲೋ ರಿಪುವಂಶದವಾನಲಃ ॥ ೩೧ ॥

ಗಚ್ಛತಾತ್ಸೇನಯಾ ತ್ವದ್ಯ ಚತುರಂಗಸಮೇತಯಾ ।
ಶತ್ರುಘ್ನಾಜ್ಞಾಂ ಶಿರಸ್ಯೇತೇ ದಧತ್ವದ್ಯ ಬಲೋತ್ಕಟಾಃ ॥ ೩೨ ॥

ಉಗ್ರಾಶ್ವೋಽಪಿ ಮಹಾರಾಜಸ್ತಥಾ ಶಸ್ತ್ರವಿದೇವ ಚ ।
ಸರ್ವೇ ಯಾಂತು ಸುಸಂನದ್ಧಾಸ್ತವ ವಾಹಸ್ಯ ಪಾಲಕಾಃ ॥ ೩೩ ॥

ಇತಿ ಭಾಷಿತಮಾಕರ್ಣ್ಯ ಮಂತ್ರಿಣಃ ಪ್ರಜಹರ್ಷ ಚ
ಆಜ್ಞಾಪಯಾಮಾಸ ಸ ತಾನ್ ಸುಮಂತ್ರಿಕಥಿತಾನ್ ಭಟಾನ್ ॥ ೩೪ ॥

ತೇಽನುಜ್ಞಾಂ ರಘುನಾಥಸ್ಯ ಪ್ರಾಪ್ಯ ಮೋದಂ ಪ್ರಪೇದಿರೇ ।
ಚಿರಕಾಲಂ ಸಾಂಪರಾಯಂ ವಾಂಛಂತೋ ಯುದ್ಧದುರ್ಮದಾಃ ॥ ೩೫ ॥

ಸಂನದ್ಧಾ ಕವಚಾದ್ಯೈಶ್ಚ ತಥಾ ಶಸ್ತ್ರಾಸ್ತ್ರವರ್ತನೈಃ ।
ಯಯುಃ ಶತ್ರುಘ್ನಸಂವಾಸಂ ಸೀತಾಪತಿಪ್ರಣೋದಿತಾಃ ॥ ೩೬ ॥

---

೩೧–೩೨. ಸರ್ವಶಸ್ತ್ರಕುಶಲನೂ, ಶೂರನೂ ಆದ ರಿಪುತಾಪನೂ ಸಹ ತನ್ನ ಚತುರಂಗಸೇನೆಯೊಡನೆ ಶತ್ರುಘ್ನನ ಅಪ್ಪಣೆಯಂತೆ ಕುದುರೆಯ ಜೊತೆಯಲ್ಲಿ ಹೊರಡಲಿ.

೩೩. ಉಗ್ರಾಶ್ವನೂ ಚೆನ್ನಾಗಿ ಶಸ್ತ್ರಗಳನ್ನು ಬಲ್ಲವನೇ ಆಗಿರುವನು. ಇವರೆಲ್ಲರೂ ನಿನ್ನ ಕುದುರೆಯನ್ನು ಕಾಪಾಡುತ್ತ ಹೊರಡಲಿ.

೩೪. ಮಂತ್ರಿಯು ಹೀಗೆ ಹೇಳಿದುದನ್ನು ಕೇಳಿ ಸಂತೋಷಗೊಂಡನು. ಅವನು ಹೇಳಿದಂತೆ ಅವರೆಲ್ಲರನ್ನೂ ಕರೆದು ಆಜ್ಞಾಪಿಸಿದನು.

೩೫. ಬಹಳ ಕಾಲದಿಂದಲೂ ಯುದ್ಧವನ್ನಪೇಕ್ಷಿಸುತ್ತಾ ಯುದ್ಧಸನ್ನದ್ಧರಾದ ಇವರು ರಾಮನ ಅಪ್ಪಣೆಯನ್ನು ಕೇಳಿ ಸಂತೋಷಗೊಂಡರು.

೩೬. ಅವರೆಲ್ಲರೂ ಕವಚ, ಅಸ್ತ್ರ, ಶಸ್ತ್ರಗಳಿಂದ ಸನ್ನದ್ಧರಾಗಿ ರಾಮನಿಂದ ಪ್ರೇರೇಪಿಸಲ್ಪಟ್ಟು ಶತ್ರುಘ್ನನೊಡನೆ ಸೇರಿ ಹೊರಟರು.

॥ ಶೇಷ ಉವಾಚ ॥

ಅಥೋಕ್ತ್ವಾ ಋಷಿಣಾ ರಾಮೋ ವಿಧಿನಾ ಪೂಜಯತ್ಸ ಹ ।
ಆಚಾರ್ಯಾದೀನ್ನೃಷೀಸ್ಸರ್ವಾನ್ ಯಥೋಕ್ತವರದಕ್ಷಿಣೈಃ ॥ ೩೭ ॥

ಆಚಾರ್ಯಾಯ ದದೌ ರಾಮೋ ಹಸ್ತಿನಂ ಷಷ್ಟಿಹಾಯನಂ ।
ಹಯಮೇಕಂ ಮನೋವೇಗಂ ರತ್ನಮಾಲಾಭಿಭೂಷಿತಂ ॥ ೩೮ ॥

ಪೌರಟಂ ರಥಮೇಕಂ ಚ ಮಣಿರತ್ನವಿಭೂಷಿತಂ ।
ಚತುರ್ಭಿರ್ವಾಜಿಭಿರ್ಯುಕ್ತಂ ಸರ್ವೋಪಸ್ಕರಸಂಯುತಂ ॥ ೩೯ ॥

ಮಣಿಲಕ್ಷಂ ಚ ಪ್ರತ್ಯಕ್ಷಂ ಮುಕ್ತಾಫಲತುಲಾಶತಂ ।
ವಿದ್ರುಮಸ್ಯ ತುಲಾನಾಂ ತು ಸಹಸ್ರಂ ಸ್ಫುಟತೇಜಸಾಂ ॥ ೪೦ ॥

ಗ್ರಾಮಮೇಕಂ ಸುಸಂಪನ್ನಂ ನಾನಾಜನಸಮಾಕುಲಂ ।
ವಿಚಿತ್ರ ಸಸ್ಯನಿಷ್ಪನ್ನಂ ವಿವಿಧೈರ್ಮಂದಿರೈರ್ವೃತಂ ॥ ೪೧ ॥

ಬ್ರಹ್ಮಣೋಽಪಿ ತಥೈವಾದಾದ್ಧೋತ್ರೇಽಪ್ಯಧ್ವರ್ಯವೇ ಸ್ಮೃತಂ ।
ಋತ್ವಿಗ್ಭ್ಯೋ ಭೂರಿಶೋ ದತ್ವಾ ಪ್ರಣನಾಮ ರಘೂತ್ತಮಃ ॥ ೪೨ ॥

---

೩೭. ಬಳಿಕ ಋಷಿಯ ಮಾತಿನಂತೆ ಋತ್ವಿಕ್ಕುಗಳಿಗೆ ಯೋಗ್ಯವಾದ ದಕ್ಷಿಣೆಯನ್ನು ಕೊಟ್ಟು ರಾಮನು ಪೂಜಿಸಿದನು.

೩೮-೪೧. ಅರವತ್ತು ವರ್ಷದ ಒಂದಾನೆ, ಒಳ್ಳೆಯ ಕುದುರೆ, ನಾಲ್ಕು ಕುದುರೆಗಳನ್ನು ಕಟ್ಟಿರುವ ರಥಕ್ಕೆ ಬೇಕಾದ ಎಲ್ಲಾ ಪದಾರ್ಥಗಳಿಂದ ಸಿದ್ಧಪಡಿಸಿ, ರತ್ನಮಾಲೆಗಳಿಂದ ಅಲಂಕೃತವಾಗಿ, ಊರಿನಲ್ಲಿ ಓಡಾಡುವ ಮನೋಹರವಾದ ಒಂದು ರಥ, ಒಂದು ಲಕ್ಷ ಮಣಿಗಳು, ನೂರು ಪಲ ಮುತ್ತು, ಸಾವಿರ ಪಲ ಹವಳ, ಜನಗಳೂ, ಸಸ್ಯಗಳೂ, ಪರ್ವತಗಳೂ, ಉಳ್ಳ ಒಂದು ಉತ್ತಮವಾದ ಗ್ರಾಮ, ಇವಿಷ್ಟನ್ನೂ ಶ್ರೀರಾಮನು ಆಚಾರ್ಯನಿಗೆ ದಕ್ಷಿಣೆಯಾಗಿ ಕೊಟ್ಟನು.

೪೨. ಬ್ರಹ್ಮನಿಗೂ, ಹೋತೃವಿಗೂ, ಅಧ್ವರ್ಯುವಿಗೂ, ಋತ್ವಿಕ್ಕರುಗಳಿಗೂ, ಅದೇರೀತಿ ಬಹುವಾಗಿ ದಕ್ಷಿಣೆಯನ್ನು ಕೊಟ್ಟು ರಾಮನು ನಮಸ್ಕರಿಸಿದನು.

**ಸರ್ವೇ ತೇಽ ವರ್ಧಯನ್ವಾಗ್ಭಿರಾಶೀರ್ಭಿರಭಿಪೂಜಿತಾಃ ।**
**ಚಿರಂ ಜೀವ ಮಹಾರಾಜ ರಾಮಚಂದ್ರ ರಘೂದ್ವಹ ॥ ೪೩ ॥**

**ಕನ್ಯಾದಾನಂ ಭೂಮಿದಾನಂ ಗಜದಾನಂ ತಥೈವ ಚ ।**
**ಅಶ್ವದಾನಂ ಸ್ವರ್ಣದಾನಂ ತಿಲದಾನಂ ಸಮೌಕ್ತಿಕಂ ॥ ೪೪ ॥**

**ಅನ್ನದಾನಂ ಪಯೋದಾನಮಭಯದಾನಮೇವ ಚ ।**
**ರತ್ನದಾನಾನಿ ಸರ್ವಾಣಿ ವಿಪ್ರೇಭ್ಯಶ್ಚಾದಿಶನ್ಮಹಾನ್ ॥ ೪೫ ॥**

**ದೇಹಿ ದೇಹಿ ಧನಂ ದೇಹಿ ಮಾ ನೇತಿ ಬ್ರೂಹಿ ಕಸ್ಯಚಿತ್ ।**
**ದದಾತ್ವನ್ನಂ ದದಾತ್ವನ್ನಂ ಸರ್ವಭೋಗಸಮನ್ವಿತಂ ॥ ೪೬ ॥**

**ಇತ್ಥಂ ಪ್ರಾವರ್ತತ ಮಖೋ ರಘುನಾಥಸ್ಯ ಧೀಮತಃ ।**
**ಸದಕ್ಷಿಣೈರ್ದ್ವಿಜವರೈಃ ಪೂರ್ಣಃ ಸರ್ವಶುಭಕ್ರಿಯಃ ॥ ೪೭ ॥**

---

೪೩. ಎಲ್ಲರೂ ಕೂಡ ರಾಮಚಂದ್ರನನ್ನು ಚಿರಜೀವಿಯಾಗೆಂದು ಆಶೀರ್ವದಿಸಿದರು.

೪೪-೪೫. ಕನ್ಯಾದಾನ, ಭೂದಾನ, ಗಜದಾನ, ಅಶ್ವದಾನ, ಸ್ವರ್ಣದಾನ, ಮುತ್ತಿನಿಂದ ಕೂಡಿದ ತಿಲದಾನ, ಮುತ್ತಿನದಾನ, ಅನ್ನದಾನ, ಉದಕದಾನ, ಅಭಯದಾನ, ರತ್ನದಾನ ಇವೇ ಮುಂತಾದ ಅನೇಕ ದಾನಗಳನ್ನು ಬ್ರಾಹ್ಮಣರಿಗೆ ಕೊಟ್ಟನು.

೪೬. ಆ ಯಜ್ಞಸಮಾರಂಭದಲ್ಲಿ ದಾನಗಳನ್ನು ಕೊಡುತ್ತಿರುವಾಗ ರಾಜನ ಕಡೆಯವರು ಬ್ರಾಹ್ಮಣರಿಗೆ ಹಣವನ್ನು ಕೊಡು, ಕೊಡು ಎಂದು ಒಬ್ಬರಿಗೊಬ್ಬರಿಗೆ ಹೇಳುವ ಶಬ್ದವೇ ಕೇಳಿಬರುತ್ತಿತ್ತು. ಇನ್ನು ಸಾಕು, ಕೊಡಬೇಡವೆಂದು ತಡೆಯುವವರಾರೂ ಅಲ್ಲಿ ಇರಲಿಲ್ಲ. ಅದರಂತೆಯೇ ಬ್ರಾಹ್ಮಣಸಂತರ್ಪಣೆಯಲ್ಲಿ ಷಡ್ರಸೋಪೇತವಾದ ಮೃಷ್ಟಾನ್ನವನ್ನು ಜನರಿಗೆ ಯಥೇಚ್ಛವಾಗಿ ಬಡಿಸಿ ಎಂಬ ಶಬ್ದವು ಕಿವಿದಾ. ಬಂದವರಿಗೆ ಅನ್ನ ಹಾಕಬೇಡಿ ಎಂದು ಯಾರೂ ಹೇಳುತ್ತಿರಲಿಲ್ಲ.

೪೭. ಈರೀತಿ ರಾಮನು ಮಾಡಿದ ಯಜ್ಞವು ದಕ್ಷಿಣೆಗಳಿಂದ ಪೂರ್ಣವಾಗಿಯೂ, ಶುಭಕ್ರಿಯೆಯುಳ್ಳದ್ದಾಗಿಯೂ ನಡೆಯಿತು.

ಅಥ ರಾಮಾನುಜೋ ಗತ್ವಾ ಮಾತರಂ ಪ್ರಣನಾಮ ಹ ।
ಆಜ್ಞಾಪಯಸ್ವ ರಕ್ಷಾರ್ಥಮೇಷ ಗಚ್ಛಾಮಿ ಶೋಭನೇ ॥ ೪೮ ॥

ತ್ವತ್ಪ್ರಸಾದೋ ರಿಪುಕುಲಂ ಜಿತ್ವಾ ಶೋಭಾಸಮನ್ವಿತಃ ।
ಆಯಾಸ್ಯಾಮಿ ಮಹಾರಾಜ್ಞೈರ್ಹಯವರ್ಯಸಮನ್ವಿತಃ ॥ ೪೯ ॥

॥ ಮಾತೋವಾಚ ॥

ಪುತ್ರ ಗಚ್ಛ ಮಹಾವೀರ ಶಿವಾಃ ಪಂಥಾನ ಏವ ತೇ ।
ಸರ್ವಾನ್ ರಿಪುಗಣಾನ್ ಜಿತ್ವಾ ಪುನರಾಗಚ್ಛ ಸನ್ಮತೇ ॥ ೫೦ ॥

ಪುಷ್ಕಲಂ ಪಾಲಯ ನಿಜಭ್ರಾತೃಜಂ ಧರ್ಮವಿತ್ತಮಂ ।
ಮಹಾಬಲಿನಮಪ್ಯಾಪಿ ಬಾಲಕಂ ಲೀಲಯಾ ಯುತಂ ॥ ೫೧ ॥

ಪುತ್ರಾಗಚ್ಛಸಿ ಚೇದ್ಯುಕ್ತಃ ಪುಷ್ಕಲೇನ ಶುಭಾನ್ವಿತಃ ।
ತದಾ ಮಮ ಪ್ರಮೋದಃ ಸ್ಯಾತ್ತ್ವನ್ಯಥಾ ಶೋಕಭಾಗಿನೀ ॥ ೫೨ ॥

---

೪೮. ಆಮೇಲೆ ಶತ್ರುಘ್ನನು ತಾಯಿಯ ಬಳಿಗೆ ಹೋಗಿ ಅಮ್ಮಾ! ನಾನು ಕುದುರೆಯ ರಕ್ಷಣೆಗೆ ಹೋಗುತ್ತೇನೆ ನನಗೆ ಆಜ್ಞೆಕೊಡು.

೪೯. ನಿನ್ನ ಕೃಪೆಯಿಂದ ಶತ್ರುಗಳನ್ನೆಲ್ಲಾ ಜಯಿಸಿ ಕುದುರೆಯನ್ನು ತೆಗೆದು ಕೊಂಡು ಮತ್ತೆ ತಿರುಗಿ ಬರುತ್ತೇನೆ ಎಂದು ಹೇಳಿ ನಮಸ್ಕರಿಸಿದನು.

೫೦. ತನ್ನ ಅಪ್ಪಣೆಯನ್ನು ಬೇಡುತ್ತಿರುವ ಪುತ್ರನನ್ನು ಕುರಿತು ಅವನ ತಾಯಿಯು ಪುತ್ರನೇ, ನಿನಗೆ ದಾರಿಯಲ್ಲಿ ಮಂಗಳವಾಗಲಿ. ಶತ್ರುಗಳನ್ನೆಲ್ಲಾ ಜಯಿಸಿ ಒಳ್ಳೆಯ ಬುದ್ಧಿಯಿಂದ ಬಾರಪ್ಪ.

೫೧. ನಿನ್ನ ಅಣ್ಣನ ಮಗನಾದ ಪುಷ್ಕಲನನ್ನು ನೋಡಿಕೋ. ಅವನು ಮಹಾ ಬಲಶಾಲಿಯು. ಆದರೆ ಹುಡುಗಾಟ ಹೆಚ್ಚು.

೫೨. ಎಲೈ ಪುತ್ರನೇ, ನೀನು ಪುಷ್ಕಲನೊಡನೆ ಕಾರ್ಯಸಾಧನೆ ಮಾಡಿ ಕೊಂಡು ಕ್ಷೇಮವಾಗಿ ಹಿಂದಕ್ಕೆ ಬಂದರೆ ನನಗೆ ಬಹಳ ಸಂತೋಷವಾಗುತ್ತದೆ. ಇಲ್ಲ ದಿದ್ದರೆ ಬಹು ದುಃಖವುಂಟಾಗುತ್ತದೆ ಎಂದಳು.

ಇತಿ ಸಂಭಾಷಮಾಣಾಂ ಸ್ವಾಂ ಮಾತರಂ ಪ್ರತ್ಯುವಾಚ ಸಃ ।
ಪುಷ್ಕಲಂ ಪಾಲಯಿತ್ವಾಹಂ ನಿಜಾಂಗಮಿವ ಶೋಭನೇ ॥ ೫೩ ॥

ಸ್ವನಾಮಸದೃಶಂ ಕೃತ್ವಾ ಪುನರೇಷ್ಯಾಮಿ ಮೋದವಾನ್ ।
ತ್ವದೀಯಚರಣದ್ವಂದ್ವಂ ಸ್ಮರನ್ ಪ್ರಾಪ್ಸ್ಯಾಮಿ ಶೋಭನಂ ॥ ೫೪ ॥

ಇತ್ಯುಕ್ತ್ವಾ ಪ್ರಯಯೌ ವೀರೋ ರಾಮಂ ಸ ಮುಖಮಂಟಪೇ ।
ಆಸೀನಂ ಮುನಿವರ್ಯಾದ್ಯೈರ್ಮುನಿವೇಷಧರಂ ಪರಂ ॥ ೫೫ ॥

ಉವಾಚ ಮತಿಮಾನ್ ವೀರಃ ಸರ್ವಶೋಭಾಸಮನ್ವಿತಃ ।
ರಾಮಾಜ್ಞಾಪಯ ರಕ್ಷಾರ್ಥಂ ಹಯಸ್ಯಾನುಜ್ಞಯಾ ತವ ॥ ೫೬ ॥

ರಘುನಾಥೋಽಪಿ ತಚ್ಛ್ರುತ್ವಾ ಭದ್ರಮಸ್ತ್ವಿತಿ ಚಾಬ್ರವೀತ್ ।
ಬಾಲಂ ಸ್ತ್ರೀಯಂ ಪ್ರಮತ್ತಂ ತ್ವಂ ಮಾ ಹನ್ಯಾಶ್ಯಸ್ತ್ರವರ್ಜಿತಂ ॥ ೫೭ ॥

ತದಾ ಲಕ್ಷ್ಮೀನಿಧಿರ್ಭ್ರಾತಾ ಜಾನಕ್ಯಾ ಜನಕಾತ್ಮಜಃ ।
ಪ್ರಹಸ್ಯ ಕಿಂಚಿನ್ನಯನೇ ನರ್ತಯನ್ ರಾಮಮಬ್ರವೀತ್ ॥ ೫೮ ॥

---

೫೩-೫೪. ಈರೀತಿ ಹೇಳಿದ ತಾಯಿಗೆ ನಮಸ್ಕರಿಸಿ, ಅಮ್ಮ, ಪುಷ್ಕಲನನ್ನು ನನ್ನ ಸ್ವಂತ ಶರೀರದಂತೆ ಕಾಪಾಡುತ್ತಾ ನನ್ನ ಹೆಸರಿಗೆ ತಕ್ಕಂತೆ ಶತ್ರುಗಳನ್ನು ಕೊಂದು, ನಿನ್ನ ಪಾದಗಳನ್ನು ಸ್ಮರಿಸುತ್ತಾ ಇಲ್ಲಿಗೆ ಬಂದುಸೇರುತ್ತೇನೆ ಎಂದು

೫೫. ತಾಯಿಗೆ ಹೇಳಿ, ಮುನಿವೇಷವನ್ನು ಧರಿಸಿ ಯಾಗಮಾಡುತ್ತಾ ಮುನಿಗಳೊಡನೆ ಕುಳಿತಿರುವ ರಾಮನ ಬಳಿಗೆ ಬಂದು,

೫೬. ಎಲೈ ರಾಮಚಂದ್ರನೇ, ಕುದುರೆಯನ್ನು ಕಾಪಾಡಲು ನಿನ್ನ ಅನುಮತಿಯಿಂದ ಹೋಗುತ್ತೇನೆ. ನನಗೆ ಅಪ್ಪಣೆಕೊಡು ಎಂದು ಪ್ರಾರ್ಥಿಸಿದನು.

೫೭. ರಾಮನು ಅದನ್ನು ಕೇಳಿ, ನಿನಗೆ ಮಂಗಳವಾಗಲಿ ಎಂದು ಹರಸಿ ಬಾಲನನ್ನೂ, ಸ್ತ್ರೀಯನ್ನೂ, ಶಸ್ತ್ರವಿಲ್ಲದಿರುವವನನ್ನೂ ಕೊಲ್ಲಬೇಡವೆಂದನು.

೫೮. ಆಗ ಸೀತೆಯ ತಮ್ಮನಾದ ಲಕ್ಷ್ಮೀನಿಧಿಯು ಮುಗುಳ್ನಗೆ ನಕ್ಕು ಸ್ವಲ್ಪ ವ್ಯಂಗ್ಯಭಾವದಿಂದ ರಾಮನನ್ನು ಕುರಿತು ಇಂತೆಂದನು.

ಲಕ್ಷ್ಮೀನಿಧಿರುವಾಚ ॥

ರಾಮಚಂದ್ರ ಮಹಾಬಾಹೋ ಸರ್ವಧರ್ಮಪರಾಯಣ ।
ಶತ್ರುಘ್ನಂ ಶಿಕ್ಷಯ ತಥಾ ಯಥಾ ಲೋಕೋತ್ತರೋ ಭವೇತ್ ॥ ೫೯ ॥

ಕುಲೋಚಿತಂ ಕರ್ಮ ಕುರ್ವನ್ನಗ್ರಜಾಚರಿತಂ ತಥಾ ।
ಗಚ್ಛೇತ್ಸ ಪರಮಂ ಧಾಮ ತೇಜೋಬಲಸಮನ್ವಿತಂ ॥ ೬೦ ॥

ತ್ವಯಾ ಪ್ರೋಕ್ತಂ ಮಹಾರಾಜ ಬ್ರಾಹ್ಮಣಂ ನಾವಮಾನಯೇತ್ ।
ಪಿತ್ರಾ ತವ ಹತೋ ವಿಪ್ರಃ ಪಿತೃಭಕ್ತಿಪರಾಯಣಃ ॥ ೬೧ ॥

ತ್ವಯಾಪಿ ಸುಮಹತ್ಕರ್ಮ ಶ್ರುತಂ ಲೋಕೇ ವಿಗರ್ಹಿತಂ ।
ಅವಧ್ಯಾಂ ಮಹಿಳಾಂ ಯಸ್ತ್ವಂ ಹತವಾನ್ನಿಯತಂ ತತಃ ॥ ೬೨ ॥

ಅಗ್ರಜೋಽಸ್ಯ ಮಹಾರಾಜ ಕೃತವಾನ್ಯಂ ಪರಾಕ್ರಮಂ ।
ಸ ನ ಕೇನ ಕೃತಃ ಪೂರ್ವಂ ರಾಕ್ಷಸ್ಯಾಃ ಕರ್ಣಕರ್ತನಂ ॥ ೬೩ ॥

---

೫೯. ಲಕ್ಷ್ಮೀನಿಧಿಯು ಹೇಳಿದನು :—ಮಹಾಬಾಹುವಾದ ರಾಮಚಂದ್ರನೇ, ಶತ್ರುಘ್ನನು ಸರ್ವೋತ್ತಮನಾಗುವಂತೆ ಅವನಿಗೆ ಬುದ್ಧಿಕಲಿಸು.

೬೦. ಯಾವನು ಹಿಂದಿನವರು ಮಾಡಿದ ಕುಲೋಚಿತವಾದ ಕೆಲಸಗಳನ್ನು ಮಾಡುತ್ತಾನೆಯೋ ಅಂತಹವನು ಸ್ವರ್ಗವನ್ನು ಹೊಂದುತ್ತಾನೆ.

೬೧. ನೀನು ಬ್ರಾಹ್ಮಣನಿಗೆ ಅವಮಾನಮಾಡಬೇಡವೆಂದು ಹೇಳಿದೆಯಷ್ಟೆ. ಹಿಂದೆ ನಿನ್ನ ತಂದೆಯು ಪಿತೃಭಕ್ತನಾದ ಒಬ್ಬ ಬ್ರಾಹ್ಮಣನನ್ನು ಕೊಂದನು.

೬೨-೬೩. ನೀನೂ ಕೂಡ ಬ್ರಾಹ್ಮಣನಾದ ರಾವಣನನ್ನು ಕೊಂದಿರುವುದು ಪ್ರಪಂಚಕ್ಕೇ ಗೊತ್ತಿದೆ. ಅಲ್ಲದೇ ಹೆಂಗಸಾದ ತಾಟಕಿಯನ್ನೂ ನೀನು ಕೊಂದಿದ್ದೀಯೆ. ಮತ್ತು ಶೂರ್ಪಣಕಿಯ ಕಿವಿ ಮೂಗುಗಳನ್ನು ಕುಯ್ದು ಅವಮಾನಪಡಿಸಿದ್ದೀಯೆ. ಅಣ್ಣನು ಮಾಡಿದ ಇಂತಹ ಪರಾಕ್ರಮವನ್ನು ಅವನೂ ಮಾಡಿ ತೋರಿಸಬೇಕಲ್ಲವೆ ?

ಏವಂ ಕರಿಷ್ಯತಿ ನೃಪ ಶತ್ರುಘ್ನಃ ಶಿಕ್ಷಯಾ ತವ ।
ಯದಿ ನಾಯಂ ತಥಾ ಕುರ್ಯಾತ್ಕುಲಸ್ಯಾಸದೃಶಂ ಭವೇತ್ ॥ ೬೪ ॥

ಇತ್ಯುಕ್ತವಂತಂ ತಂ ರಾಮಃ ಪ್ರತ್ಯುವಾಚ ಹಸನ್ನಿವ ।
ಮೇಘಗಂಭೀರಯಾ ವಾಚಾ ಸರ್ವವಾಕ್ಯವಿಶಾರದಃ ॥ ೬೫ ॥

ಯೂಯಂ ತು ಯೋಗಿನಃ ಶಾನ್ತಾಃ ಸಮದುಃಖಸುಖಾಃ ಪುನಃ ।
ಜಾನಂತ್ಯಪಾರಸಂಸಾರನಿಸ್ತಾರತರಣಾದಿಕಂ ॥ ೬೬ ॥

ಯೇ ಶೂರಾಃ ಸುಮಹೇಷ್ವಾಸಾಃ ಸರ್ವಶಸ್ತ್ರಾಸ್ತ್ರಕೋವಿದಾಃ ।
ತೇ ಜಾನಂತಿ ನಿಯುದ್ಧಸ್ಯ ವಾರ್ತಾಂ ನ ತು ಭವಾದೃಶಾಃ ॥ ೬೭ ॥

ಪರೋಪತಾಪಿನೋ ಯೇ ವೈ ಯೇ ಚೋತ್ಪಥವಿಸಾರಿಣಃ ।
ತೇ ಹನ್ತವ್ಯಾ ನೃಪೈಸ್ಸರ್ವೈಃ ಸರ್ವಲೋಕಹಿತೈಷಿಭಿಃ ॥ ೬೮ ॥

ಇತ್ಯುಕ್ತಮಾಕರ್ಣ್ಯ ಸಭಾಸದಸ್ತೇ
ಸರ್ವೇ ಸ್ಮಿತಂ ಚಕ್ರುರರಿಂದಮಸ್ಯ ।
ಕುಂಭೋದ್ಭವಃ ಪೂಜಿತಮೇನಮಶ್ವಂ
ವಿಮೋಚಯಾಮಾಸ ಸುಶೋಭಿತಂ ಹಿ ॥ ೬೯ ॥

---

೬೪-೬೫. ಎಲೈ ದೊರೆಯೆ, ಶತೃಘ್ನನೂ ಹಾಗೆಯೇ ಮಾಡುತ್ತಾನೆ. ಅವನು ಹಾಗೆ ಮಾಡದಿದ್ದರೆ ಕುಲಕ್ಕೆ ತಕ್ಕಂತೆ ಮಾಡಿದಂತಾಗುವುದಿಲ್ಲವಷ್ಟೆ? ಎಂದು ಕುಚೇಷ್ಟೆಯಿಂದ ಮಾತನಾಡಲು, ಮೈದುನನ್ನು ಕುರಿತು ನಗುತ್ತಾ ರಾಮನು ಹೇಳಿದನು.

೬೬-೬೭. ಅಯ್ಯಾ! ಯೋಗಿಗಳೂ, ದುಃಖಸುಖಗಳಲ್ಲಿ ಒಂದೇರೀತಿಯಾದವರೂ, ದೊಡ್ಡ ಸಂಸಾರವನ್ನು ದಾಟುವ ಬಗೆಯನ್ನು ತಿಳಿದಿರುವರು. ಯಾರು ಶಸ್ತ್ರಾಸ್ತ್ರಗಳಲ್ಲಿ ಪಂಡಿತರೋ, ಶೂರರೋ, ಅವರು ಯುದ್ಧಸಮಾಚಾರಗಳನ್ನು ಮಾತ್ರ ಬಲ್ಲರು. ನಿನ್ನಂತಹವರು ಏನುಬಲ್ಲರು?

೬೮. ಯಾರು ಪರರಿಗೆ ತೊಂದರೆಕೊಡುತ್ತಾರೆಯೋ, ಯಾರು ಮಿತಿಮೀರಿ ಹೋಗುತ್ತಾರೆಯೋ ಅವರೆಲ್ಲರನ್ನೂ, ಎಲ್ಲರಿಗೂ ಒಳ್ಳೆಯದಾಗಬೇಕೆಂದು ಕೋರುವವರು ಕೊಲ್ಲಬೇಕು ಎಂದನು.

೬೯. ಇದನ್ನು ಕೇಳಿ ಆ ಸಭಾಸದರೆಲ್ಲರೂ ನಕ್ಕರು. ಅಗಸ್ತ್ಯನು ಅಶ್ವವನ್ನು ಪೂಜಿಸಿಬಿಟ್ಟನು.

ಇಮಂ ಮಂತ್ರಂ ಸಮುಚ್ಚಾರ್ಯ ವಸಿಷ್ಠಃ ಕಲಶೋದ್ಭವಃ ।
ಕರಾಬ್ಜೇನ ಸ್ಪೃಶನ್ನಶ್ವಂ ಮುಮೋಚ ಜಯಕಾಂಕ್ಷಯಾ ॥ ೨೦ ॥

ವಾಜಿನ್ ಗಚ್ಛ ಯಥಾಲೀಲಂ ಸರ್ವತ್ರ ಧರಣೀತಲೇ ।
ಯಾಗಾರ್ಥಂ ಮೋಚಿತೋ ಯೇನ ಪುನರಾಗಚ್ಛ ಸತ್ವರಃ ॥ ೨೧ ॥

ಅಶ್ವಸ್ತು ಮೋಚಿತಸ್ಸರ್ವೈರ್ಭಟೈಃ ಶಸ್ತ್ರಾಸ್ತ್ರಕೋವಿದೈಃ ।
ಪರಿತಃ ಪ್ರಯಯೌ ಪ್ರಾಚೀಂ ದಿಶಂ ವಾಯುಜಯಾನ್ವಿತಃ ॥ ೨೨ ॥

ಪ್ರಚಚಾಲ ಬಲಂ ಸರ್ವಂ ಕಂಪಯದ್ಧರಣೀತಲಂ ।
ಶೇಷೋಽಪಿ ಕಿಂಚಿನ್ನತಯಾ ಫಣಯಾ ಧೃತವಾನ್ ಭುವಂ ॥ ೨೩ ॥

ದಿಶಃ ಪ್ರಸೇದುಃ ಪರಿತಃ ಕ್ಷ್ಮಾತಳಂ ಶೋಭಯಾನ್ವಿತಂ ।
ವಾಯುವಸ್ತಂ ತು ಶತ್ರುಘ್ನಂ ಪೃಷ್ಠತೋ ಮಂದಗಾಮಿನಃ ॥ ೨೪ ॥

---

೨೦-೨೧. ವಸಿಷ್ಠನೂ, ಅಗಸ್ತ್ಯನೂ ಅದನ್ನು ಸ್ಪರ್ಶಮಾಡುತ್ತಾ ಈ ಮಂತ್ರವನ್ನು ಹೇಳಿ ಎಲೈ ಕುದುರೆಯೇ, ಸಂತೋಷದಿಂದ ನಿನಗೆ ಇಷ್ಟಬಂದಂತೆ ಭೂಮಿಯಲ್ಲಿ ಎಲ್ಲಾ ಕಡೆಗೂ ಹೋಗಿ ನಿನ್ನನ್ನು ಯಜ್ಞಕ್ಕೋಸ್ಕರ ಯಾವನು ಬಿಟ್ಟಿದ್ದಾನೆಯೋ ಅವನ ಬಳಿಗೆ ಜಾಗ್ರತೆ ಹಿಂತಿರುಗಿ ಬಾ ಎಂದುಹೇಳಿ ಆ ವೇಗವುಳ್ಳ ಕುದುರೆಯನ್ನು ಬಿಟ್ಟರು.

೨೨. ಬಳಿಕ ಆ ಕುದುರೆಯು ಶಸ್ತ್ರಾಸ್ತ್ರಗಳನ್ನು ಬಲ್ಲ ಭಟರಿಂದ ಸುತ್ತುವರಿಯಲ್ಪಟ್ಟು ವೇಗದಿಂದ ಮೊದಲು ಪೂರ್ವದಿಕ್ಕಿಗೆ ಹೋಯಿತು.

೨೩. ಸೈನ್ಯವೆಲ್ಲವೂ ಆ ಕುದುರೆಯನ್ನು ಹಿಂಬಾಲಿಸಿ ಹೊರಡಲು, ಆ ಸೈನ್ಯದ ಚಲನಕ್ಕೆ ಭೂಮಿಯು ನಡುಗುತ್ತಿತ್ತು. ಆದಿಶೇಷನೂ ಕೂಡ ಸ್ವಲ್ಪ ತಲೆಯನ್ನು ಬಗ್ಗಿಸಿ ಭೂಭಾರವನ್ನು ಧರಿಸಬೇಕಾಯಿತು.

೨೪. ಆಗ ದಿಕ್ಕುಗಳೆಲ್ಲಾ ಶುಭ್ರವಾಗಿದ್ದುವು. ಭೂಮಿಯು ಕಾಂತಿಯಿಂದ ಕೂಡಿದ್ದಿತು. ವಾಯುವು ಅದನ್ನು ಹಿಂದೆ ಅನುಸರಿಸಿ ಬೀಸಿತು.

ಶತ್ರುಘ್ನಸ್ಯ ಪ್ರಯಾಣಾಯಾಭ್ಯುದ್ಯತಸ್ಯ ಭುಜೋಽಸ್ಫುರತ್ ।
ದಕ್ಷಿಣಶ್ಶುಭಮಾಶಂಸೀ ಜಯಾಯ ಚ ಬಭೂವ ಹ ॥ ೭೫ ॥

ಪುಷ್ಕಲಸ್ಸ್ವಗೃಹಂ ರಮ್ಯಂ ಪ್ರವಿವೇಶ ಸಮೃದ್ಧಿಮತ್ ।
ವಿತ್ತರ್ಧಿಭಿರ್ವರಾಭೀಭಿಃ ಶೋಭಿತಂ ರತ್ನವೇದಿಕಂ ॥ ೭೬ ॥

ತತ್ರಾಪಶ್ಯನ್ನಿಜಾಂ ಭಾರ್ಯಾಂ ಪತಿವ್ರತಪರಾಯಣಾಂ ।
ಕಿಂಚಿತ್ಸ್ವದರ್ಶನಾದ್ಧೃಷ್ಟಾಂ ಭರ್ತೃದರ್ಶನಲಾಲಸಾಂ ॥ ೭೭ ॥

ಮುಖಾರವಿಂದೇನ ಚ ನಾಗವಲ್ಲೀ
ದಳಂ ಸ ಕರ್ಪೂರಕಮತ್ರ ಚರ್ವತೀ ।
ನಾನಾಫಲಂ ತೋಯಭವಂ ಮಹಾಧನಂ
ಬಾಹ್ವೋರ್ಮೃಣಾಳೀ ಸದೃಶೋಃ ಸುಕಂಕಣೇ ॥ ೭೮ ॥

ಕುಚೌ ತು ಮಾಲೂರಫಲೋಪಮೌ ವತಾ
ನಿತಂಬಬಿಂಬಂ ವಸನೀವಿಶೋಭಿತಂ ।
ಪಾದೌ ತುಲಾಕೋಟಿಧತಾ ಸುಕೋಮಲೌ
ದಧತ್ಯಹೋಽನ್ವೈಕ್ಷತ ಸಾ ಪತಿಂ ಸ್ವಕಂ ॥ ೭೯ ॥

---

೭೫. ಪ್ರಯಾಣಮಾಡುತ್ತಿರುವ ಶತ್ರುಘ್ನನ ಬಲಭುಜವು ಅದುರಿತು. ಅದು ಶುಭಸೂಚಕವೂ ಜಯಸೂಚಕವೂ ಆಗಿದ್ದಿತು.

೭೬. ಇತ್ತ ಪುಷ್ಕಲನು ಹಣದಿಂದಲೂ, ರತ್ನಾದಿಗಳಿಂದಲೂ ಕೂಡಿದ, ಸರ್ವ ಸಮೃದ್ಧಿಯುಳ್ಳ ತನ್ನ ಮನೆಗೆ ಹೋಗಿ,

೭೭. ಅಲ್ಲಿ ಪತಿವ್ರತೆಯಾದ ಹೆಂಡತಿಯನ್ನು ನೋಡಿದನು. ಆಕೆಯು ಇವನನ್ನು ಕಂಡು ಇವನನ್ನು ನೋಡಬೇಕೆಂಬಾಸೆಯಲ್ಲಿದ್ದುದರಿಂದ ಸ್ವಲ್ಪ ಸಂತೋಷಗೊಂಡಳು.

೭೮-೮೧. ಆ ವನಿತೆಯ ಮುಖಕಮಲವು ಕರ್ಪೂರಾದಿಮಿಶ್ರಿತವಾದ ಘಮಘಮಿಸುವ ತಾಂಬೂಲಚರ್ವಣದಿಂದ ಕೆಂಪಾಗಿ ಪ್ರಕಾಶಿಸುತ್ತಿತ್ತು. ತಾವರೆ ದಂಟಿನಂತೆ ಕೋಮಲವಾದ ಕೈಗಳಲ್ಲಿ ರತ್ನಕಂಕಣಗಳನ್ನು ಧರಿಸಿದ್ದಳು. ಕುಚಗಳು ಬಿಲ್ವಫಲದಂತೆ ದುಂಡಾಗಿ ಒಪ್ಪುತ್ತಿದ್ದವು. ನಡುವಿನಲ್ಲಿ ಉತ್ತಮವಾದ ಗೆಜ್ಜೆಯ

ಪರಿರಭ್ಯ ಪ್ರಿಯಾಂ ಧೀರೋ ಗದ್ಗದಸ್ವರಭಾಷಿಣೀಂ ।
ತದುರೋಜಪರೀರಂಭನಿರ್ಭರೀಕೃತದೇಹಕಾಂ ॥ ೮೦ ॥

ಉವಾಚ ಭದ್ರೇ ಗಚ್ಛಾಮಿ ಶತ್ರುಘ್ನಪೃಷ್ಠರಕ್ಷಕಃ ।
ರಾಮಾಜ್ಞಯಾ ಯಾಜ್ಞಮಶ್ವಂ ಪಾಲಯನ್ ರಥಸಂಯುತಃ ॥ ೮೧ ॥

ತ್ವಯಾ ಮೇ ಮಾತರಃ ಪೂಜ್ಯಾಃ ಪಾದಸಂವಾಹನಾದಿಭಿಃ ।
ತದುಚ್ಛಿಷ್ಟಂ ಹಿ ಭುಂಜಾನಾ ತತ್ಕರ್ಮಕರಣಾದರಾ ॥ ೮೨ ॥

ಸರ್ವಾಃ ಪತಿವ್ರತಾ ನಾರ್ಯೋ ಲೋಪಾಮುದ್ರಾದಿಕಾಶ್ಶುಭಾಃ ।
ನಾವಮಾನ್ಯಾಸ್ತ್ವಯಾ ಭೀರು ಸ್ವತಪೋಬಲಶೋಭಿತಾಃ ॥ ೮೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ಶ್ರೀ ರಾಮಾಶ್ವಮೇಧೇ ಹಯಮೋಚನಂ ನಾಮ
ಏಕಾದಶೋಽಧ್ಯಾಯಃ

---

ಹಾಬು ಕಂಗೊಳಿಸುತ್ತಿತ್ತು. ಅವಳ ಪಾದಗಳು ಬಹು ಕೋಮಲವಾಗಿದ್ದವು. ಇಂತಹ ಸುಂದರಾಂಗಿಯು ತನ್ನ ಪ್ರಿಯನು ಬಂದನೆಂದು ಸಂತೋಷಗೊಂಡು ಗದ್ಗದಸ್ವರದಿಂದ ಮಾತನಾಡುತ್ತಿರಲು, ಪುಷ್ಕಲನನ್ನು ಆಕೆಯನ್ನು ಪ್ರೀತಿಯಿಂದ ಆಲಂಗಿಸಿ, ಭದ್ರೆಯೇ, ಶತ್ರುಘ್ನನನ್ನು ಅನುಸರಿಸಿ ಕಾಪಾಡುತ್ತಾ ಹೋಗುತ್ತೇನೆ. ರಾಮಾಜ್ಞೆಯಿಂದ ರಥದ ಮೇಲೆ ಕುಳಿತು ಯಜ್ಞಾಶ್ವವನ್ನು ಕಾಪಾಡುತ್ತಾ ಹೋಗುತ್ತೇನೆ.

೮೨-೮೩. ನೀನು ನನ್ನ ತಾಯಿಯನ್ನು, ಕೈಕಾಲು ಅಮುಕುವುದೇ ಮೊದಲಾದವುಗಳಿಂದ ಸೇವಿಸುತ್ತಾ, ಅವಳು ಊಟಮಾಡಿ ಮಿಕ್ಕುದನ್ನು ಊಟಮಾಡುತ್ತಾ, ಅವಳು ಹೇಳಿದ ಕೆಲಸವನ್ನು ಮಾಡಿಕೊಂಡಿರು. ನೀನು ಪತಿವ್ರತೆಯರಾದ ಲೋಪಾಮುದ್ರಾದಿಗಳನ್ನು ನಿನ್ನ ನಡತೆಯಿಂದ ಗೌರವಿಸು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ಶ್ರೀ ರಾಮಾಶ್ವಮೇಧಕಥನದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವಾದಶೋಽಧ್ಯಾಯಃ

---

॥ ಶೇಷ ಉವಾಚ ॥

ಇತ್ಯುಕ್ತವನ್ತಂ ಸ್ವಪತಿಂ ವೀಕ್ಷ್ಯ ಪ್ರೇಮ್ಣಾ ಸುನಿರ್ಭರಾ ।
ಪ್ರತ್ಯುವಾಚ ಹಸನ್ತೀವ ಕಿಚಿದ್ಗದ್ಗದಭಾಷಿಣೀ ॥ ೧ ॥

ನಾಥ ತೇ ವಿಜಯೋ ಭೂಯಾತ್ಸರ್ವತ್ರ ರಣ ಮಂಡಲೇ ।
ಶತ್ರುಘ್ನಾಜ್ಞಾ ಪ್ರಕರ್ತವ್ಯಾ ಹಯರಕ್ಷಾ ಯಥಾ ಭವೇತ್ ॥ ೨ ॥

ಸ್ಮರಣೀಯಾ ಹಿ ಸರ್ವತ್ರ ಸೇವಿಕಾ ತ್ವತ್ಪದಾನುಗಾ ।
ಕದಾಪಿ ಮಾನಸಂ ನಾಥ ತ್ವತ್ತೋ ನಾನ್ಯತ್ರ ಗಚ್ಛತಿ ॥ ೩ ॥

---

## ಹನ್ನೆರಡನೆಯ ಅಧ್ಯಾಯವು

೧. ಶೇಷನು ಹೇಳಿದನು:—ಹೀಗೆ ಹೇಳಿದ ತನ್ನ ಗಂಡನನ್ನು ಕುರಿತು ಪ್ರೇಮದಿಂದ ನಗುತ್ತ ಗದ್ಗದಸ್ವರದಿಂದ ಇಂತೆಂದಳು.

೨. ನಾಥನೇ, ನಿನಗೆ ಯುದ್ಧಗಳಲ್ಲೆಲ್ಲಾ ಜಯವಾಗಲಿ. ಕುದುರೆಯನ್ನು ಕಾಪಾಡುತ್ತಾ ಶತ್ರುಘ್ನನ ಅಪ್ಪಣೆಯನ್ನು ಪಾಲಿಸು.

೩. ಯಾವಾಗಲೂ ಈ ಸೇವಕಿಯನ್ನು ಜ್ಞಾಪಿಸಿಕೊಳ್ಳುತ್ತಿರಬೇಕು. ನನ್ನ ಮನಸ್ಸು ಯಾವಾಗಲೂ ನಿನ್ನನ್ನು ಬಿಟ್ಟುಹೋಗುವುದೇ ಇಲ್ಲ.

ಪರಮಾಯೋಧನೇ ಕಾಂತ ಸ್ಮರ್ತವ್ಯಾಹಂ ನ ಜಾತುಚಿತ್ ।
ಸತ್ಯಾಂ ಮಯಿ ತವ ಸ್ವಾಂತೇ ಯುದ್ಧೇ ವಿಜಯಸಂಶಯಃ ॥ ೪ ॥

ಪದ್ಮನೇತ್ರ ತಥಾ ಕಾರ್ಯಮೂರ್ಮಿಳಾಯಾ ಯಥಾ ಮಮ ।
ಹಾಸ್ಯಂ ನೈವ ಪ್ರಕುರ್ವಂತಿ ಮಾಮೀಕ್ಷ್ಯ ಕರತಾಡನೈಃ ॥ ೫ ॥

ಇಯಂ ಪತ್ನೀ ಮಹಾಭೀರೋಃ ಸಂಗ್ರಾಮೇ ಪ್ರಪಲಾಯಿತುಃ ।
ಕಾತರಾ ಯರ್ಹಿ ಯುಧ್ಯಂತಿ ಶೂರಾಣಾಂ ಸಮಯಃ ಕೃತಃ ॥ ೬ ॥

ಇತ್ಯೇವಂ ನ ಹಸನ್ತ್ಯುಚ್ಚೈರ್ಯಥಾ ಮೇ ದೇವರಾಂಗನಾಃ ।
ತಥಾ ಕಾರ್ಯಂ ಮಹಾಬಾಹೋ ರಾಮಸ್ಯ ಹಯರಕ್ಷಣೇ ॥ ೭ ॥

ಯೋದ್ಧಾ ತ್ವಮಾವಾ ಸರ್ವತ್ರ ಪರೇ ಯೇ ತವ ಪೃಷ್ಠತಃ ।
ಧನುಷ್ಟಂಕಾರಬಧಿರಾಃ ಕ್ರಿಯಂತಾಂ ಬಲಿನಃ ಪರೇ ॥ ೮ ॥

---

೪. ಯುದ್ಧಮಾಡುತ್ತಿರುವಾಗ ಮಾತ್ರ ನನ್ನ ಸ್ಮರಣೆಯು ಬೇಡ. ನಾನು ನಿನ್ನ ಮನಸ್ಸಿನಲ್ಲಿ ಆಗ ಇದ್ದರೆ ನಿನಗೆ ಯುದ್ಧದಲ್ಲಿ ವಿಜಯವು ಸಂಶಯಾಸ್ಪದವಾಗುತ್ತದೆ.

೫. ಎಲೈ ಪದ್ಮನೇತ್ರನೇ, ಊರ್ಮಿಳೆಯನ್ನೂ, ನನ್ನನ್ನೂ ನೋಡಿ ಜನಗಳು ಚಪ್ಪಾಳೆಬಡಿದುಕೊಂಡು ಹಾಸ್ಯಮಾಡದಂತೆ ಮಾಡು.

೬. ಜನರು ನನ್ನನ್ನು ನೋಡಿ ಈಕೆಯು ಯುದ್ಧರಂಗದಿಂದ ಓಡಿಹೋದ ಆ ಹೇಡಿಯ ಹೆಂಡತಿ ಎನ್ನುತ್ತಾರೆ. ಹೆದರಿಕೊಂಡು ಯುದ್ಧಮಾಡುವವರಿಗೆ ಶೂರರ ನಿಯಮಗಳನ್ನು ಪಾಲಿಸಲಾಗುವುದಿಲ್ಲ.

೭. ಹೀಗೆಂದು ನನ್ನ ಓರಗಿತ್ತಿಯರು ಗಟ್ಟಿಯಾಗಿ ನಗುತ್ತಾ ಹಾಸ್ಯಮಾಡುವಂತೆ ಮಾಡಬೇಡ. ರಾಮನ ಕುದುರೆಯ ಕಾವಲಿನಲ್ಲಿ ನೀನು ಎಚ್ಚರಿಕೆಯಿಂದಿರು.

೮. ನೀನು ಮುಂದೆ ನುಗ್ಗಿ ಯುದ್ಧಮಾಡುತ್ತಿರಬೇಕು. ಮಿಕ್ಕವರೆಲ್ಲರೂ ಹಿಂದಿರಬೇಕು. ನಿನ್ನ ಧನುಸ್ಸಿನ ಟಂಕಾರದಿಂದ ಶೂರರು ಕಿವುಡಾಗುತ್ತಿರಬೇಕು.

ತವ ಪ್ರೋದ್ಯತ್ಕರಾಂಭೋಜಕರವಾಳಭಿಯಾ ಬಲಂ ।
ಪರೇಷಾಂ ಭವತಾತ್ ಕ್ಷಿಪ್ರಮನ್ಯೋನ್ಯಭಯಮಾಕುಲಂ ॥ ೯ ॥

ಕುಲಂ ಮಹತ್ತ್ವಲಂಕಾರ್ಯಂ ಪರಾನ್ವಿಜಯತಾ ತ್ವಯಾ ।
ಗಚ್ಛ ಸ್ವಾಮಿನ್ ಮಹಾಬಾಹೋ ತವ ಶ್ರೇಯೋ ಭವತ್ವಿಹ ॥ ೧೦ ॥

ಇದಂ ಧನುರ್ಗೃಹಾಣಾಶು ಮಹದ್ಗುಣವಿಭೂಷಿತಂ ।
ಯಸ್ಯ ಗರ್ಜಿತಮಾಕರ್ಣ್ಯ ವೈರಿವೃಂದಂ ಭಯಾತುರಂ ॥ ೧೧ ॥

ಇಮೌ ತೌ ತ್ವಿಷುಧೀ ವೀರ ಬಧ್ಯೇತಾಂ ಶಂ ಯಥಾ ಭವೇತ್ ।
ವೈರಿಕೋಟಿವಿನಿಷ್ಪೇಷಬಾಣಕೋಟಿಸುಪೂರಿತಂ ॥ ೧೨ ॥

ಕವಚಂ ತ್ವಿದಮಾಧೇಹಿ ಶರೀರೇ ಕಾಮಸುಂದರೇ ।
ವಜ್ರಪ್ರಭಾಮಹಾದೀಪ್ತಿಪತತಸಂತಮಸಂ ದೃಢಂ ॥ ೧೩ ॥

ಶಿರಸ್ತ್ರಾಣಂ ನಿಜೋತ್ತಂಸೇ ಕುರು ಕಾಂತ ಮನೋರಮಂ ।
ಇಮೇ ವಂತಸೇ ವಿಶದೇ ಮಣಿರತ್ನವಿಭೂಷಿತೇ ॥ ೧೪ ॥

---

೯. ನೀನು ಕೈಯಿಂದ ಕತ್ತಿ ಎತ್ತುವ ಬಗೆಯನ್ನು ನೋಡಿಯೇ ಶತ್ರುಗಳಿಗೆ ಭಯವುಂಟಾಗಬೇಕು.

೧೦. ಶತ್ರುಗಳನ್ನು ಗೆಲ್ಲುವುದರಿಂದ ಕುಲಕ್ಕೆ ಮಹತ್ವವನ್ನುಂಟುಮಾಡು. ಸ್ವಾಮಿ, ನೀನು ಇನ್ನು ಹೊರಡು. ನಿನಗೆ ಶ್ರೇಯಸ್ಸಾಗಲಿ.

೧೧. ಈ ಧನುಸ್ಸನ್ನು ಹಿಡಿದುಕೋ. ಇದು ಉತ್ತಮವಾದ ನಾವಿಯಿಂದ ಕಟ್ಟಲ್ಪಟ್ಟಿದೆ. ಇದರ ಧ್ವನಿಯನ್ನು ಕೇಳಿದಮಾತ್ರದಿಂದ ವೈರಿಗಳು ಭಯಪಡುತ್ತಾರೆ.

೧೨-೧೪. ಈ ಬತ್ತಳಿಕೆಯನ್ನು ಕಟ್ಟಿಕೋ. ಮಂಗಳವಾಗಲಿ. ಇವುಗಳಲ್ಲಿ ವೈರಿಗಳನ್ನು ಕೊಲ್ಲತಕ್ಕ ಮೊನೆಯಾದ ಅನೇಕ ಬಾಣಗಳು ತುಂಬಿವೆ. ಈ ಕವಚವನ್ನು ತೊಟ್ಟುಕೋ. ಇದು ವಜ್ರದಿಂದ ಪ್ರಕಾಶಮಾನವಾಗಿದೆ. ಮಣಿರತ್ನಗಳಿಂದ ಕೂಡಿದ ಜಡೆಯುಳ್ಳ ನಿನ್ನ ತಲೆಗೆ ಈ ಟೊಪ್ಪಿಗೆಯನ್ನು ಹಾಕಿಕೋ.

ಇತಿ ಸುವಿಮಲವಾಚಂ ವೀರಪುತ್ರೀಂ ಪ್ರಪಶ್ಯನ್
ನಯನಕಮಲದೃಷ್ಟ್ಯಾ ವೀಕ್ಷಮಾಣಸ್ತದಾ ತಾಂ ।
ಅಧಿಗತಪರಿಮೋದೋ ಭಾರತಿಃ ಶತ್ರುಜೇತಾ
ರಣಚರಣಸಮರ್ಥಸ್ತಾಂ ಜಗಾದಾಥ ವೀರಃ ॥ ೧೫ ॥

ಪುಷ್ಕಲ ಉವಾಚ ॥

ಕಾಂತೇ ಯಥಾ ತ್ವಂ ವದಸಿ ತಥಾ ಸರ್ವಂ ಚರಾಮ್ಯಹಂ ।
ವೀರಪತ್ನೀ ಭವೇತ್ಕೀರ್ತಿಸ್ತವ ಕಾಂತಿಮತೀಪ್ಸಿತಾ ॥ ೧೬ ॥

ಇತಿ ಕಾಂತಿಮತೀದತ್ತಂ ಕವಚಂ ಮುಕುಟಂ ವರಂ ।
ಧನುರ್ಮಹೇಷುಧೀ ವೀರಃ ಸರ್ವಂ ಜಗ್ರಾಹ ವೀರ್ಯವಾನ್ ॥ ೧೭ ॥

ಪರಿಧಾಯ ಚ ತತ್ಸರ್ವಂ ಬಭೌ ಶೋಭಾಸಮನ್ವಿತಃ ।
ಶುಶುಭೇಽತೀವ ಸುಭಟಃ ಸರ್ವಶಸ್ತ್ರಾಸ್ತ್ರಕೋವಿದಃ ॥ ೧೮ ॥

ತಮಸ್ತ್ರಶಸ್ತ್ರಶೋಭಾಢ್ಯಂ ವೀರಮಾಲಾವಿಭೂಷಿತಂ ।
ಕುಂಕುಮಾಗರುಕಸ್ತೂರೀಚಂದನಾದಿಕಚರ್ಚಿತಂ ॥ ೧೯ ॥

---

೧೫. ಈರೀತಿ ವೀರನಿಗೆ ಯೋಗ್ಯವಾದ ಮಾತುಗಳನ್ನಾಡುತ್ತಿರುವ ವೀರಪುತ್ರಿಯನ್ನು ಕಟಾಕ್ಷದಿಂದ ನೋಡುತ್ತಾ ಭರತಪುತ್ರನಾದ ಪುಷ್ಕಲನು ಸಂತೋಷಪಟ್ಟು ಯುದ್ಧದಲ್ಲಿ ಸಿದ್ಧನಾಗುತ್ತಾ ಇಂತೆಂದನು.

೧೬. ಕಾಂತೆಯೇ, ನೀನು ಹೇಳಿದಂತೆಯೇ ಮಾಡುತ್ತೇನೆ. ವೀರಪತ್ನಿಯಾದ ಎಲೌ ಕಾಂತಿಮತಿಯೇ ! ನಿನಗೆ ಕೀರ್ತಿಬರುವಂತೆ ಮಾಡುತ್ತೇನೆ.

೧೭. ಹೀಗೆಂದು ಕಾಂತಿಮತಿಯು ಕೊಟ್ಟ ಧನಸ್ಸು, ಕವಚ, ಕಿರೀಟ, ಬತ್ತಳಿಕೆ, ಎಲ್ಲವನ್ನೂ ತೆಗೆದುಕೊಂಡನು.

೧೮. ಆ ವಸ್ತ್ರಗಳೆಲ್ಲವನ್ನೂ ತೊಟ್ಟು ಆ ಶಸ್ತ್ರಪಂಡಿತನಾದ ಪುಷ್ಕಲನು ಕಾಂತಿಯಿಂದ ಪ್ರಕಾಶಿಸಿದನು.

೧೯-೨೧. ಆ ಪುಷ್ಕಲನು ಅಸ್ತ್ರ ಶಸ್ತ್ರಗಳನ್ನು ಧರಿಸಿ, ವೀರಮಾಲೆಯನ್ನು ಹಾಕಿಕೊಂಡು ಕುಂಕುಮ, ಅಗರು, ಕಸ್ತೂರಿ, ಚಂದನಗಳನ್ನು ಲೇಪಮಾಡಿಕೊಂಡು

ನಾನಾಕುಸುಮಮಾಲಾಭಿರಾಜಾನುಪರಿಶೋಭಿತಂ ।
ನೀರಾಜಯಾಮಾಸ ಮುಹುಸ್ತತ್ರ ಕಾಂತಿಮತೀ ಸತೀ ॥ ೨೦ ॥

ನೀರಾಜಯಿತ್ವಾ ಬಹುಳಃ ಕಿರನ್ತೀ ಮೌಕ್ತಿಕೈರ್ಮುಹುಃ ।
ಗಲದಶ್ರುಜಲಾಚೈವ ಪರಿರೇಭೇ ಪತಿಂ ನಿಜಂ ॥ ೨೧ ॥

ದೃಢಂ ಸ ಪರಿರಭ್ಯೈನಾಂ ಚಿರಮಾಶ್ವಾಸಯತ್ತದಾ ।
ವೀರಪತ್ನಿ ಕಾನ್ತಿಮತಿ ವಿರಹಂ ಮಾ ಕೃಥಾ ಮಮ ॥ ೨೨ ॥

ಏಷ ಗಚ್ಛಾಮಿ ಸವಿಧೇ ತವ ಭಾಮೇ ಪತಿವ್ರತೇ ।
ಇತ್ಯುಕ್ತ್ವಾ ತಾಂ ನಿಜಾಂ ಪತ್ನೀಂ ರಥಮಾರುರುಹೇ ವರಂ ॥ ೨೩ ॥

ತಂ ಪ್ರಯಾನ್ತಂ ಪತಿಶ್ರೇಷ್ಠಂ ನಯನೈರ್ನಿಮಿಷೋಜ್ಝಿತೈಃ ।
ವಿಲೋಕಯಾಮಾಸ ತದಾ ಪತಿವ್ರತಪರಾಯಣಾ ॥ ೨೪ ॥

ಸ ಯಯೌ ಜನಕಂ ದ್ರಷ್ಟುಂ ಜನನೀಂ ಪ್ರೇಮವಿಹ್ವಲಾಂ ।
ಗತ್ವಾ ಪಿತರಮಂಬಾಂ ಚ ವವಂದೇ ಶಿರಸಾ ಮುದಾ ॥ ೨೫ ॥

---

ಬಗೆಬಗೆಯಾದ ಹೂಮಾಲೆಗಳಿಂದ ಅಲಂಕೃತನಾಗಿ ಪ್ರಕಾಶಿಸುತ್ತಿದ್ದನು. ಆ ವನಿತೆಯು ಆ ಪುಷ್ಕಲನ ಮೇಲೆ ಮುತ್ತುಗಳನ್ನು ಎರಚಿ, ಆರತಿಮಾಡಿ, ಕಣ್ಣೀರು ಸುರಿಸುತ್ತಾ ಆಲಂಗಿಸಿದಳು.

೨೨-೨೩. ಪುಷ್ಕಲನೂ ಸಹ ಆಕೆಯನ್ನು ದೃಢವಾಗಿ ಆಲಂಗಿಸಿಕೊಂಡು, ಎಲೈ ವೀರಪತ್ನಿಯಾದ ಕಾಂತಿಮತಿಯೇ, ನನ್ನ ಅಗಲುವಿಕೆಯಿಂದ ನೀನು ದುಃಖಿಸಬೇಡ. ನಾನು ಇನ್ನೇನು ಈಗಲೇ ಹೋಗುತ್ತೇನೆ. ಹೀಗೆಂದು ಸಮಾಧಾನಪಡಿಸಿ ತನ್ನ ರಥಕ್ಕೆ ಹತ್ತಿದನು.

೨೪. ಪ್ರಯಾಣಮಾಡುತ್ತಿರುವ ಗಂಡನನ್ನು ಆಕೆಯು ಎವೆಮುಚ್ಚದೇ ನೋಡಿದಳು.

೨೫. ಬಳಿಕ ಪುಷ್ಕಲನು ತನ್ನ ತಾಯಿತಂದೆಗಳನ್ನು ನೋಡಲು ಹೋಗಿ ಅವರನ್ನು ಕಂಡು ನಮಸ್ಕರಿಸಿದನು.

ಮಾತಾ ಪುತ್ರಂ ಪರಿಷ್ವಜ್ಯ ಸ್ವಾಂಕೇ ಚಾರೋಪಯತ್ತದಾ ।
ಮುಂಚಂತೀ ಬಾಷ್ಪನಿಚಯಂ ಸ್ವಸ್ತ್ಯಸ್ತು ನಿಜಗಾದ ಸಾ ॥ ೨೬ ॥

ಪಿತರಂ ಪ್ರಾಹ ಭರತಂ ರಾಮೋ ಯಜ್ಞಕರಃ ಪರಃ ।
ಪಾಲನೀಯೋ ಲಕ್ಷ್ಮಣೇನ ಭವದ್ಭಿಶ್ಚ ಮಹಾತ್ಮಭಿಃ ॥ ೨೭ ॥

ಆಜ್ಞಪ್ತೋಽಸೌ ಜನನ್ಯಾ ಚ ಪಿತ್ರಾ ಸಂಹರ್ಷಿತಾಂಗಕಃ ।
ಯಯೌ ಶತ್ರುಘ್ನಕಟಕಂ ಮಹಾವೀರವಿಭೂಷಿತಂ ॥ ೨೮ ॥

ರಥಿಭಿಃ ಪತ್ತಿಭಿಃ ಶೂರೈಃ ಸದಶ್ವೈಃ ಸಾದಿಭಿರ್ವೃತಂ ।
ಯಯೌ ಮುದಾ ರಘೂತ್ತಂಸಮಹಾಯಜ್ಞಹಯಾಗ್ರಣೀಃ ।
ಗಚ್ಛನ್ಪಾಂಚಾಲದೇಶಾಂಶ್ಚ ಕುರೂಂಶ್ಚೈವೋತ್ತರಾನ್ಕುರೂನ್ ॥ ೨೯ ॥

ದಶಾರ್ಣಾನ್ ಶ್ರೀವಿಶಾಲಾಂಶ್ಚ ಸರ್ವಶೋಭಾಸಮನ್ವಿತಃ ।
ತತ್ರ ತತ್ರೋಪಶೃಣ್ವಾನೋ ರಘುವೀರಯಶೋಽಖಿಲಂ ॥ ೩೦ ॥

---

೨೬. ತಾಯಿಯು ಮಗನನ್ನು ಆಲಂಗಿಸಿಕೊಂಡು ತೊಡೆಯಮೇಲೆ ಕೂಡಿಸಿಕೊಂಡು ಕಣ್ಣೀರನ್ನು ಬಿಡುತ್ತಾ, ಮಗುವೇ, ನಿನಗೆ ಒಳ್ಳೆಯದಾಗಲಿ ಎಂದು ಹರಸಿದಳು.

೨೭. ರಾಮನು ಯಜ್ಞದಲ್ಲಿ ಆಸಕ್ತನಾಗಿರುವುದರಿಂದ ಲಕ್ಷ್ಮಣನೂ, ನೀನೂ ಅವನನ್ನು ಕಾಪಾಡಬೇಕು ಎಂದು ತಂದೆಗೆ ಪುಷ್ಕಲನು ಹೇಳಿದನು.

೨೮. ತಾಯಿತಂದೆಯರಿಂದ ಆಜ್ಞೆಯನ್ನು ಹೊಂದಿ ಸಂತೋಷದಿಂದ ಶರೀರವು ಪುಳುಕಿತವಾಗಲು ಮಹಾವೀರರಿಂದ ಕೂಡಿದ ಶತ್ರುಘ್ನನ ಶಿಬಿರಕ್ಕೆ ಹೋದನು.

೨೯. ರಥ, ಕಾಲಾಳು, ಶೂರರು ಅಶ್ವರಾವುತರಿಂದ ಕೂಡಿ ಆ ಯಜ್ಞದ ಕುದುರೆಯು ಪಾಂಚಾಲ, ಕುರು, ಉತ್ತರಕುರುದೇಶಗಳಿಗೆ ಹೋಯಿತು.

೩೦. ದಶಾರ್ಣ, ವಿಶಾಲಗಳಲ್ಲಿಯೂ ಅಲ್ಲಲ್ಲಿ ತಮ್ಮ ಪರಾಕ್ರಮವನ್ನು ಹೇಳುತ್ತಾ ಹೋಯಿತು.

**ರಾವಣಾಸುರಘಾತೇನ ಭಕ್ತರಕ್ಷಾವಿಧಾಯಕಂ ।**
**ಪುನಶ್ಚ ಹಯಮೇಧಾದಿಕಾರ್ಯಮಾರಭ್ಯ ಪಾವನಂ ॥ ೩೧ ॥**

**ಯಶೋ ವಿತನ್ವನ್ ಭುವನೇ ಲೋಕಾನ್ ರಾಮೋಽವಿತಾ ಭಯಾತ್ ।**
**ತೇಭ್ಯಸ್ತುಷ್ಟೋ ದದೌ ಹಾರಾನ್ ರತ್ನಾನಿ ವಿವಿಧಾನಿ ಚ ॥ ೩೨ ॥**

**ಮಹಾಧನಾನಿ ವಾಸಾಂಸಿ ಶತ್ರುಘ್ನಃ ಪ್ರವರೋ ಮಹಾನ್ ।**
**ಸುಮತಿರ್ನಾಮ ತೇಜಸ್ವೀ ಸರ್ವವಿದ್ಯಾವಿಶಾರದಃ ॥ ೩೩ ॥**

**ರಘುನಾಥಸ್ಯ ಸಚಿವಃ ಶತ್ರುಘ್ನಾನುಚರೋ ವರಃ ।**
**ಯಯೌ ತೇನ ಮಹಾಧೀರೋ ಗ್ರಾಮಾನ್ ಜನಪದಾನ್ಬಹೂನ್ ॥ ೩೪ ॥**

**ರಘುನಾಥಪ್ರತಾಪೇನ ನ ಕೋಽಪಿ ಹೃತವಾನ್ ಹಯಂ ।**
**ದೇಶಾಧಿಪಾ ಯೇ ಬಹವೋ ಮಹಾಬಲವಿಭೂಷಿತಾಃ ॥ ೩೫ ॥**

**ಹಸ್ತ್ಯಶ್ವರಥಪಾದಾತಚತುರಂಗಸಮನ್ವಿತಾಃ ।**
**ಸಂಪದೋ ಬಹುಶೋ ನೀತ್ವಾ ಮುಕ್ತಾಮಾಣಿಕ್ಯಸಂಯುತಾಃ ॥ ೩೬ ॥**

---

೩೧-೩೨. ಶ್ರೀರಾಮನು ರಾವಣನ ವಧದಿಂದ, ಭಕ್ತರ ರಕ್ಷಣೆಮಾಡುವ ಅಶ್ವಮೇಧವನ್ನು ಪ್ರಾರಂಭಿಸಿರುವನು. ತನ್ನ ಯಶಸ್ಸನ್ನು ಪ್ರಕಾಶಪಡಿಸುತ್ತಾ ಲೋಕವನ್ನು ಭಯದಿಂದ ಕಾಪಾಡುತ್ತಿದ್ದಾನೆ. ಆ ಕಾಪಾಡುವವರಿಗೆ ಸಂತೋಷ ದಿಂದ ಅನೇಕ ಧನ, ರಥಗಳನ್ನು ವಸ್ತ್ರಾದಿಗಳನ್ನು ಶತ್ರುಘ್ನನು ಕೊಟ್ಟಿರುವನು.

೩೩-೩೪. ಸರ್ವವಿದ್ಯೆಗಳನ್ನು ಬಲ್ಲ ಸುಮತಿಯೆಂಬ ರಘುನಾಥನ ಮಂತ್ರಿಯು ಅನೇಕ ದೇಶಗಳನ್ನು ಸಂಚರಿಸಿದನು.

೩೫. ರಘುನಾಥನ ಪ್ರತಾಪವನ್ನು ತಿಳಿದುದರಿಂದ ಯಾವನೂ ಕುದುರೆ ಯನ್ನು ಹಿಡಿಯಲ್ಲಿಲ್ಲ ಬಲಿಷ್ಠರಾದ ರಾಜರಾದವರೂ, ಅದನ್ನು ಹಿಡಿಯಲಿಲ್ಲ.

೩೬. ದೇಶಾಧಿಪರು, ಆನೆ, ಕುದುರೆ, ರಥ, ಪದಾತಿಗಳಿಂದ ಚತುರಂಗ ಸೇನೆ ಗಳೊಡನೆ ಮುತ್ತು, ಮಾಣಿಕ್ಯಗಳ ಸಂಪತ್ತನ್ನು ತಂದು, ಕುದುರೆಯ ರಕ್ಷಣೆಗೆ ಬಂದಿದ್ದ ಶತ್ರುಘ್ನನಿಗೆ ಕೊಟ್ಟು ನಮಸ್ಕರಿಸಿದರು.

ಶತ್ರುಘ್ನಂ ಪಯುರಕ್ಷ್ಯಾಯಾವಸಾಗತಂ ಪ್ರಣತಾ ಮುಹುಃ ।
ಇದಂ ರಾಜ್ಯಂ ಧನಂ ಸರ್ವಂ ಸಪುತ್ರಪಶುಬಾಂಧವಂ ।
ರಾಮಚಂದ್ರಸ್ಯ ಸರ್ವಂ ಹಿ ನ ಮದೀಯಂ ರಘೂದ್ವಹ ॥ ೩೭ ॥

ಏವಂ ತದುಕ್ತಮಾಕರ್ಣ್ಯ ಶತ್ರುಘ್ನಃ ಪರವೀರಹಾ ।
ಆಜ್ಞಾಂ ಸ್ವಾಂ ತತ್ರ ಸಂಸ್ಥಾಪ್ಯ ಯಯೌ ತೈಸ್ಸಹಿತಃ ಪಥಿ ॥ ೩೮ ॥

ಏವಂ ಕ್ರಮೇಣ ಸಂಪ್ರಾಪ್ತಃ ಶತ್ರುಘ್ನೋ ಹಯಸಂಯುತಃ ।
ಅಹಿಚ್ಛತ್ರಾಂ ಪುರೀಂ ಬ್ರಹ್ಮನ್ನಾನಾಜನಸಮಾಕುಲಾಂ ॥ ೩೯ ॥

ಬ್ರಹ್ಮದ್ವಿಜಸಮಾಕೀರ್ಣಾಂ ನಾನಾರತ್ನವಿಭೂಷಿತಾಂ ।
ಸೌವರ್ಣ್ಯೈಃ ಸ್ಫಾಟಿಕೈರ್ಹರ್ಮ್ಯೈರ್ಗೋಪುರೈಃ ಸಮಲಂಕೃತಾಂ ॥ ೪೦ ॥

ಯತ್ರ ರಂಭಾತಿರಸ್ಕಾರಕಾರಿಣ್ಯಃ ಕಮಲಾನನಾಃ ।
ದೃಶ್ಯನ್ತೇ ಸರ್ವಹರ್ಮ್ಯೇಷು ಲಲನಾ ಲೀಲಯಾನ್ವಿತಾಃ ॥ ೪೧ ॥

ಯತ್ರ ಸ್ವಾಚಾರಲಲಿತಾಃ ಸರ್ವಭೋಗೈಕಭೋಗಿನಃ ।
ಧನದಾನುಚರಾ ಯದ್ವತ್ತಥಾ ಲೀಲಾಸಮನ್ವಿತಾಃ ॥ ೪೨ ॥

---

೩೭. ಈ ರಾಜ್ಯ, ಧನ, ಮಕ್ಕಳು, ಬಾಂಧವರೊಡಗೂಡಿದ ಸರ್ವವೂ ನಮ್ಮದಲ್ಲ. ರಾಮಚಂದ್ರನದೇ ಎಂದರು.

೩೮. ಅವರು ಹೀಗೆ ಹೇಳಿದುದನ್ನು ಕೇಳಿ ಶತ್ರುಘ್ನನು ಅಪ್ಪಣೆಯನ್ನು ಮಾಡುತ್ತಾ ದಾರಿಯಲ್ಲಿ ಅವರೊಡನೆ ನಡೆದನು.

೩೯–೪೦. ಕ್ರಮವಾಗಿ ಬರುಬರುತ್ತಾ ಅನೇಕಬಗೆಯ ಜನರುಳ್ಳ, ಬ್ರಾಹ್ಮಣಾದಿ ವರ್ಣಗಳಿಂದ ಕೂಡಿದ, ನಾನಾರತ್ನಗಳಿಂದಲಂಕೃತವಾದ ಮಹಡಿಯ ಮನೆಗಳುಳ್ಳ ಅಹಿಚ್ಛತ್ರಪುರಕ್ಕೆ ಹೋದನು.

೪೧. ಆ ಅಹಿಚ್ಛತ್ರಪುರದಲ್ಲಿ ಸ್ತ್ರೀಯರು ತಮ್ಮ ಸೌಂದರ್ಯದಿಂದ ರಂಭೆಯನ್ನೂ ತಿರಸ್ಕಾರಮಾಡುತ್ತಾ ಉಪ್ಪರಿಗೆಯ ಮನೆಗಳಲ್ಲಿ ವಾಸಮಾಡುತ್ತಿರುವರು.

೪೨. ಅವರೆಲ್ಲರೂ ಆಚಾರಶೀಲರಾಗಿ ಸಮಸ್ತ ಭೋಗಗಳನ್ನೂ ಭೋಗಿಸುತ್ತ ಯಕ್ಷರಂತೆ ಸಂತೋಷದಿಂದಿದ್ದರು.

ಯತ್ರ ವೀರಾ ಧನುರ್ಧರಸ್ತಾಃ ಶರಸಂಧಾನಕೋವಿದಾಃ ।
ಕುರ್ವಂತಿ ತಂ ಸುರಾಜಾನಂ ಸುಹೃಷ್ಟಂ ಸುಮದಾಭಿದಂ ॥ ೪೩ ॥

ಏವಂ ವಿಧಂ ದದರ್ಶಾಸೌ ನಗರಂ ದೂರತಃ ಪ್ರಭುಃ ।
ಪಾರ್ಶ್ವೇ ತಸ್ಯ ಪುರಶ್ರೇಷ್ಠಮುದ್ಯಾನಂ ಶೋಭಯಾನ್ವಿತಂ ॥ ೪೪ ॥

ಪುಂನಾಗೈರ್ನಾಗಚಂಪೈಶ್ಚ ತಿಲಕೈರ್ದೇವದಾರುಭಿಃ ।
ಅಶೋಕೈಃ ಪಾಟಲೈಶ್ಚೂತೈರ್ಮಂದಾರೈಃ ಕೋವಿದಾರಕೈಃ ॥ ೪೫ ॥

ಆಮ್ರಜಂಬೂಕದಂಬೈಶ್ಚ ಪ್ರಿಯಾಲಪನಸೈಸ್ತಥಾ ।
ಶಾಲೈಸ್ತಾಲೈಸ್ತಮಾಲೈಶ್ಚ ಮಲ್ಲಿಕಾಜಾತಿಯೂಥಿಭಿಃ ॥ ೪೬ ॥

ನೀಪೈಃ ಕದಂಬೈರ್ವಕುಲೈಶ್ಚಂಪಕೈರ್ಮದನಾಭಿಧೈಃ ।
ಶೋಭಿತಂ ಸ ದದರ್ಶಾಥ ಶತ್ರುಘ್ನಃ ಪರವೀರಹಾ ॥ ೪೭ ॥

ಹಯೋ ಗತಸ್ತದ್ವನಮಧ್ಯದೇಶೇ
ತಮಾಲತಾಲಾದಿಸುಶೋಭಿತೇ ವೈ ।
ಯಯೌ ತತಃ ಪೃಷ್ಠತ ಏವ ವೀರೋ
ಧನುರ್ಧರೈಃ ಸೇವಿತಪಾದಪದ್ಮಃ ॥ ೪೮ ॥

---

೪೩. ಅಲ್ಲಿರುವ ವೀರರೆಲ್ಲರೂ ಧನುರ್ಧರರಾಗಿ, ಬಾಣಬಿಡುವುದರಲ್ಲಿ ಗಟ್ಟಿಗರಾಗಿ ಆ ರಾಜನನ್ನು ಸುರಾಜನನ್ನಾಗಿ ಮಾಡುತ್ತಾ ಹೆಸರನ್ನು ಕೂಡಾ ಸುಮದನೆಂದು ಅನ್ವರ್ಥಗೊಳಿಸಿದ್ದರು,

೪೪. ಇಂತಹ ಅಹಿಚ್ಛತ್ರಪುರವನ್ನು ದೂರದಿಂದ ಶತ್ರುಘ್ನನು ನೋಡಿದನು. ಅದರ ಪಕ್ಕದಲ್ಲಿಯೇ ಉದ್ಯಾನವನವೊಂದಿದ್ದಿತು.

೪೫–೪೭. ಆ ವನದಲ್ಲಿ ಪುನ್ನಾಗ, ನಾಗ, ಸಂಪಿಗೆ, ತಿಲಕ, ದೇವದಾರು, ಮಾವು, ನೇರಳೆ, ಪಾದರಿ, ಅಶೋಕ, ಮಂದಾರ, ಕಂಚುವಾಳ, ಕದಂಬ, ಮತ್ತಿ, ಹಲಸು, ಬೇಲ, ಸಾಲ, ತಾಳೆ, ಹೊಂಗೆ, ಮಲ್ಲಿಗೆ, ಜಾಜಿ, ಸೇವಂತಿಗೆ, ನೀರಂಜಿ, ಪಗಡೆ, ಕೆಂಡಸಂಪಿಗೆ, ಇಂತಹ ಹಣ್ಣು ಮತ್ತು ಹೂವಿನ ಮರಗಳನೇಕವಿದ್ದವು.

೪೮. ತಾಳ ತಮಲಾದಿ ಇನ್ನೂ ಅನೇಕ ಮರಗಳಿಂದ ಪ್ರಕಾಶಿಸುತ್ತಿರುವ ಆ ಉದ್ಯಾನವದ ಮಧ್ಯಕ್ಕೆ ಆ ಕುದುರೆಯು ಹೋಯಿತು. ಯೋಧರೂ ಅದರ ಹಿಂದೆ ಹೋದರು.

ದದರ್ಶ ತತ್ರ ರಚಿತಂ ದೇವಾಯತನಮುದ್ಭುತಂ ।
ಇಂದ್ರನೀಲೈಶ್ಚ ವೈಡೂರ್ಯೈಸ್ತಥಾ ಮಾರಕತೈರಪಿ ॥ ೪೯ ॥

ಶೋಭಿತಂ ಸುರಸೇವಾರ್ಹಂ ಕೈಲಾಸಪ್ರಸ್ಥಸನ್ನಿಭಂ ।
ಜಾತರೂಪಮಯೈಸ್ತಂಭೈಃ ಶೋಭಿತಂ ಸದ್ಮನಾಂ ವರಂ ॥ ೫೦ ॥

ದೃಷ್ಟ್ವಾ ತದ್ರಘುನಾಥಸ್ಯ ಭ್ರಾತಾ ದೇವಾಲಯಂ ವರಂ ।
ಪಪ್ರಚ್ಛ ಸುಮತಿಂ ಸ್ವೀಯಂ ಮಂತ್ರಿಣಂ ವದತಾಂ ವರಂ ॥ ೫೧ ॥

॥ ಶತ್ರುಘ್ನ ಉವಾಚ ॥

ವದಾಮಾತ್ಯವರೇದಂ ಕಿಂ ಕಸ್ಯ ದೇವಸ್ಯ ಕೇತನಂ ।
ಕಾ ದೇವತಾ ಪೂಜ್ಯತೇಽತ್ರ ಕಸ್ಯ ಹೇತೋಃ ಸ್ಥಿತಾನಘ ॥ ೫೨ ॥

ಏವಮಾಕರ್ಣ್ಯ ಸರ್ವಜ್ಞೋ ಮಂತ್ರಿವಿನ್ನಿಜಗಾದ ಹ ।
ಶೃಣುಷ್ವೈಕಮನಾ ವೀರ ಯಥಾವದಿಹ ಸರ್ವಶಃ ॥ ೫೩ ॥

---

೪೯-೫೦. ಅಲ್ಲಿ ಇಂದ್ರನೀಲ, ವೈಢೂರ್ಯ, ಮರಕತಮಣಿಗಳಿಂದ ಶೋಭಿತವಾದ, ಸುರರು ಸೇವಿಸಲು ಯೋಗ್ಯವಾದ, ಕೈಲಾಸದಂತಿರುವ ಚಿನ್ನದಕಂಭಗಳುಳ್ಳ ಒಂದು ದೇವಾಲಯವಿದ್ದಿತು.

೫೧. ಅದನ್ನು ಶತ್ರುಘ್ನನು ನೋಡಿ ತನ್ನ ಮಂತ್ರಿಯಾದ ಸುಮತಿಯನ್ನು ಪ್ರಶ್ನಿಸಿದನು.

೫೨. ಶತ್ರುಘ್ನನು ಹೇಳಿದನು:—ಎಲೈ ಮಂತ್ರಿಯೇ, ಇದೇನು ? ಯಾವ ದೇವಸ್ಥಾನವು? ಇಲ್ಲಿ ಪೂಜಿಸಿಕೊಳ್ಳುವ ದೇವರಾವುದು? ಇದೇಕೆ ಇಲ್ಲಿದೆ? ಎಂಬದನ್ನು ಹೇಳು.

೫೩. ಸರ್ವಜ್ಞನಾದ ಆ ಮಂತ್ರಿಯು ಇದನ್ನು ಕೇಳಿ ಎಲೈ ವೀರನೇ, ಒಂದೇ ಮನಸ್ಸಿನಿಂದ ಕೇಳೆಂದು ಹೇಳಿದನು.

ಕಾಮಾಕ್ಷ್ಯಾಯಾಃ ಪರಂ ಸ್ಥಾನಂ ವಿದ್ಧಿ ವಿಶ್ವೈಕಶರ್ಮದಂ ।
ಯಸ್ಯಾ ದರ್ಶನಮಾತ್ರೇಣ ಸರ್ವಸಿದ್ಧಿಃ ಪ್ರಜಾಯತೇ ॥ ೫೪ ॥

ದೇವಾಸುರಾಶ್ಚ ಯಾಂ ಸ್ತುತ್ವಾ ನತ್ವಾ ಪ್ರಾಪ್ತಾಖಿಲಾಂ ಶ್ರಿಯಂ ।
ಧರ್ಮಕಾಮಾರ್ಥಮೋಕ್ಷಾಣಾಂ ದಾತ್ರೀ ಭಕ್ತಾನುಕಂಪಿನೀ ॥ ೫೫ ॥

ಯಾಚಿತಾ ಸುಮದೇನಾತ್ರಾಹಿಚ್ಛತ್ರಾಪತಿನಾ ಪುರಾ ।
ಸ್ಥಿತಾ ಕರೋತಿ ಸಕಲಂ ಭಕ್ತಾನಾಂ ದುಃಖಹಾರಿಣೀ ॥ ೫೬ ॥

ತಾಂ ನಮಸ್ಕುರು ಶತ್ರುಘ್ನ ಸರ್ವವೀರಶಿರೋಮಣೇ ।
ನತ್ವಾ ಸುಸಿದ್ಧಿಂ ಪ್ರಾಪ್ನೋಷಿ ಸಸುರಾಸುರದುರ್ಲಭಾಂ ॥ ೫೭ ॥

ಇತಿ ಶ್ರುತ್ವಾಥ ತದ್ವಾಕ್ಯಂ ಶತ್ರುಘ್ನಶ್ಶತ್ರುತಾಪನಃ ।
ಪಪ್ರಚ್ಛ ಸಕಲಾಂ ವಾರ್ತಾಂ ಭವಾನ್ಯಾಃ ಪುರುಷರ್ಷಭಃ ॥ ೫೮ ॥

---

೫೪. ಇದು ಪ್ರಪಂಚಕ್ಕೆ ಶಾಂತಿಯನ್ನು ಕೊಡುವ ಕಾಮಾಕ್ಷೀದೇವಸ್ಥಾನವು. ಇಲ್ಲಿ ದರ್ಶನಮಾತ್ರದಿಂದಲೇ ಸರ್ವಸಿದ್ಧಿಗಳೂ ಲಭಿಸುತ್ತವೆ.

೫೫. ದೇವಾಸುರರು ಯಾವಳನ್ನು ನಮಸ್ಕರಿಸಿ, ಸ್ತುತಿಸಿ, ಸರ್ವಸಂಪತ್ತನ್ನೂ ಹೊಂದಿದರೋ ಅಂತಹ ಧರ್ಮ, ಕಾಮ, ಅರ್ಥ, ಮೋಕ್ಷಗಳನ್ನು ಕೊಡುವ, ಭಕ್ತರಲ್ಲಿ ದಯಾಳುವಾದ ಪರಮೇಶ್ವರಿಯು ಇಲ್ಲಿದ್ದಾಳೆ.

೫೬. ಸುಮದನು ಕೇಳಿಕೊಂಡುದರಿಂದ ಆ ತಾಯಿಯು ಇಲ್ಲಿದ್ದುಕೊಂಡು ಭಕ್ತರ ದುಃಖವನ್ನು ನಾಶಮಾಡುತ್ತಿದ್ದಾಳೆ.

೫೭. ಎಲೈ ವೀರಾಗ್ರಣಿಯಾದ ಶತ್ರುಘ್ನನೇ. ಆಕೆಯನ್ನು ನಮಸ್ಕರಿಸು. ನಮಸ್ಕರಿಸಿದರೆ ದೇವದಾನವರಿಂದಲೂ ಹೊಂದಲಸಾಧ್ಯವಾದ ಸ್ಥಿತಿಯನ್ನು ಹೊಂದುವೆ.

೫೮. ಈ ಮಾತನ್ನು ಕೇಳಿ ಶತ್ರುಘ್ನನು ಭವಾನಿಯ ವಿಷಯವಾದ ಎಲ್ಲಾ ವಿಷಯಗಳನ್ನೂ ಕೇಳಿದನು.

॥ ಶತ್ರುಘ್ನ ಉವಾಚ ॥

ಕೋಽಹಿಚ್ಛತ್ರಾಪತೀ ರಾಜಾ ಸುಮದಃ ಕಿಂ ತಪಃ ಕೃತಂ ।
ಯೇನೇಯಂ ಸರ್ವಲೋಕಾನಾಂ ಮಾತಾ ತುಷ್ಟಾತ್ರ ಸಂಸ್ಥಿತಾ ॥ ೫೯ ॥

ವದ ಸರ್ವಂ ಮಹಾಮಾತ್ಯ ನಾನಾರ್ಥಪರಿಬೃಂಹಿತಂ ।
ಯಥಾವತ್ತ್ವಂ ಹಿ ಜಾನಾಸಿ ತಸ್ಮಾದ್ವದ ಮಹಾಮತೇ ॥ ೬೦ ॥

॥ ಸುಮತಿರುವಾಚ ॥

ಹೇಮಕೂಟಗಿರಿಃ ಪ್ರೂತಃ ಸರ್ವದೇವೋಪಶೋಭಿತಃ ।
ತತ್ರಾಸ್ತಿ ತೀರ್ಥಂ ವಿಮಲಮೃಷಿವೃಂದಸುಸೇವಿತಂ ॥ ೬೧ ॥

ಸುಮದೋ ಹಿ ತಪಸ್ತೇಪೇ ಹತಮಾತೃಪಿತೃಪ್ರಜಃ ।
ಅರಿಭಿಸ್ಸರ್ವಸಾಮಂತೈರ್ಜಗಾಮ ತಪಸೇ ಹಿತಂ ॥ ೬೨ ॥

ವರ್ಷಾಣಿ ತ್ರೀಣಿ ಸ ಪದಾ ತ್ವೇಕೇನ ಮನಸಾ ಸ್ಮರನ್ ।
ಜಗತಾಂ ಮಾತರಂ ದಧ್ಯಾ ನಾಸಾಗ್ರಸ್ತಿಮಿತೇಕ್ಷಣಃ ॥ ೬೩ ॥

---

೫೯. ಶತ್ರುಘ್ನನು ಕೇಳಿದನು:—ಅಹಿಚ್ಛತ್ರ ಪಟ್ಟಣದ ರಾಜನಾರು? ಈ ಈ ಸುಮದನನು ಯಾವ ತಪಸ್ಸನ್ನು ಮಾಡಿದನು? ಏತಕ್ಕೋಸ್ಕರ ಸಂತುಷ್ಟಳಾಗಿ ಸರ್ವಲೋಕಮಾತೆಯು ಇಲ್ಲಿ ಇರುವಳು?

೬೦. ನಾನಾರ್ಥಗಳುಳ್ಳ ಈ ವಿಷಯವನ್ನು ತಿಳಿಸು. ನೀನು ಸರಿಯಾಗಿ ತಿಳಿದಿದ್ದೀಯೆ ಆದ್ದರಿಂದ ಹೇಳು. ಎನ್ನಲು,

೬೧. ಸುಮತಿಯು ಹೇಳಿದನು:—ಸಮಸ್ತ ದೇವತೆಗಳುಳ್ಳ ಹೇಮಕೂಟ ವೆಂಬ ಪರ್ವತವೊಂದಿದೆ. ಅಲ್ಲಿ ಋಷಿಗಳಿಂದ ಸೇವಿಸಲ್ಪಟ್ಟ ತೀರ್ಥವೊಂದಿದೆ.

೬೨. ತಾಯಿತಂದೆ ಮಕ್ಕಳೆಲ್ಲರೂ ಶತೃಗಳಿಂದ ನಾಶವಾಗಲು ಸುಮದನನು ಕಾಡಿಗೆ ಹೋಗಿ ತಪಸ್ಸನ್ನು ಮಾಡಿದನು.

೬೩-೬೪. ಅವನು ಮೂರು ವರ್ಷಕಾಲ ಒಂಟಿಕಾಲಿನಲ್ಲಿ ನಿಂತು ಏಕಾಗ್ರತೆ

ವರ್ಷಾಣಿ ತ್ರೀಣಿ ಶುಷ್ಕಾಣಾಂ ಪರ್ಣಾನಾಂ ಭಕ್ಷಣಂ ಚರನ್ ।
ಚಕಾರ ಪರಮುಗ್ರಂ ಸ ತಪಃ ಪರಮದುಶ್ಚರಂ ॥ ೬೪ ॥

ವರ್ಷಾಣಿ ತ್ರೀಣಿ ಸಲಿಲೇ ಶೀತಕಾಲೇ ಮಮಜ್ಜ ಸಃ ।
ಗ್ರೀಷ್ಮೇ ಚಕಾರ ಪಂಚಾಗ್ನೀನ್ ಪ್ರಾವೃಟ್ಸು ಜಲದೋನ್ಮುಖಃ ॥ ೬೫ ॥

ತ್ರೀಣಿ ವರ್ಷಾಣಿ ಪವನಂ ಸಂರುಧ್ಯ ಸ್ವಾಂತಗೋಚರಂ ।
ಭವಾನೀಂ ಸ ಸ್ಮರನ್ ಧೀರೋ ನ ಚ ಕಿಂಚನ ಪಶ್ಯತಿ ॥ ೬೬ ॥

ವರ್ಷೇ ತು ದ್ವಾದಶೇಽತೀತೇ ದೃಷ್ಟ್ವೈತತ್ಪರಮಂ ತಪಃ ।
ವಿಭಾವ್ಯ ಮನಸಾತೀವ ಶಕ್ರಃ ಪಸ್ಪರ್ಧ ತಂ ಭಯಾತ್ ॥ ೬೭ ॥

ಆದಿದೇಶ ಸ ಕಾಮಂ ತು ಪರಿವಾರಸಮಾವೃತಂ ।
ಅಪ್ಸರೋಭಿಃ ಸುಸಂಯುಕ್ತಂ ಬ್ರಹ್ಮೇಂದ್ರವಿಜಯೋದ್ಯತಂ ॥ ೬೮ ॥

ಗಚ್ಛ ಕಾಮ ಸಖೇ ಮಹ್ಯಂ ಪ್ರಿಯಮಾಚರ ಮೋಹನ ।
ಸುಮದಸ್ಯ ತಪೋವಿಘ್ನಂ ಸಮಾಚರ ಯಥಾ ಭವೇತ್ ॥ ೬೯ ॥

---

ಯಿಂದ ತಪಸ್ಸು ಮಾಡಿದನು. ಮತ್ತೆ ಮೂರು ವರ್ಷಗಳು ಆ ಮಾತೆಯನ್ನು ಸ್ಮರಿಸುತ್ತಾ ಒಣಗಿದ ಎಲೆಗಳನ್ನು ತಿನ್ನುತ್ತಾ ಉಗ್ರತಪಸ್ಸನ್ನು ಮಾಡಿದನು.

೬೫ ಮೂರು ವರ್ಷಗಳು ನೀರಿನಲ್ಲಿ ನಿಂತು ಪಂಚಾಗ್ನಿಗಳ ಮಧ್ಯದಲ್ಲಿದ್ದೂ ತಪಸ್ಸು ಮಾಡಿದನು.

೬೬. ಮೂರು ವರ್ಷಗಳು ಪ್ರಾಣಾಯಾಮ ಮಾಡಿ ಭವಾನಿಯನ್ನು ಸ್ಮರಿಸುತ್ತಾ ಆಕೆಯನ್ನು ಎಲ್ಲಾ ಕಡೆಯಲ್ಲೂ ನೋಡುತ್ತಿದ್ದನು.

೬೭. ಹನ್ನೆರಡು ವರ್ಷಗಳು ಕಳೆಯುತ್ತಲೂ ಇಂದ್ರನು ಇವನ ತಪಸ್ಸನ್ನು ನೋಡಿ ಹೊಟ್ಟೆಗಿಚ್ಚುಪಟ್ಟನು.

೬೮. ಬ್ರಹ್ಮ ಇಂದ್ರನೇ ಮೊದಲಾದವರನ್ನೂ ಜಯಿಸುವ ಮನ್ಮಥನನ್ನು ಕರೆದು ಅಪ್ಸರರೊಡನೆಯೂ, ಪರಿವಾರದೊಡನೆಯೂ ಕೂಡಿರುವ ಅವನಿಗೆ ಇಂತೆಂದನು.

೬೯. ಎಲೈ ಸ್ನೇಹಿತನಾದ ಕಾಮನೇ, ಹೋಗು, ನನಗೆ ಪ್ರಿಯವಾದುದನ್ನು ಮಾಡು. ಆ ಸುಮನನ ತಪಸ್ಸಿಗೆ ವಿಘ್ನವನ್ನು ಮಾಡು.

ಇತಿ ಶ್ರುತ್ವಾ ಮಹದ್ವಾಕ್ಯಂ ತುರಾಸಾಹಸ್ಸ್ವಯಂ ಪ್ರಭುಃ ।
ಉವಾಚ ವಿಶ್ವವಿಜಯೀ ಪ್ರೌಢಗರ್ವೋ ರಘೂದ್ವಹ ॥ ೭೦ ॥

॥ ಕಾಮ ಉವಾಚ ॥

ಸ್ವಾಮಿನ್ ಕೋಽಸೌ ಹಿ ಸುಮದಃ ಕಿಂ ತಪಸ್ಸ್ವಲ್ಪಕಂ ಪುನಃ ।
ಬ್ರಹ್ಮಾದೀನಾಂ ತಪೋ ಭಗ್ನಂ ಕರೋಮ್ಯಸ್ಯ ತು ಕಾ ಕಥಾ ॥ ೭೧ ॥

ಮದ್ಬಾಣಬಲನಿರ್ಭಿನ್ನಶ್ಚಂದ್ರಸ್ತಾರಾಂ ಗತಃ ಪುರಾ ।
ತ್ವಮಪ್ಯಹಲ್ಯಾಂ ಗತವಾನ್ ವಿಶ್ವಾಮಿತ್ರಸ್ತಥೋರ್ವಶೀಂ ॥ ೭೨ ॥

ಚಿಂತಾಂ ಮಾ ಕುರು ದೇವೇಂದ್ರ ಸೇವಕೇ ಮಯಿ ಸಂಸ್ಥಿತೇ ।
ಏಷ ಗಚ್ಛಾಮಿ ಸುಮದಂ ದೇವಾನ್ ಪಾಲಯ ಮಾರಿಷ ॥ ೭೩ ॥

ಏವಮುಕ್ತ್ವಾ ಕಾಮದೇವಃ ಹೇಮಕೂಟಂ ಗಿರಿಂ ಯಯೌ ।
ವಸಂತೇನ ಯುತಸ್ಸಖ್ಯಾ ತಥೈವಾಪ್ಸರಸಾಂ ಗಣೈಃ ॥ ೭೪ ॥

---

೭೦. ಇಂದ್ರನ ಮಾತನ್ನು ಕೇಳಿ ಗರ್ವದಿಂದ ಆತನಿಗೆ ಇಂತೆಂದನು.

೭೧. ಕಾಮನಿಂತೆಂದನು :—ಸ್ವಾಮಿಯೇ! ಈ ಸುಮದನೆಷ್ಟರವನು? ಇವನ ಅಲ್ಪವಾದ ತಪಸ್ಸೆಲ್ಲಿ? ಬ್ರಹ್ಮನೇ ಮೊದಲಾದವರ ತಪಸ್ಸನ್ನು ಕೆಡಿಸುವಾಗ ಈತನ ವಿಷಯವೇನು?

೭೨. ನನ್ನ ಬಾಣದಿಂದ ತಪ್ತನಾದ ಚಂದ್ರನು ತಾರೆಯನ್ನು ಅಪ್ಪಿಕೊಂಡನು. ನೀನೂ ಕೂಡ ನನ್ನ ಬಾಣಕ್ಕೆ ಬಗ್ಗಿಯೇ ಅಹಲ್ಯೆಯನ್ನೂ, ವಿಶ್ವಾಮಿತ್ರನು ಊರ್ವಶಿಯನ್ನೂ ಹೊಂದಿದಿರಿ.

೭೩. ಸೇವಕನಾದ ನಾನಿರುವಾಗ ಎಲೈ ದೇವೇಂದ್ರನೇ, ಚಿಂತಿಸಬೇಡ. ಇಗೋ ನಾನು ಹೋಗುತ್ತೇನೆ. ದೇವತೆಗಳನ್ನು ನೀನು ಪಾಲಿಸು.

೭೪. ಕಾಮನು ಹೀಗೆಂದು ಹೇಳಿ ವಸಂತನೊಡನೆಯೂ, ಅಪ್ಸರಸ್ತ್ರೀಯರೊಡನೆಯೂ, ಹೇಮಕೂಟಕ್ಕೆ ಹೋದನು.

ವಸಂತಸ್ತತ್ರ ಸಕಲಾನ್ ವೃಕ್ಷಾನ್ ಪುಷ್ಪಫಲೈರ್ಯುತಾನ್ ।
ಕೋಕಿಲಾಷಟ್ಪದಶ್ರೇಣ್ಯಾ ಘುಷ್ಟಾನಾಶು ಚಕಾರ ಸಃ ॥ ೭೫ ॥

ವಾಯುಸ್ಸುಶೀತಳೋ ವಾತಿ ದಕ್ಷಿಣಾಂ ದಿಶಮಾಶ್ರಿತಃ ।
ಕೃತಮಾಲಾಸರಿತ್ತೀರೇ ಲವಂಗಕುಸುಮಾನ್ವಿತಃ ॥ ೭೬ ॥

ಏವಂವಿಧೇ ವನೇ ವೃತ್ತೇ ರಂಭಾ ನಾಮಾಪ್ಸರೋವರಾ ।
ಸಖೀಭಿಸ್ಸಂವೃತಾ ತತ್ರ ಜಗಾಮ ಸುಮುಖಾಂತಿಕಂ ॥ ೭೭ ॥

ತತ್ರಾರಭತ ಗಾನಂ ಸಾ ಕಿನ್ನರಸ್ವರಶೋಭನಾ ।
ಮೃದಂಗಪಣವಾನೇಕವಾದ್ಯಭೇದವಿಶಾರದಾ ॥ ೭೮ ॥

ತದ್ಗಾನಮಾಕರ್ಣ್ಯ ನರಾಧಿಪೋಽಸೌ
ವಸಂತಮಾಲೋಕ್ಯ ಮನೋಹರಂ ಚ ।
ತಥಾನ್ಯಪುಷ್ಟಾರಟಿತಂ ಮನೋರಮಂ
ಚಕಾರ ಚಕ್ಷುಃಪರಿವರ್ತನಂ ಬುಧಃ ॥ ೭೯ ॥

---

೭೫. ವಸಂತನು ಅಲ್ಲಿನ ಮರಗಳನ್ನು ಹೂ ಬಿಡುವಂತೆ ಮಾಡಿ, ಕೋಗಿಲೆಗಳೂ ದುಂಬಿಗಳೂ ಮಧುರಧ್ವನಿಯಿಂದ ಕೂಗುವಂತೆ ಮಾಡಿದನು.

೭೬. ಗಾಳಿಯು ನದಿಯ ದಡದಲ್ಲಿರುವ ಲವಂಗದ ಹೂವಿನ ಮೇಲೆ ಬೀಸಿ ವಾಸನೆಯನ್ನು ಹೊತ್ತುಕೊಂಡು ದಕ್ಷಿಣದಿಂದ ಶೀತಳವಾಗಿ ಬೀಸಿತು.

೭೭. ವನವು ಈ ರೀತಿಯಾಗಲು, ರಂಭೆಯು ಸಖಿಯರೊಡನೆ ಸುಮುಖನ ಬಳಿಗೆ ಹೋದಳು.

೭೮. ಪಕ್ಕವಾದ್ಯಗಳೊಡನೆ ಅಲ್ಲಿ ರಂಭೆಯು ಸುಸ್ವರದಿಂದ ಗಾನಮಾಡಲು ಆರಂಭಿಸಿದಳು.

೭೯. ಆ ಮನೋಹರವಾದ ಸಂಗೀತವನ್ನೂ, ಆ ಕೋಕಿಲಾಗಾನಕ್ಕೆ ಸಮಾನವಾದ ಗಾನವನ್ನೂ ಕೇಳಿ ರಾಜನು ಕಣ್ಣು ಬಿಟ್ಟು ಸುತ್ತಲೂ ನೋಡಿದನು.

ತಂ ಪ್ರಬುದ್ಧಂ ನೃಪಂ ವೀಕ್ಷ್ಯ ಕಾಮಃ ಪುಷ್ಪಾಯುಧಸ್ತ್ವರ್ । 
ಚಕಾರ ಸಜ್ಜಂ ಸ ತದಾ ಧನುಸ್ತತ್ಪೃಷ್ಠತೋऽನಘ ॥ ೮೦ ॥

ಏಕಾಪ್ಸರಾ ತತ್ರ ನೃಪಸ್ಯ ಪಾದಯೋಃ
ಸಂವಾಹನಂ ನರ್ತಿತನೇತ್ರಪಲ್ಲವಾ ।
ಚಕಾರ ಚಾನ್ಯಾ ತು ಕಟಾಕ್ಷವೀಕ್ಷಣಂ
ಚಕಾರ ಕಾಚಿದ್ಭೃಶಮಂಗಚೇಷ್ಟಿತಂ ॥ ೮೧ ॥

ಅಪ್ಸರೋಭಿಸ್ತಥಾಕೀರ್ಣಃ ಕಾಮವಿಹ್ವಲಮಾನಸಃ ।
ಚಿಂತಯಾಮಾಸ ಮತಿಮಾನ್ ಜಿತೇಂದ್ರಿಯಶಿರೋಮಣಿಃ ॥ ೮೨ ॥

ಏತಾ ಮೇ ತಪಸೋ ವಿಘ್ನಕಾರಿಣ್ಯೋऽಪ್ಸರಸಾಂ ವರಾಃ ।
ಶಕ್ರೇಣ ಪ್ರೇಷಿತಾಸ್ಸರ್ವಾಃ ಕರಿಷ್ಯಂತಿ ಯಥಾತಥಂ ॥ ೮೩ ॥

ಇತಿ ಸಂಚಿಂತ್ಯ ಸುತಪಾಸ್ತಾ ಉವಾಚ ವರಾಂಗನಾಃ ।
ಕಾ ಯೂಯಂ ಕುತ್ರ ಸಂಸ್ಥಾಃ ಕಿಂ ಭವತೀನಾಂ ಚಿಕೀರ್ಷಿತಂ ॥ ೮೪ ॥

---

೮೦. ಆ ಸುಮದನು ಎಚ್ಚರಗೊಂಡದ್ದನ್ನು ನೋಡಿ ಕಾಮನು ಆ ರಾಜನ ಹಿಂದೆ ಧನಸ್ಸನ್ನು ಸಿದ್ಧಪಡಿಸಿಕೊಂಡು ಹೊರಟನು.

೮೧. ಒಬ್ಬ ಅಪ್ಸರಸ್ತ್ರೀಯು ಕಣ್ಣನ್ನು ಕುಣಿಸುತ್ತಾ ಸುಮತಿಯ ಕಾಲನ್ನು ಒತ್ತುತ್ತಿದ್ದಳು. ಮತ್ತೊಬ್ಬಳು ಕಟಾಕ್ಷಗಳಿಂದ ನೋಡುತ್ತಾ ಅಂಗಚೇಷ್ಟೆಯನ್ನು ಮಾಡುತ್ತಿದ್ದಳು.

೮೨. ಅಪ್ಸರಸ್ತ್ರೀಯನ್ನು ನೋಡಿ ಕಾಮದಿಂದ ಕೂಡಿದ ಮನಸ್ಸುಳ್ಳವನಾಗಿ ಆ ಜಿತೇಂದ್ರಿಯನಾದ ಸುಮತಿಯು ಯೋಚಿಸಿದನು.

೮೩. ಇವರೆಲ್ಲರೂ ನನ್ನ ತಪಸ್ಸಿಗೆ ವಿಘ್ನಕಾರಿಗಳು. ಈ ಅಪ್ಸರಸ್ತ್ರೀಯರನ್ನು ಇಂದ್ರನು ಕಳುಹಿಸಿದ್ದಾನೆ. ಅವನು ಹೇಳಿರುವಂತೆ ಇವರು ಮಾಡುತ್ತಾರೆ.

೮೪. ಆ ತಪಸ್ವಿಯು ಅವರನ್ನು ಕುರಿತು ನೀವು ಯಾರು? ಎಲ್ಲಿದ್ದೀರಿ? ನಿಮ್ಮಗಳ ಇಷ್ಟವೇನು ಎಂದನು.

**ಅತ್ಯದ್ಭುತಂ ಜಾತಮಹೋ ಯದ್ಭವನ್ತೋಽಕ್ಷಿಗೋಚರಾಃ ।**
**ಯೋಸ್ತಪೋಭಿಸ್ಸುದುಷ್ಪ್ರಾಪಾಸ್ತಾ ಮೇ ತಪಸ ಆಗತಾಃ** ॥ ೮೫ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಕಾಮಾಕ್ಷೋಪಾಖ್ಯಾನಂ ನಾಮ ದ್ವಾದಶೋಽಧ್ಯಾಯಃ**



---

೮೫. ನೀವುಗಳು ನನ್ನ ಕಣ್ಣಿಗೆ ಬಿದ್ದುದು ಆಶ್ಚರ್ಯವಾಗಿದೆ. ನೀವು ತಪಸ್ಸು ಮಾಡಿದವರ ಕಣ್ಣಿಗೂ ಬೀಳದವರು ನನ್ನ ತಪಸ್ಸಿಗೆ ಲಭಿಸಿರುವಿರಲ್ಲಾ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ. ರಾಮಾಶ್ವಮೇಧದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಯೋದಶೋಽಧ್ಯಾಯಃ

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಸುಮದಸ್ಯ ತಪೋನಿಧೇಃ ।
ಜಗದುಃ ಕಾಮಸೇನಾಸ್ತಂ ರಂಭಾದ್ಯಪ್ಸರಸೋ ಮುದಾ ॥ ೧ ॥

ತ್ವತ್ತಪೋಭಿರ್ವಯಂ ಕಾನ್ತ ಪ್ರಾಪ್ತಾಸ್ಸರ್ವಾ ವರಾಂಗನಾಃ ।
ತಾಸಾಂ ಯೌವನಸರ್ವಸ್ವಂ ಭುಂಕ್ಷ್ವ ತ್ಯಜ ತಪಃ ಫಲಂ ॥ ೨ ॥

ಇಯಂ ಘೃತಾಚೀ ಸುಭಗಾ ಚಂಪಕಾಭಶರೀರಭೃತ್ ।
ಕರ್ಪೂರಗಂಧಲಲಿತಾ ಭುನಕ್ತು ತ್ವನ್ಮುಖಾಮೃತಂ ॥ ೩ ॥

---

## ಹದಿಮೂರನೆಯ ಅಧ್ಯಾಯವು

೧. ಶೇಷನು ಹೇಳಿದನು:—ತಪಸ್ವಿಯಾದ ಸುಮದನ ಈ ರೀತಿಯಾದ ಮಾತನ್ನು ಕೇಳಿ, ಕಾಮಸೇನೆಯವರಾದ ರಂಭಾದಿ ಅಪ್ಸರಸ್ತ್ರೀಯರು ಇಂತೆಂದರು.

೨. ಕಾಂತನೇ! ನಿನ್ನ ತಪಸ್ಸಿನಿಂದ ನಾವೆಲ್ಲರೂ ಇಲ್ಲಿ ಬಂದಿದ್ದೇವೆ. ಅವರ ಯೌವನವನ್ನೆಲ್ಲಾ ಅನುಭವಿಸು. ತಪಸ್ಸನ್ನು ಬಿಡು.

೩. ಸಂಪಿಗೆಯ ಹೂವಿನಂತಿರುವ ಮೈಯುಳ್ಳ ಘೃತಾಚಿಯು ಕರ್ಪೂರದ ವಾಸನೆಯಂತೆ ವಾಸನೆಯುಳ್ಳ ನಿನ್ನ ಮುಖಾಮೃತವನ್ನು ಪಾನಮಾಡಲಿ.

ಏತಾಂ ಮಹಾಭಾಗ ಸುಶೋಭಿವಿಭ್ರಮಾಂ
ಮನೋಹರಾಂಗೀಂ ಘನಪೀನಸತ್ಕುಚಾಂ ।
ಕಾಂತೋಪಭುಂಕ್ಷ್ವಾಶು ನಿಜೋಗ್ರಪುಣ್ಯತಃ
ಪ್ರಾಪ್ತಾಂ ಪುನಸ್ತ್ವಂ ತ್ಯಜ ದುಃಖಸಾಗರಂ ॥ ೪ ॥

ಮಾಮುಪ್ಯಸರ್ವ್ಯಾಭರಣೋಪಶೋಭಿತಾಂ
ಮಂದಾರಮಾಲಾಪರಿಶೋಭಿವಕ್ಷಸಂ ।
ನಾನಾರತಾಖ್ಯಾನವಿಚಾರಚಂಚುರಾಂ
ದೃಢಂ ಯಥಾ ಸ್ಯಾತ್ಪರಿರಂಭಣಂ ಕುರು ॥ ೫ ॥

ಪಿಬಾಮೃತಂ ಮಾಮುಕವಕ್ತ್ರನಿರ್ಗತಂ
ವಿಮಾನಮಾರುಹ್ಯ ವರಂ ಮಯಾ ಸಹ ।
ಸುಮೇರುಶೃಂಗಂ ಬಹುಪುಣ್ಯಸೇವಿತಂ
ಸಂಪ್ರಾಪ್ಯ ಭೋಗಂ ಕುರು ಸತ್ತಪಃ ಫಲಂ ॥ ೬ ॥

ತಿಲೋತ್ತಮಾ ಯೌವನರೂಪಶೋಭಿತಾ
ಗೃಹ್ಣಾತು ತೇ ಮೂರ್ಧನಿ ತಾಪವಾರಣೇ ।

---

೪. ಎಲೈ! ಪುಣ್ಯಾತ್ಮನೇ, ದೊಡ್ಡದಾದ ಸ್ತನಗಳುಳ್ಳ, ಅಲಂಕೃತಳೂ, ಸುಂದರಳೂ ಆದ ಈಕೆಯನ್ನು ನೀನು ನಿನ್ನ ಪುಣ್ಯದಿಂದ ಅನುಭವಿಸು. ದುಃಖ ಸಾಗರವನ್ನು ಬಿಡು.

೫. ನಾನೂ ಕೂಡ ಉತ್ತಮವಾದ ಒಡವೆಗಳನ್ನು ಹಾಕಿಕೊಂಡು ಎದೆಯು ತುಂಬುವಂತೆ ಪಾರಿಜಾತದ ಉತ್ತಮವಾದ ಮಾಲೆಯನ್ನು ಹಾಕಿಕೊಂಡಿದ್ದೇನೆ. ಅನೇಕಬಗೆಯಲ್ಲಿ ರತಿಕ್ರೀಡೆಯನ್ನು ತೋರಿಸಬಲ್ಲೆ. ಇಂತಹ ನನ್ನನ್ನು ಗಟ್ಟಿಯಾಗಿ ಆಲಿಂಗಿಸಿಕೋ.

೬. ನನ್ನೊಡನೆ ವಿಮಾನದಲ್ಲಿ ಕುಳಿತು ನನ್ನ ಮುಖದಿಂದ ಬಂದ ಅಮೃತ ವನ್ನು ಪಾನಮಾಡು ಪುಣ್ಯದಿಂದ ಲಭ್ಯವಾಗುವ, ಮೇರುಪರ್ವತದ ಶೃಂಗದಲ್ಲಿ ತಪಸ್ಸಿಗೆ ಫಲವಾದ ಭೋಗವನ್ನು ಅನುಭವಿಸು.

ಸುಚಾಮರೌ ಸಂತತಧಾರಯಾಂಕಿತೌ
ಗಂಗಾಪ್ರವಾಹಾವಿವ ಸುಂದರೋತ್ತಮ ॥ ೭ ॥

ಶೃಣುಷ್ವ ಭೋಃ ಕಾಮಕಥಾ ಮನೋಹರಾಃ
ಪಿಬಾಮೃತಂ ದೇವಗಣಾದಿವಾಂಛಿತಂ ।
ಉದ್ಯಾನಮಾಸಾದ್ಯ ಚ ನಂದನಾಭಿದಂ
ವರಾಂಗನಾಭಿರ್ವಿಹರಂ ಕುರು ಪ್ರಭೋ ॥ ೮ ॥

ಇತ್ಯುಕ್ತಮಾಕರ್ಣ್ಯ ಮಹಾಮತಿರ್ನೃಪೋ
ವಿಚಾರಯಾಮಾಸ ಕುತೋ ಹ್ಯುಪಸ್ಥಿತಃ ।
ಮಯಾ ಸುಸೃಷ್ಟಾತ್ತಪಸಃ ಸುರಾಂಗನಾ
ಪ್ರತ್ಯೂಹ ಏವಾತ್ರ ವಿಧೇಯಮೇವ ಕಿಂ ॥ ೯ ॥

ಇತಿ ಚಿಂತಾತುರೋ ರಾಜಾ ಸ್ವಾಂತೇ ಸಂಚಿಂತ್ಯ ಧೀರಧೀಃ ।
ಜಗಾದ ಮತಿಮಾನ್ವೀರಃ ಸುಮದೋ ದೇವತಾಂಗನಾಃ ॥ ೧೦ ॥

---

೭. ಯೌವನವೂ ರೂಪವೂ ಉಳ್ಳ ತಿಲೋತ್ತಮೆಯು ಗಂಗಾಪ್ರವಾಹದಂತಿರುವ ಚಾಮರಗಳನ್ನು ನಿನ್ನ ತಲೆಯ ಮೇಲೆ ಹಿಡಿಯಲಿ.

೮. ಅನೇಕ ಬಗೆಯಾದ ಕಾಮನ ಕಥೆಗಳನ್ನು ಕೇಳುತ್ತಾ, ದೇವತೆಗಳೊಡನೆ ಅಧರಾಮೃತವನ್ನು ಪಾನಮಾಡುತ್ತಾ ನಂದನಾದಿ ವನಗಳಲ್ಲಿದ್ದುಕೊಂಡು ವಿಹರಿಸು.

೯. ಈ ರೀತಿ ಹೇಳುತ್ತಿರುವುದನ್ನು ಕೇಳಿ, ಇವರೇಕೆ ಬಂದರೆಂಬುದನ್ನು ಯೋಚಿಸಿದನು. ತನ್ನ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಬಂದಿರತಕ್ಕ ದೇವಸ್ತ್ರೀಯರ ಗುಂಪು ಎಂದು ತಿಳಿದನು.

೧೦. ಈ ರೀತಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಆ ಸುಮದನು ದೇವತಾಸ್ತ್ರೀಯರಿಗಿಂತೆಂದನು.

**ಯೂಯಂ ತು ಮಮ ಚಿತ್ತಸ್ಥಾ ಜಗನ್ಮಾತೃಸ್ವರೂಪಕಾಃ ।**
**ಮಯಾ ಸಂಚಿಂತ್ಯತೇ ಯಾ ಹಿ ಸ್ಯಾಽಪಿ ತ್ವದ್ರೂಪಿಣೀ ಮತಾ ॥ ೧೧ ॥**

**ಇದಂ ತುಚ್ಛಂ ಸ್ವರ್ಗಸೌಖ್ಯಂ ತ್ವಯೋಕ್ತಂ ಸವಿಕಲ್ಪಕಂ ।**
**ಮತ್ಸ್ವಾಮಿನೀ ಮಯಾ ಭಕ್ತ್ಯಾ ಸೇವಿತಾ ದಾಸ್ಯತೇ ಪರಂ ॥ ೧೨ ॥**

**ಯತ್ಕೃಪಾತೋ ವಿಧಿಃ ಸತ್ಯಲೋಕಂ ಪ್ರಾಪ್ತೋ ಮಹಾನಭೂತ್ ।**
**ಸಾ ಮೇ ದಾಸ್ಯತಿ ಸರ್ವಂ ಹಿ ಭಕ್ತದುಃಖಾನ್ತಕಾರಿಣೀ ॥ ೧೩ ॥**

**ಕಿಂ ನಂದನಂ ಕಿಂ ತು ಗಿರಿಃ ಕನಕೇನ ಸುಮಂಡಿತಃ ।**
**ಕಿಂ ಸುಧಾ ಸ್ವಲ್ಪಪುಣ್ಯೇನ ಪ್ರಾಪ್ಯಾ ದಾನವದುಃಖಿತಾ ॥ ೧೪ ॥**

**ಇತಿ ವಾಕ್ಯಂ ಸಮಾಕರ್ಣ್ಯ ಕಾಮಸ್ತು ವಿವಿಧೈಶ್ಯರೈಃ ।**
**ಪ್ರಾಹರನ್ನರದೇವಸ್ಯ ಕರ್ತುಂ ಕಿಂಚಿನ್ನ ವೈ ಪ್ರಭುಃ ॥ ೧೫ ॥**

---

೧೧. ನೀವೆಲ್ಲರೂ ನನ್ನ ಚಿತ್ತದಲ್ಲಿ ನೆಲೆಸಿರುವ ಆ ಪಾರ್ವತಿಯ ಸ್ವರೂಪರಾದವರೇನೆ. ನಾನು ಯಾರನ್ನು ಚಿಂತಿಸುತ್ತಿರುವೆನೋ ಅವಳು ನಿಮ್ಮ ರೂಪದಲ್ಲೇ ಇರುವಳು.

೧೨. ಈ ಸ್ವರ್ಗಸುಖವೆಂಬುದು ತುಚ್ಛವಾದುದು. ಕ್ಷಣಿಕವಾದುದು. ನನ್ನ ತಾಯಿಯಾದ ಪಾರ್ವತಿಯನ್ನು ಭಕ್ತಿಯಿಂದ ಪೂಜಿಸಿದರೆ ಉತ್ತಮವಾದ ವರವನ್ನು ಕೊಡುತ್ತಾಳೆ.

೧೩. ಯಾವ ತಾಯಿಯ ಕೃಪೆಯಿಂದಲೇ ಬ್ರಹ್ಮನೂ ಕೂಡ ಸತ್ಯಲೋಕವನ್ನು ಹೊಂದಿ ಉತ್ತಮನೆನಿಸಿಕೊಂಡನೋ ಆಕೆಯನ್ನು ಸೇವಿಸಿದರೆ ಸರ್ವವನ್ನೂ ಕೊಡುತ್ತಾಳೆ. ಅಲ್ಲದೇ ದುಃಖವನ್ನು ನಾಶಮಾಡುತ್ತಾಳೆ.

೧೪. ನಂದನವನ, ಮೇರುಪರ್ವತ, ಅಮೃತ ಇವೆಲ್ಲವೂ ಅಲ್ಪವಾದುವು. ಇವನ್ನು ಸ್ವಲ್ಪ ಪುಣ್ಯದಿಂದಲೇ ಏಕೆ ಹೊಂದಲಿ ?

೧೫. ಹೀಗೆನ್ನುವುದನ್ನು ಕೇಳಿ ಕಾಮನು ತನ್ನ ಬಾಣಗಳಿಂದ ಆತನನ್ನು ಎಷ್ಟು ಹೊಡೆದರೂ, ಆವನಿಗೆ ತೊಂದರೆಯನ್ನುಂಟುಮಾಡಲಾಗಲಿಲ್ಲ.

ಕಟಾಕ್ಷೈಃ ನೂಪುರಾರಾವೈಃ ಪರಿರಂಭೈರ್ವಿಲೋಕಿತೈಃ ।
ನ ತಸ್ಯ ಚಿತ್ತವಿಭ್ರಾಂತಿಂ ಕರ್ತುಂ ಶಕ್ತಾ ವರಾಂಗನಾಃ ॥ ೧೬ ॥

ಗತಾ ಯಥಾಗತಂ ಶಕ್ರಂ ಜಗದುರ್ಧೀರಧೀರ್ನೃಪಃ ।
ತುಚ್ಛ್ರುತ್ವಾ ಮಘವಾ ಭೀತೋ ಮೋಘಮಾರಂಭಮಾತ್ಮನಃ ॥ ೧೭ ॥

ಅಥ ನಿಶ್ಚಿತಮಾಲೋಕ್ಯ ಸ್ವಪದಾಬ್ಜೇಽಸ್ಯ ಚಾಂಬಿಕಾ ।
ಜಿತೇಂದ್ರಿಯಂ ಮಹಾರಾಜಂ ಪ್ರತ್ಯಕ್ಷಾಭೂತ್ಸ್ವಯೋಗಿನೀ ॥ ೧೮ ॥

ಪಂಚಾಸ್ಯಪೃಷ್ಠಲಲಿತಾ ಪಾಶಾಂಕುಶಧರಾ ವರಾ ।
ಧನುರ್ಬಾಣಧರಾ ಮಾತಾ ಜಗತ್ಪಾವನಪಾವನೀ ॥ ೧೯ ॥

ತಾಂ ವೀಕ್ಷ್ಯ ಮಾತರಂ ಧೀಮಾನ್ ಸೂರ್ಯಕೋಟಿಸಮಪ್ರಭಾಂ ।
ಧನುರ್ಬಾಣಸೃಣೀಪಾಶಾನ್ ದಧಾನಾಂ ಹರ್ಷಮಾಪ್ತವಾನ್ ॥ ೨೦ ॥

---

೧೬. ಕಟಾಕ್ಷ, ಕಾಲುಕಡಗಗಳ ಶಬ್ದ, ಆಲಿಂಗನ, ನೋಟ ಮುಂತಾದ ಕಾಮಚೇಷ್ಟೆಗಳಿಂದ ಅವನ ಮನೋವಿಕಾರವನ್ನು ಅಪ್ಸರಸ್ತ್ರೀಯರು ಮಾಡಲಾರದೆ

೧೭. ಇಂದ್ರನಲ್ಲಿಗೆ ಹೋಗಿ ಈ ರಾಜನು ಇಂದ್ರಿಯನಿಗ್ರಹಿ ಎಂದು ತಿಳಿಸಿದರು. ಅದನ್ನು ಕೇಳಿ ಆ ಇಂದ್ರನು ತನ್ನ ಕೆಲಸವು ವ್ಯರ್ಥವಾದುದನ್ನು ನೋಡಿ ಹೆದರಿದನು.

೧೮. ಅಂಬಿಕೆಯು ತನ್ನ ಪಾದಕಮಲದಲ್ಲಿ ಮನಸ್ಸಿಟ್ಟಿರುವ ಈತನ ನಿಶ್ಚಯವನ್ನೂ, ಜಿತೇಂದ್ರಿಯತೆಯನ್ನೂ ತಿಳಿದು ಅವನಿಗೆ ಪ್ರತ್ಯಕ್ಷಳಾದಳು.

೧೯. ಆ ಮಾತೆಯು ಧನುರ್ಬಾಣಗಳನ್ನು ಧರಿಸಿ, ಸಿಂಹದ ಮೇಲೆ ಕುಳಿತು ಕೊಂಡು ಬಂದಳು.

೨೦. ಕೋಟಿಸೂರ್ಯರಂತೆ ಬೆಳಗುತ್ತಾ ಧನುಸ್ಸು, ಬಾಣ, ಪಾಶ, ಅಂಕುಶ ಗಳನ್ನು ಧರಿಸಿ ಬಂದಿರುವ ಆಕೆಯನ್ನು ನೋಡಿ ಸಂತುಷ್ಟನಾದನು.

**ಶಿರಸಾ ಬಹುಶೋ ನತ್ವಾ ಮಾತರಂ ಭಕ್ತಿಭಾವಿತಾಂ ।**
**ಹಸಂತೀಂ ನಿಜದೇಹೇ ತು ಸ್ಪೃಶಂತೀಂ ಪಾಣಿನಾ ಮುಹುಃ ॥ ೨೧ ॥**

**ತುಷ್ಟಾವ ಭಕ್ತ್ಯುತ್ಕಲಿತಚಿತ್ತವೃತ್ತಿರ್ಮಹಾಮತಿಃ ।**
**ಗದ್ಗದಸ್ವರಸಂಯುಕ್ತಃ ಕಂಟಕಾಂಗೋಪಶೋಭಿತಃ ॥ ೨೨ ॥**

**ಜಯ ದೇವಿ ಮಹಾದೇವಿ ಭಕ್ತವೃಂದೈಕಸೇವಿತೇ**
**ಬ್ರಹ್ಮರುದ್ರಾದಿದೇವೇಂದ್ರಸೇವಿತಾಂಘ್ರಿಯುಗೇಽನಘೇ ॥ ೨೩ ॥**

**ಮಾತಸ್ತವ ಕಲಾವಿದ್ಧಮೇತದ್ಭಾತಿ ಚರಾಚರಂ ।**
**ತ್ವದೃತೇ ನಾಸ್ತಿ ಸರ್ವಂ ತನ್ಮಾತರ್ಭದ್ರೇ ನಮೋಽಸ್ತು ತೇ ॥ ೨೪ ॥**

**ಮಹೀ ತ್ವಯಾಧಾರಶಕ್ತ್ಯಾ ಸ್ಥಾಪಿತಾ ಚಲತೀಪ ನ ।**
**ಸಪರ್ವತವನೋದ್ಯಾನದಿಗ್ಗಜೈರುಪಶೋಭಿತಾ ॥ ೨೫ ॥**

**ಸೂರ್ಯಸ್ತಪತಿ ಖೇ ತೀಕ್ಷ್ಣೈರಂಶುಭಿಃ ಪ್ರತಪನ್ಮಹೀಂ ।**
**ತ್ವಚ್ಛಕ್ತ್ಯಾ ವಸುಧಾಸಂಸ್ಥಂ ರಸಂ ಗೃಹ್ಣನ್ವಿಮುಂಚತಿ ॥ ೨೬ ॥**

---

೨೧. ಭಕ್ತಿಗೆ ಪ್ರಸನ್ನಳಾಗಿ ಬಂದು ಸಂತೋಷದಿಂದ ತನ್ನನ್ನು ಕೈಯಿಂದ ಸವರುತ್ತಿರುವ ಆ ತಾಯಿಯನ್ನೇ ಬಹುವಾಗಿ ನಮಸ್ಕರಿಸಿದನು.

೨೨. ಭಕ್ತಿಯಿಂದ ಹೊರಹೊಮ್ಮುತ್ತಿರುವ ಗದ್ಗದಧ್ವನಿಯಿಂದ ರೋಮಾಂಚಿತನಾಗಿ ಹೀಗೆ ಸ್ತೋತ್ರಮಾಡಿದನು.

೨೩. ಓ ಮಹಾದೇವಿ, ಭಕ್ತರಿಂದ ಸೇವಿಸಿಕೊಳ್ಳುತ್ತಿರುವ ಪಾದಗಳುಳ್ಳವಳೇ, ಬ್ರಹ್ಮರುದ್ರರೇ ಮುಂತಾದವರಿಂದ ಸೇವಿಸಲ್ಪಡತಕ್ಕವಳೇ, ನಿನಗೆ ಜಯವಾಗಲಿ.

೨೪. ತಾಯಿ, ನಿನ್ನ ಹದಿನಾರನೆಯ ಒಂದಂಶದಿಂದಕೂಡಿರುವ ಈ ಪ್ರಪಂಚವು ಈ ರೀತಿ ಪ್ರಕಾಶಿಸುತ್ತದೆ. ನಿನ್ನನ್ನುಳಿದು ಯಾವುದೂ ಇಲ್ಲ. ನಿನಗೆ ನಮಸ್ಕಾರವು.

೨೫. ನೀನು ಆಧಾರಶಕ್ತಿಯಿಂದಿಟ್ಟಿರುವುದರಿಂದಲೇ ಈ ಭೂಮಿಯು ಅಲ್ಲಾಡದೇ ನಿಂತಿದೆ.

೨೬. ಅಮ್ಮಾ! ನಿನ್ನ ಅನುಗ್ರಹದಿಂದಲೇ ಸೂರ್ಯನು ಕಾಂತಿಯಿಂದ ಪ್ರಕಾಶಿಸುವುದು ಮತ್ತು ನೀರನ್ನು ಆಕರ್ಷಿಸಿ ಅದನ್ನು ಜನರಿಗೆ ಕೊಡುವನು.

ಅಂತರ್ಬಹಿಃಸ್ಥಿತೋ ವಹ್ನಿರ್ಲೋಕಾನಾಂ ಪ್ರಕರೋತಿ ಶಂ ।
ತ್ವತ್ಪ್ರತಾಪಾನ್ಮಹಾದೇವಿ ಸುರಾಸುರನಮಸ್ಕೃತೇ ॥ ೨೭ ॥

ತ್ವಂ ವಿದ್ಯಾ ತ್ವಂ ಮಹಾಮಾಯಾ ವಿಷ್ಣೋರ್ಲೋಕೈಕಪಾವನೀ ।
ತ್ವಂ ಶಕ್ತ್ಯಾ ಸೃಜಸೀದಂ ತ್ವಂ ಪಾಲಯಸ್ಯಪಿಮೋಹಿನೀ ॥ ೨೮ ॥

ತ್ವತ್ತಃ ಸರ್ವೇ ಸುರಾಃ ಪ್ರಾಪ್ಯ ಸಿದ್ಧಿಂ ಸುಖಮಯಂತಿ ವೈ ।
ಮಾಂ ಪಾಲಯ ಕೃಪಾನಾಥೇ ವಂದಿತೇ ಭಕ್ತವಲ್ಲಭೇ ॥ ೨೯ ॥

ರಕ್ಷ ಮಾಂ ಸೇವಕಂ ಮಾತಸ್ತ್ವದೀಯಚರಣಾಂಬುಜೇ ।
ಕುರು ಮೇ ವಾಂಛಿತಾಂ ಸಿದ್ಧಿಂ ಮಹಾಪುರುಷಪೂರ್ವಜೇ ॥ ೩೦ ॥

॥ ಸುಮತಿರುವಾಚ ॥

ಏವಂ ತುಷ್ಟಾ ಜಗನ್ಮಾತಾ ವೃಣೀಷ್ವ ವರಮುತ್ತಮಂ ।
ಉವಾಚ ಭಕ್ತಂ ಸುಮದಂ ತಪಸಾ ಕೃಶದೇಹಿನಂ ॥ ೩೧ ॥

---

೨೭. ಅಮ್ಮಾ! ನಿನ್ನ ಪ್ರತಾಪದಿಂದಲೇ ಅಗ್ನಿಯು ದೇಹಿಗಳ ಒಳಗೂ ಹೊರಗೂ ಪ್ರಕಾಶಿಸುತ್ತಾನೆ.

೨೮. ನೀನೇ ವಿದ್ಯೆಯು. ನೀನೇ ಮಹಾಮಾಯೆಯು. ಲೋಕಪಾವನೆಯೂ ನೀನೇ. ಈ ಪ್ರಪಂಚವನ್ನು ಸೃಷ್ಟಿಸುತ್ತೀಯೆ. ಮತ್ತು ಕಾಪಾಡುತ್ತೀಯೆ.

೨೯. ನಿನ್ನಿಂದಲೇ ಎಲ್ಲಾ ದೇವತೆಗಳೂ ಸಿದ್ಧಿಯನ್ನು ಹೊಂದಿ ಸುಖಿಸುತ್ತಿದ್ದಾರೆ. ಭಕ್ತಪ್ರಿಯಳೇ, ನನ್ನನ್ನು ಕಾಪಾಡು.

೩೦. ತಾಯಿಯೇ, ನಿನ್ನ ಪಾದಸೇವಕನಾದ ನನ್ನನ್ನು ಕಾಪಾಡು. ವಿಷ್ಣುವಿನ ಸೋದರಿಯಾದ ತಾಯಿಯೇ, ನನ್ನ ಇಷ್ಟಾರ್ಥವನ್ನು ಪೂರ್ತಿಮಾಡು.

೩೧. ಸುಮತಿಯು ಹೇಳಿದನು:—ಹೀಗೆ ಸ್ತುತಿಸಲ್ಪಟ್ಟ ದೇವಿಯು, ಎಲೈ ಸುಮದನೇ, ವರವನ್ನು ಕೇಳಿಕೋ ಎಂದು ಹೇಳಿದಳು.

ಇತ್ಯೇತದ್ವಾಕ್ಯಮಾಕರ್ಣ್ಯ ಪ್ರಹೃಷ್ಟಃ ಸುಮದೋ ನೃಪಃ ।
ವವ್ರೇ ನಿಜಂ ಹೃತಂ ರಾಜ್ಯಂ ಹತದುರ್ಜನಕಂಟಕಂ ॥ ೩೨ ॥

ಮಹೇಶಚರಣದ್ವಂದ್ವೇ ಭಕ್ತಿಮವ್ಯಭಿಚಾರಿಣೀಂ ।
ಪ್ರಾಂತೇ ಮುಕ್ತಿಂ ತು ಸಂಸಾರವಾರಿಧೇಸ್ತರಣೀಂ ಪುನಃ ॥ ೩೩ ॥

॥ ಕಾಮಾಕ್ಷ್ಯೋವಾಚ ॥

ರಾಜ್ಯಂ ಪ್ರಾಪ್ನುಹಿ ಸುಮದ ಸರ್ವತ್ರ ಹತಕಂಟಕಂ ।
ಮಹಿಳಾರತ್ನಸಂಜುಷ್ಟಪಾದಪದ್ಮದ್ವಯೋ ಭವ ॥ ೩೪ ॥

ತವ ವೈರಿಪರಾಭೂತಿರ್ಮಾ ಭೂಯಾತ್ಸುಮದಾಭಿದ ।
ಯದಾ ತು ರಾವಣಂ ಹತ್ವಾ ರಘುನಾಥೋ ಮಹಾಯಶಾಃ ॥ ೩೫ ॥

ಕರಿಷ್ಯತ್ಯಶ್ವಯಜ್ಞಂ ಹಿ ಸರ್ವಭಾರೋಪಶೋಭಿತಂ ।
ತಸ್ಯ ಭ್ರಾತಾ ಮಹಾವೀರಃ ಶತ್ರುಘ್ನಃ ಪರವೀರಹಾ ॥ ೩೬ ॥

ಪಾಲಯನ್ ಹಯಮಾಯಾಸ್ಯತ್ಯತ್ರ ವೀರಾದಿಭಿರ್ವೃತಃ ।
ತಸ್ಮೈ ಸರ್ವಂ ಸಮರ್ಪ್ಯ ತ್ವಂ ರಾಜ್ಯಮೃದ್ಧಿಧನಾದಿಕಂ ॥ ೩೭ ॥

---

೩೨-೩೩. ಈ ಮಾತನ್ನು ಕೇಳಿ ಸಂತೋಷಗೊಂಡ ಸುಮದನು ಶತ್ರುರಹಿತವಾದ ತನ್ನ ರಾಜ್ಯವನ್ನು ಕೊಡುವಂತೆಯೂ, ಮಹೇಶನಲ್ಲಿ ನಿಶ್ಚಲವಾದ ಭಕ್ತಿಯಿರುವಂತೆಯೂ, ಕೊನೆಯಲ್ಲಿ ಮುಕ್ತಿ ಬರುವಂತೆಯೂ ಆಕೆಯನ್ನು ಕೇಳಿಕೊಂಡನು.

೩೪. ಕಾಮಾಕ್ಷಿಯು ಹೇಳಿದಳು :—ಎಲೈ ಸುಮದನೇ, ಶತ್ರುರಹಿತವಾದ ರಾಜ್ಯವನ್ನು ಹೊಂದು. ಉತ್ತಮರಾದ ಸ್ತ್ರೀಯರು ನಿನ್ನ ಪಾದಪದ್ಮಗಳನ್ನು ಸೇವಿಸಲಿ.

೩೫—೩೮. ಎಲೈ ಸುಮದನೇ, ನಿನಗೆ ವೈರಿಗಳಿಂದ ಅಪಜಯವು ಬೇಡ. ರಾವಣನನ್ನು ಶ್ರೀರಾಮನು ಕೊಂದು ಅಶ್ವಮೇಧಯಾಗವನ್ನು ಮಾಡುವಾಗ, ಅವನ ತಮ್ಮನಾದ ಶತ್ರುಘ್ನನು ಕುದುರೆಯನ್ನು ರಕ್ಷಿಸುತ್ತಾ ಬರುವನು. ಅವನಿಗೆ ನೀನೆಲ್ಲ

ಪಾಲಯಿಷ್ಯಸಿ ಯೋಧೈಸ್ತ್ವೈರ್ಧನುರ್ಧಾರಿಭಿರುತ್ಕಟೈಃ ।
ತತಃ ಪೃಥಿವ್ಯಾಂ ಸರ್ವತ್ರ ಭ್ರಮಿಷ್ಯಸಿ ಮಹಾಮತೇ ॥ ೩೮ ॥

ತತೋ ರಾಮಂ ನಮಸ್ಕೃತ್ಯ ಬ್ರಹ್ಮೇಂದ್ರೇಶಾದಿಸೇವಿತಂ ।
ಮುಕ್ತಿಂ ಪ್ರಾಪ್ಸ್ಯಸಿ ದುಷ್ಪ್ರಾಪಾಂ ಯೋಗಿಭಿರ್ಯಮಸಾಧನೈಃ ॥ ೩೯ ॥

ತಾವತ್ಕಾಲಮಿಹ ಸ್ಥಾತಾ ಯಾವದ್ರಾಮಹಯಾಗಮಃ ।
ಪಶ್ಚಾತ್ತ್ವಾಂ ತು ಸಮುದ್ಧೃತ್ಯ ಗನ್ತಾಸ್ಮಿ ಪರಮಂ ಪದಂ ॥ ೪೦ ॥

ಇತ್ಯುಕ್ತ್ವಾಂತರ್ದಧೇ ದೇವೀ ಸುರಾಸುರನಮಸ್ಕೃತಾ ।
ಸುಮದೋಪ್ಯಹಿಚ್ಛತ್ರಾಯಾಂ ಶತ್ರೂನ್ ಹತ್ವಾ ನೃಪೋಽಭವತ್ ॥ ೪೧ ॥

ಏಷ ರಾಜಾ ಸಮರ್ಥೋಽಪಿ ಬಲವಾಹನಸಂಯುತಃ ।
ನ ಗ್ರಹೀಷ್ಯತಿ ತೇ ವಾಹಂ ಮಹಾಮಾಯಾಸುಶಿಕ್ಷಿತಃ ॥ ೪೨ ॥

ಶ್ರುತ್ವಾ ಪ್ರಾಪ್ತಂ ಪುರೀಪಾರ್ಶ್ವೇ ಹಯಮೇಧಹಯೋತ್ತಮಂ ।
ತ್ವಾಂ ಚ ಸರ್ವಮಹಾರಾಜೈಃ ಸೇವಿತಾಙ್ಘ್ರಿಂ ಮಹಾಮತಿಃ ॥ ೪೩ ॥

---

ವನ್ನೂ ಕೊಟ್ಟು, ಆ ಭಟರೊಂದಿಗೆ ಕುದುರೆಯನ್ನು ರಕ್ಷಿಸುತ್ತಾ ಎಲ್ಲಾ ಕಡೆಯಲ್ಲೂ ಸಂಚರಿಸುತ್ತೀಯೆ.

೩೯. ಅನಂತರ ತ್ರಿಮೂರ್ತಿಗಳಿಂದಲೂ ಸೇವಿತನಾದ ರಾಮನಿಗೆ ನಮಸ್ಕರಿಸಿ ಯೋಗಿಗಳಿಗೂ ಅಸಾಧ್ಯವಾದ ಮುಕ್ತಿಯನ್ನು ಹೊಂದುತ್ತೀಯೆ.

೪೦. ಆ ರಾಮನ ಕುದುರೆ ಬರುವವರೆಗೂ ಇಲ್ಲಿಯೇ ಇರುತ್ತೇನೆ. ಅನಂತರ ನನ್ನ ಸ್ಥಾನಕ್ಕೆ ಹೋಗುತ್ತೇನೆ.

೪೧. ಹೀಗೆಂದು ಹೇಳಿ ಆ ತಾಯಿಯು ಅಂತರ್ಧಾನಳಾದಳು. ಸುಮದನೂ ಕೂಡ ಶತ್ರುಗಳನ್ನು ಜಯಿಸಿ ತನ್ನ ರಾಜ್ಯವನ್ನು ಹೊಂದಿದನು.

೪೨. ಈ ರಾಜನು ನಿನ್ನ ಕುದುರೆಯನ್ನು ಹಿಡಿಯುವಷ್ಟು ಬಲಿಷ್ಠನಾದರೂ, ಮಹಾಮಾಯೆಯು ಹೇಳಿರುವುದರಿಂದ ಅದನ್ನು ಹಿಡಿಯುವುದಿಲ್ಲ.

೪೩-೪೪. ಯಜ್ಞಾಶ್ವವು ಪಟ್ಟಣದ ಹತ್ತಿರ ಬಂದಿರುವುದನ್ನೂ, ನೀನು ರಾಜ

**ಸರ್ವಂ ದಾಸ್ಯತಿ ಸರ್ವಜ್ಞ ರಾಜಾ ಸುಮದನಾಮಧೃತ್ ।**
**ಅಧುನಾ ತನ್ಮಹಾರಾಜ ರಾಮಚಂದ್ರಪ್ರತಾಪತಃ ॥ ೪೪ ॥**

**॥ ಶೇಷ ಉವಾಚ ॥**

**ಇತಿ ವೃತ್ತಂ ಸಮಾಕರ್ಣ್ಯ ಸುಮದಸ್ಯ ಮಹಾಯಶಾಃ ।**
**ಸಾಧು ಸಾಧ್ವಿತಿ ಚೋವಾಚ ಜಹರ್ಷ ಮತಿಮಾನ್ಬಲೀ ॥ ೪೫ ॥**

**ಅಹಿಚ್ಛತ್ರಾಪತಿಃ ಸರ್ವೈಃ ಸ್ವಗಣೈಃ ಪರಿವಾರಿತಃ ।**
**ಸಭಾಯಾಂ ಸುಖಮಾಸ್ತೇ ಯೋ ಬಹುರಾಜನ್ಯಸೇವಿತಃ ॥ ೪೬ ॥**

**ಬ್ರಾಹ್ಮಣಾ ವೇದವಿದುಷೋ ವೈಶ್ಯಾ ಧನಸಮೃದ್ಧಯಃ ।**
**ರಾಜಾನಂ ಪರ್ಯುಪಾಸಂತೇ ಸುಮದಂ ಶೋಭಿಯಾನ್ವಿತಂ ॥ ೪೭ ॥**

**ವೇದವಿದ್ಯಾವಿನೋದೇನ ನ್ಯಾಯಿನೋ ಬ್ರಾಹ್ಮಣಾ ವರಾಃ ।**
**ವದಂತಿ ಚಾಶಿಷಂ ಭೂಪಂ ಸರ್ವಲೋಕೈಕರಕ್ಷಕಂ ॥ ೪೮ ॥**

---

ರಿಂದ ಸೇವಿಸಲ್ಪಟ್ಟು ಬಂದಿರುವುದನ್ನೂ, ಕೇಳಿ ಆ ಸುಮದನು ಆ ರಾಮಚಂದ್ರನ ಪ್ರತಾಪದಿಂದ ಎಲ್ಲವನ್ನೂ ಕೊಟ್ಟುಬಿಡುತ್ತಾನೆ.

೪೫. ಶೇಷನು ಹೇಳಿದನು:—ಶತ್ರುಘ್ನನು ಈ ಕಥೆಯನ್ನು ಕೇಳಿ ಸಾಧು ಸಾಧು ಎಂದು ಹೇಳುತ್ತಾ, ಸಂತೋಷಪಟ್ಟನು,

೪೬. ಸುಮದನು ಪರಿವಾರದವರಿಂದಲೂ, ಇತರರಿಂದಲೂ, ಸೇವಿಸಲ್ಪಡುತ್ತಾ ಸಭೆಯಲ್ಲಿ ಸುಖದಿಂದಿದ್ದನು.

೪೭. ಆಗ ಬ್ರಾಹ್ಮಣರು ವೇದಾಧ್ಯಯನ ಮಾಡುತ್ತಾ ಪಂಡಿತರಾಗಿದ್ದರು. ವೈಶ್ಯರು ವ್ಯಾಪಾರದಿಂದ ಧನವನ್ನು ಗಳಿಸುತ್ತಿದ್ದರು. ಹೀಗಿದ್ದು ರಾಜನನ್ನು ಸೇವಿಸುತ್ತಿದ್ದರು.

೪೮. ಬ್ರಾಹ್ಮಣರು ಯಾವಾಗಲೂ ವೇದಾಧ್ಯಯನ ಮಾಡುತ್ತಾ, ನ್ಯಾಯ ಮಾರ್ಗದಲ್ಲಿರುತ್ತಾ ಆ ಸುಮದನನ್ನು ಆಶೀರ್ವದಿಸುತ್ತಿದ್ದರು.

ಏತಸ್ಮಿನ್ ಸಮಯೇ ಕಶ್ಚಿದಾಗತ್ಯ ನೃಪತಿಂ ಜಗೌ ।
ಸ್ವಾಮಿನ್ ನ ಜಾನೇ ಕಸ್ಯಾಸ್ತಿ ಹಯಃ ಪತ್ರಧರೋಽಂತಿಕೇ ॥ ೪೯ ॥

ತಚ್ಛ್ರುತ್ವಾ ಸೇವಕಶ್ರೇಷ್ಠಂ ಪ್ರೇಷಯಾಮಾಸ ಸತ್ವರಃ ।
ಜಾನೀಹಿ ಕಸ್ಯ ರಾಜ್ಞೋಽಯಮಶ್ವೋ ಮಮ ಪುರಾಂತಿಕೇ ॥ ೫೦ ॥

ಗತ್ವಾಥ ಸೇವಕಸ್ತತ್ರ ಜ್ಞಾತ್ವಾ ವೃತ್ತಾಂತಮಾದಿತಃ ।
ನಿವೇದಯಾಮಾಸ ನೃಪಂ ಮಹಾರಾಜನಸೇವಿತಂ ॥ ೫೧ ॥

ಸ ಶ್ರುತ್ವಾ ರಘುನಾಥಸ್ಯ ಹಯಂ ಚಿರಮನುಸ್ಮರನ್ ।
ಆಜ್ಞಾಪಯಾಮಾಸ ಜನಂ ಸರ್ವಂ ರಾಜಾ ವಿಶಾರದಃ ॥ ೫೨ ॥

ಲೋಕಾ ಮದೀಯಾಸ್ಸರ್ವೇ ಯೇ ಧನಧಾನ್ಯಸಮಾಕುಲಾಃ ।
ತೋರಣಾದೀನಿ ಗೇಹೇಷು ಮಂಗಳಾನಿ ಸೃಜಂತ್ವಿಹ ॥ ೫೩ ॥

ಕನ್ಯಾಸ್ಸಹಸ್ರಶೋ ರಮ್ಯಾ ರಮ್ಯಾಭರಣಭೂಷಿತಾಃ ।
ಗಜೋಪರಿ ಸಮಾರೂಢಾ ಯಾಂತು ಶತೃಘ್ನಸಂಮುಖಂ ॥ ೫೪ ॥

---

೪೯. ಈ ಸಮಯದಲ್ಲಿ ಒಬ್ಬ ಸೇವಕನು ಬಂದು ಸ್ವಾಮಿ, ಇಲ್ಲಿ ಒಂದು ಕುದುರೆಯು ಬಂದಿದೆ. ಹಣೆಯಲ್ಲಿ ಪಟ್ಟವಿದೆ ಯಾರದೆಂಬುದನ್ನು ಕಾಣೆ ಎಂದನು.

೫೦. ಅದನ್ನು ಕೇಳಿ ಸರಿಯಾದ ಒಬ್ಬ ಸೇವಕನನ್ನು ಕರೆದು, ಈ ಕುದುರೆಯು ಯಾರದೆಂದು ತಿಳಿ ಎಂದು ಹೇಳಿಕಳುಹಿಸಿದನು.

೫೧. ಸೇವಕನು ಹೋಗಿ ಎಲ್ಲಾ ವಿಷಯಗಳನ್ನೂ ತಿಳಿದು ಬಂದು ರಾಜನಿಗೆ ಎಲ್ಲವನ್ನೂ ಹೇಳಿದನು.

೫೨. ಬಹುದಿನದಿಂದ ಯೋಚಿಸುತ್ತಿದ್ದ ರಾಮನ ಕುದುರೆ ಬಂದುದನ್ನು ತಿಳಿದು ಎಲ್ಲರಿಗೂ ಹೀಗೆಂದನು.

೫೩. ನನ್ನ ಪಟ್ಟಣದ ಜನರೆಲ್ಲರೂ ಮನೆಯನ್ನು ತೋರಣ ಮುಂತಾದುವುಗಳಿಂದ ಅಲಂಕರಿಸಿರಿ.

೫೪. ಅನೇಕಜನ ಮುತ್ತೈದೆಯರು ಆಭರಣಗಳನ್ನು ತೊಟ್ಟುಕೊಂಡು, ಆನೆಯ ಮೇಲೆ ಹತ್ತಿಕೊಂಡು ಶತ್ರುಘ್ನನಿಗೆ ಎದುರಾಗಿ ಹೋಗಿರಿ.

ಇತ್ಯಾದಿ ಸರ್ವಮಾಜ್ಞಾಪ್ಯ ಯಯೌ ರಾಜಾ ಸ್ವಯಂ ತತಃ ।
ಪುತ್ರಪೌತ್ರಮಹಿಷ್ಯಾದಿಪರಿವಾರಸಮಾವೃತಃ ॥ ೫೫ ॥

ಶತ್ರುಘ್ನಃ ಸುಮಹಾಮಾತ್ಯೈಃ ಸುಭಟೈಃ ಪುಷ್ಕಲಾದಿಕೈಃ ।
ಸಂಯುತೋ ಭೂಪತಿಂ ವೀರಂ ದದರ್ಶ ಸುಮದಾಭಿದಂ ॥ ೫೬ ॥

ಹಸ್ತಿಭಿಸ್ಸಾದಿಸಂಯುಕ್ತೈಃ ಪತ್ತಿಭಿಃ ಪರತಾಪನೈಃ ।
ವಾಜಿಭಿರ್ಭೂಷಿತೈರ್ವೀರೈಃ ಸಂಯುತಂ ವೀರಶೋಭಿತಂ ॥ ೫೭ ॥

ಅಥಾಗತ್ಯ ಮಹಾರಾಜಂ ಶತ್ರುಘ್ನಂ ನತವಾನ್ಮುದಾ ।
ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಸತ್ಕೃತಂ ಚ ಕೃತಂ ವಪುಃ ॥ ೫೮ ॥

ಇದಂ ರಾಜ್ಯಂ ಗೃಹಾಣಾಶು ಮಹಾರಾಜೋಪಶೋಭಿತಂ ।
ಮಹಾಮಾಣಿಕ್ಯಮುಕ್ತಾದಿಮಹಾಧನಸುಪೂರಿತಂ ॥ ೫೯ ॥

ಸ್ವಾಮಿಂಶ್ಚಿರಂ ಪ್ರತೀಕ್ಷೇಹಂ ಹಯಸ್ಯಾಗಮನಂ ಪ್ರತಿ ।
ಕಾಮಾಕ್ಷಾಕಥಿತಂ ಪೂರ್ವಂ ಜಾತಂ ಸಂಪ್ರತಿ ತನ್ಮಹತ್ ॥ ೬೦ ॥

---

೫೫. ಹೀಗೆಂದು ಆಜ್ಞೆಮಾಡಿ ಮಕ್ಕಳು, ಮೊಮ್ಮಕ್ಕಳೊಡನೆಯೂ, ಹೆಂಡಿರೊಡನೆಯೂ, ಕೂಡಿಕೊಂಡು ಶತ್ರುಘ್ನನ ಎದುರಿಗೆ ಹೋದನು.

೫೬. ಶತ್ರುಘ್ನನು ಮಂತ್ರಿಗಳೊಡನೆಯೂ, ಪುಷ್ಕಲನೇ ಮೊದಲಾದ ಭಟರೊಡನೆಯೂ, ಕೂಡಿಕೊಂಡು ಆ ಸುಮದನನ್ನು ನೋಡಿದನು.

೫೭. ಆನೆಗಳೂ, ಮಾವಟಿಗರೂ, ಕಾಲಾಳುಗಳೂ, ಕುದುರೆಗಳಿಂದಲೂ, ಕೂಡಿರುವ, ವೀರನಾದ ಶತ್ರುಘ್ನನನ್ನು ನೋಡಿ ಬಹಳ ಸಂತೋಷದಿಂದ ನಮಸ್ಕರಿಸಿದನು.

೫೮-೫೯. ಧನ್ಯನಾದೆನು. ಕೃತಕೃತ್ಯನಾದೆನು. ನನ್ನ ದೇಹವು ಸುಕೃತ ಮಾಡಿತು. ಪ್ರಕಾಶಮಾನವಾದ, ಸರ್ವಸಮೃದ್ಧವಾದ ಈ ರಾಜ್ಯವನ್ನು ತೆಗೆದುಕೊ.

೬೦. ಸ್ವಾಮಿ! ತಮ್ಮ ಕುದುರೆ ಬರುವುದನ್ನೂ, ತಮ್ಮನ್ನೂ ಬಹುಕಾಲದಿಂದ ಕಾದಿದ್ದೆನು. ತಮ್ಮ ಆಗಮನವನ್ನು ಕಾಮಾಕ್ಷಿದೇವಿಯು ಹೇಳಿದ್ದಳು.

ವಿಲೋಕಯ ಪುರೀಂ ಮಹ್ಯಂ ಕೃತಾರ್ಥೀಕುರು ಮಾನವಾನ್ ।
ಪಾವಯಾಸ್ಮತ್ಕುಲಂ ಸರ್ವಂ ರಾಮಾನುಜ ಮಹಾಮತೇ ॥ ೬೧ ॥

ಇತ್ಯುಕ್ತ್ವಾರೋಪಯಾಮಾಸ ಕುಂಜರಂ ಚಂದ್ರಸುಪ್ರಭಂ ।
ಪುಷ್ಕಲಂ ಚ ಮಹಾವೀರಂ ತಥಾ ಸ್ವಯಮಥಾರುಹತ್ ॥ ೬೨ ॥

ಭೇರೀಪಣವತೂರ್ಯಾಣಾಂ ವೀಣಾದೀನಾಂ ಸ್ವನಸ್ತದಾ ।
ವ್ಯಾಪ್ನೋತಿ ಸ್ಮ ಮಹಾರಾಜ ಸುಮದೇನ ಪ್ರಚೋದಿತಃ ॥ ೬೩ ॥

ಕನ್ಯಾಃ ಸಮಾಗತ್ಯ ಮಹಾನರೇಂದ್ರಂ
ಶತ್ರುಘ್ನಮಿಂದ್ರಾದಿಕಸೇವಿತಾಂಘ್ರಿಂ ।
ಕರಿಸ್ಥಿತಾ ಮೌಕ್ತಿಕವೃಂದಸಂಘೈ-
ರ್ವರ್ಧಾಪಯಾಮಾಸುರಿಸಪ್ರಯುಕ್ತಾಃ ॥ ೬೪ ॥

ಶನೈಶ್ಶನೈಃ ಸಮಾಗತ್ಯ ಪುರೀಮಧ್ಯೇ ಜನೈರ್ಮುದಾ ।
ವರ್ಧಾಪಿತೋ ಗೃಹಂ ಪ್ರಾಪ ತೋರಣಾದಿಕಭೂಷಿತಂ ॥ ೬೫ ॥

---

೬೧. ನಮ್ಮ ಪಟ್ಟಣವನ್ನು ನೋಡಿ ಅಲ್ಲಿನ ಜನರನ್ನೂ ಕೃತಾರ್ಥರನ್ನಾಗಿ ಮಾಡು. ಎಲೈ ರಾಮಾನುಜನಾದ ಶತ್ರುಘ್ನನೇ ನನ್ನ ವಂಶವನ್ನು ಪವಿತ್ರವನ್ನಾಗಿ ಮಾಡು.

೬೨. ಹೀಗೆಂದು ಹೇಳಿ ಸುಮದನು ಆ ಶತ್ರುಘ್ನನನ್ನೂ ಪುಷ್ಕಲನನ್ನೂ ಬಿಳಿಯ ಆನೆಯ ಮೇಲೆ ಕೂರಿಸಿದನು.

೬೩. ತಮಟೆ ರಮಡೋಲು ಮುಂತಾದವುಗಳೂ, ವೀಣಾದಿಗಳೂ, ಸುಮದನು ಹೇಳಲು ಧ್ವನಿಮಾಡಿಸಲ್ಪಟ್ಟುವು.

೬೪. ಅನಂತರ ಆನೆಯ ಮೇಲಿದ್ದ ಕನ್ಯೆಯರು ರಾಜಾದಿಗಳಿಂದ ಸೇವಿತನಾದ ಶತ್ರುಘ್ನನನ್ನು ಮುತ್ತಿನ ಸಂಘಗಳಿಂದ ಗೌರವಿಸಿದರು.

೬೫. ಪಟ್ಟಣದ ಮಧ್ಯದಲ್ಲಿ ಮೆಲ್ಲಮೆಲ್ಲಗೆ ಬರುತ್ತಾ ಜನಗಳಿಂದ ಗೌರವಿಸಲ್ಪಡುತ್ತಾ ಅರಮನೆಯನ್ನು ಹೊಂದಿದನು.

ಹಯರತ್ನೇನ ಸಂಯುಕ್ತಸ್ತಥಾ ವೀರೈಸ್ಸುಶೋಭಿತಃ ।
ರಾಜ್ಞಾ ಪುರಸ್ಕೃತೋ ರಾಜಾ ಶತ್ರುಘ್ನಃ ಪ್ರಾಪ ಮಂದಿರಂ　　॥ ೬೬ ॥

ಅರ್ಘ್ಯಾದಿಭಿಃ ಪೂಜಯಿತ್ವಾ ರಘುನಾಥಾನುಜಂ ಮುದಾ ।
ಸರ್ವಂ ಸಮರ್ಪಯಾಮಾಸ ರಾಮಚಂದ್ರಾಯ ಧೀಮತೇ　　॥ ೬೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ಶ್ರೀ ರಾಮಾಶ್ವಮೇಧೇ ಶತ್ರುಘ್ನಾಹಿಚ್ಛತ್ರಪುರೀ
ಪ್ರವೇಶೋ ನಾಮ ತ್ರಯೋದಶೋಽಧ್ಯಾಯಃ



---

೬೬. ಆ ಕುದುರೆಯಿಂದಲೂ, ವೀರರಿಂದ ಕೂಡಿ ಪುರಸ್ಕೃತನಾಗಿ ಶತ್ರುಘ್ನನು ಅರಮನೆಯನ್ನು ಹೊಂದಿದನು.

೬೭. ಬಳಿಕ ಸುಮದನು ಶತ್ರುಘ್ನನನ್ನು ಅರ್ಘ್ಯಾದಿಗಳಿಂದ ಪೂಜೆಮಾಡಿ. ತನ್ನ ಸರ್ವಸ್ವವನ್ನೂ ಶ್ರೀರಾಮನಿಗೆ ಸಮರ್ಪಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದವಲ್ಲಿ,
ಶ್ರೀ ರಾಮಾಶ್ವಮೇಧಕಥನದಲ್ಲಿ ಶತ್ರುಘ್ನನು ಅಹಿಚ್ಛತ್ರಪುರವನ್ನು
ಪ್ರವೇಶಿಸಿದನೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುರ್ದಶೋಽಧ್ಯಾಯಃ

॥ ಶೇಷ ಉವಾಚ ॥

ಅಥ ಸ್ವಾಗತಸಂತುಷ್ಟಂ ಶತ್ರುಘ್ನಂ ಪ್ರಾಹ ಭೂಮಿಪಃ ।
ರಘುನಾಥಕಥಾಂ ಶ್ರೇಷ್ಠಾಂ ಶುಶ್ರೂಷುಃ ಪುರುಷರ್ಷಭಃ ॥ ೧ ॥

॥ ಸುಮದ ಉವಾಚ ॥

ಕಚ್ಚಿದಾಸ್ತೇ ಸುಖಂ ರಾಮಃ ಸರ್ವಲೋಕಶಿರೋಮಣಿಃ ।
ಭಕ್ತರಕ್ಷಾವತಾರೋಽಯಂ ಮಮಾನುಗ್ರಹಕಾರಕಃ ॥ ೨ ॥

ಧನ್ಯಾ ಲೋಕಾ ಇಮೇ ಪುರ್ಯಾಂ ರಘುನಾಥಮುಖಾಂಬುಜಂ ।
ಯೇಽನಿಶಂ ಪಪುರೇವಾಕ್ಷ್ಣಾಂ ಪುಟಕೈಃ ಪರಿಮೋದಿತಾಃ ॥ ೩ ॥

---

## ಹದಿನಾಲ್ಕನೆಯ ಅಧ್ಯಾಯವು

೧. ಶೇಷನು ಹೇಳಿದನು :—ಸ್ವಾಗತದಿಂದ ಸಂತೋಷಗೊಂಡಿರುವ ಶತ್ರುಘ್ನನನ್ನು ಕುರಿತು ಸುಮದನು ರಘುನಾಥನ ಕಥೆಯನ್ನು ಕೇಳಬೇಕೆಂದು ಇಂತೆಂದನು.

೨. ಸುಮದನು ಹೇಳಿದನು:—ಸರ್ವಲೋಕಶ್ರೇಷ್ಠನಾದ, ಭಕ್ತರಕ್ಷಣೆಗೋಸ್ಕರ ಅವತರಿಸಿರುವ, ತನಗೆ ಅನುಗ್ರಹವನ್ನು ಮಾಡುವ ಶ್ರೀರಾಮನು ಕುಶಲನಾಗಿರುವನೇ?

೩. ಆ ಅಯೋಧ್ಯೆಯ ಜನರು ನಿತ್ಯವೂ ಕಣ್ಣಿನಿಂದಲೇ ಶ್ರೀರಾಮನನ್ನು ನೋಡುತ್ತಿರುವುದರಿಂದ ಧನ್ಯರಾಗಿದ್ದಾರೆ.

**ಅಥ ಜಾತಂ ಮದೀಯಂ ಚ ನಿತರಾಂ ಪುರುಷರ್ಷಭ ।**
**ಕೃತಾರ್ಥಂ ಕುಲಭೂಮ್ಯಾದಿವಸ್ತುಜಾತಂ ಮಹಾಮತೇ ॥ ४ ॥**

**ಕಾಮಾಕ್ಷ್ಯಯಾ ಪ್ರಸಾದೋ ಮೇ ಕೃತಃ ಪೂರ್ವಂ ದಯಾರ್ದ್ರಯಾ ।**
**ರಘುನಾಥಮುಖಾಂಭೋಜಂ ದೃಷ್ಟ್ವೈಽದ್ಯ ಸಕುಟುಂಬಕಃ ॥ ೫ ॥**

**ಇತ್ಯುಕ್ತವತಿ ವೀರೇ ತು ಸುಮದೇ ಪಾರ್ಥಿವೋತ್ತಮೇ ।**
**ಸರ್ವಂ ತತ್ಕಥಯಾಮಾಸ ರಘುನಾಥಗುಣೋದಯಂ ॥ ೬ ॥**

**ತ್ರಿರಾತ್ರಂ ತತ್ರ ವೈ ಸ್ಥಿತ್ವಾ ರಘುನಾಥಾನುಜಃ ಪರಂ ।**
**ಗನ್ತುಂ ಚಕಾರ ಧಿಷಣಾಂ ರಾಜ್ಞಾ ಸಹ ಮಹಾಮತಿಃ ॥ ೭ ॥**

**ತತ್ ಜ್ಞಾತ್ವಾ ಸುಮದಃ ಶೀಘ್ರಂ ಪುತ್ರಂ ರಾಜ್ಯೇಽಭ್ಯಷೇಚಯತ್ ।**
**ಶತ್ರುಘ್ನೇನ ಮಹಾರಾಜ್ಞಾ ಪುಷ್ಕಲೇನಾನುಮೋದಿತಃ ॥ ೮ ॥**

**ವಾಸಾಂಸಿ ಬಹುರತ್ನಾನಿ ಧನಾನಿ ವಿವಿಧಾನಿ ಚ ।**
**ಶತ್ರುಘ್ನಸೇವಕೇಭ್ಯೋಽಸೌ ಪ್ರಾದಾತ್ತತ್ರ ಮಹಾಮತಿಃ ॥ ೯ ॥**

---

೪. ನನ್ನ ಪದಾರ್ಥಗಳಾದ ಭೂಮ್ಯಾದಿಗಳೂ, ಹಣ ಮುಂತಾದುವೂ, ಒಟ್ಟಿನಲ್ಲಿ ಎಲ್ಲಾ ಪದಾರ್ಥಗಳೂ ಕೃತಾರ್ಥವಾದುವು.

೫. ಕಾಮಾಕ್ಷಿಯು ಮೊದಲೇ ನನಗೆ ಅನುಗ್ರಹಿಸಿದ್ದಳು. ಈಗ ಸಕುಟುಂಬನಾಗಿ ರಘುನಾಥನನ್ನು ನೋಡುವುದರಿಂದ ಕೃತಾರ್ಥನಾದೆನು.

೬. ಸುಮದನು ಹೀಗೆ ಹೇಳಲು ಶತ್ರುಘ್ನನು ಆ ಶ್ರೀರಾಮನ ಕಥೆಯನ್ನೆಲ್ಲಾ ಹೇಳಿದನು.

೭. ಮೂರು ರಾತ್ರಿಗಳು ಅಲ್ಲಿದ್ದು ಶತ್ರುಘ್ನನು ರಾಜನೊಡನೆ ಹೊರಡಲು ಮನಸ್ಸುಮಾಡಿದನು.

೮-೯. ಅದನ್ನು ತಿಳಿದು ಆ ಸುಮದನು ಮಗನಿಗೆ ರಾಜ್ಯದಲ್ಲಿ ಪಟ್ಟಕಟ್ಟಿ ಶತ್ರುಘ್ನನೂ ಪುಷ್ಕಲನೂ ಒಪ್ಪಲು, ಶತ್ರುಘ್ನನ ಸೇವಕರಿಗೆ ಬಹಳವಾಗಿ ಬಹುಮಾನಗಳನ್ನು ಕೊಟ್ಟನು.

ತತೋ ಗಮನಮಾರೇಭೇ ಮಂತ್ರಿಭಿರ್ಬಹುವಿತ್ತಮೈಃ ।
ಪತ್ತಿಭಿರ್ವಾಜಿಭಿರ್ನಾಗೈಃ ಸದಶ್ವೈ ರಥಕೋಟಿಭಿಃ ॥ ೧೦ ॥

ಶತ್ರುಘ್ನಸಹಿತಸ್ತೇನ ಸುಮದೇನ ಧನುರ್ಭೃತಾ ।
ಜಗಾಮ ಮಾರ್ಗೇ ವಿಹರನ್ ರಘುನಾಥಪ್ರತಾಪಭೃತ್ ॥ ೧೧ ॥

ಪಯೋಷ್ಣೀತೀರಮಾಸಾದ್ಯ ಜಗಾಮ ಸಹಸೋತ್ತಮಃ ।
ಪೃಷ್ಠತೋಽನುಯಯುಸ್ಸರ್ವೇ ಯೋಧಾ ವೈರಿಪ್ರಹಾರಿಣಃ ॥ ೧೨ ॥

ಆಶ್ರಮಾನ್ ವಿವಿಧಾನ್ಪಶ್ಯನ್ ಋಷೀಣಾಂ ಸುತಪೋಭೃತಾಂ ।
ತತ್ರ ತತ್ರ ವಿಶೃಣ್ವಾನೋ ರಘುನಾಥಗುಣೋದಯಂ ॥ ೧೩ ॥

ಏಷ ಧೀಮಾನ್ ಹರಿರ್ಯಾತಿ ಹರಿಣಾ ಪರಿರಕ್ಷಿತಃ ।
ಹರಿಭಿರ್ಹರಿಭಕ್ತೈಶ್ಚ ಹರಿವರ್ಯಾನುಗೈರ್ಮುಹುಃ ॥ ೧೪ ॥

ಇತಿ ಶೃಣ್ವನ್ ಶುಭಾ ವಾಚೋ ಮುನೀನಾಂ ಪರಿತಃ ಪ್ರಭುಃ ।
ತುತೋಷ ಭಕ್ತ್ಯುತ್ಕಲಿತಚಿತ್ತವೃತ್ತಿಭೃತಾಂ ಮಹಾನ್ ॥ ೧೫ ॥

---

೧೦-೧೧. ಅನಂತರ ಮಂತ್ರಿಗಳೊಡನೆಯೂ, ಆನೆ, ಕುದುರೆ, ರಥ, ಪದಾತಿಗಳೊಡನೆಯೂ ಶತ್ರುಘ್ನನು ಆ ಸುಮದನನ್ನು ಕರೆದುಕೊಂಡು ಅವನೊಡನೆ ರಾಮನ ಕಥೆಗಳನ್ನು ಹೇಳುತ್ತಾ ಹೊರಟನು.

೧೨. ಪಯೋಷ್ಣೀನದಿಯ ದಡದಲ್ಲಿಯೇ ಆ ಶತ್ರುಘ್ನನು ಹೋಗಲು ಅವನನ್ನು ಅನುಸರಿಸಿಯೇ ಆ ಯೋಧರೆಲ್ಲರೂ ಹೊರಟರು.

೧೩. ತಪಸ್ವಿಗಳ ನಾನಾವಿಧವಾದ ಆಶ್ರಮಗಳನ್ನು ನೋಡುತ್ತಾ ಅಲ್ಲಲ್ಲಿ ರಾಮ ಕಥೆಗಳನ್ನು ಹರಡುತ್ತಾ ಹೋದನು.

೧೪. ಈ ಕುದುರೆಯು ಸಾಕ್ಷಾತ್ ವಿಷ್ಣುಸ್ವರೂಪನಾದ ಶತ್ರುಘ್ನನಿಂದ ಕಾಪಾಡಲ್ಪಟ್ಟು, ಕಪಿಗಳಿಂದಲೂ, ಕುದುರೆಗಳಿಂದಲೂ, ಹರಿಭಕ್ತರಿಂದಲೂ ಹಿಂಬಾಲಿಸಲ್ಪಟ್ಟು ಹೋಗುತ್ತಿದೆ.

೧೫. ಈ ರೀತಿಯಾದ ಇಂಪಾದ ಮಾತುಗಳನ್ನು ಋಷಿಗಳು ಹೇಳಿದುದನ್ನು ಕೇಳುತ್ತಾ ಇವರು ಹರಿಭಕ್ತ್ಯುತ್ಕಟರು ಎಂದು ಹೇಳುತ್ತಾ ಹೋದನು.

**ದದರ್ಶ ಚಾಶ್ರಮಂ ಶುದ್ಧಂ ದ್ವಿಜಜಂತುಸಮಾಕುಲಂ ।**
**ವೇದಧ್ವನಿಹತಾಶೇಷಾಮಂಗಳಂ ಶೃಣ್ವತಾಂ ನೃಣಾಂ ॥ ೧೬ ॥**

**ಅಗ್ನಿಹೋತ್ರಹವಿರ್ಧೂಮಪವಿತ್ರಿತನಭೋಽಖಿಲಂ ।**
**ಮುನಿವರ್ಯಕೃತಾನೇಕಯಾಗಯೂಪಸುಶೋಭಿತಂ ॥ ೧೭ ॥**

**ಯತ್ರ ಗಾವಸ್ತು ಹರಿಣಾ ಪಾಲ್ಯಂತೇ ಪಾಲನೋಚಿತಾಃ ।**
**ಮೂಷಕಾ ನ ಖನಂತ್ಯಸ್ಮಿನ್ ಬಿಡಾಲಸ್ಯಾಭಯಾದ್ಬಿಲಂ ॥ ೧೮ ॥**

**ಮಯೂರೈರ್ನಕುಲೈಸ್ಸಾರ್ಧಂ ಕ್ರೀಡಂತಿ ಫಣಿನೋಽನಿಶಂ ।**
**ಗಜೈಃ ಸಿಂಹೈರ್ನಿತ್ಯಮತ್ರ ಸ್ಥೀಯತೇ ಮಿತ್ರತಾಂ ಗತೈಃ ॥ ೧೯ ॥**

**ಏಣಾಸ್ತತ್ರತ್ಯನೀವಾರಭಕ್ಷಣೇಷು ಕೃತಾದರಾಃ ।**
**ನ ಭಯಂ ಕುರ್ವತೇ ಕಾಲಾದ್ರಕ್ಷಿತಾ ಮುನಿವೃಂದಕೈಃ ॥ ೨೦ ॥**

---

೧೬. ಈ ರೀತಿಯಾದ ಇಂಪಾದ ಮಾತುಗಳನ್ನು ಋಷಿಗಳು ಹೇಳಿದುದನ್ನು ಕೇಳುತ್ತಾ, ಬರಬರುತ್ತಾ ವೇದಧ್ವನಿಯಿಂದ ನಾಶವಾದ ಪಾಪವುಳ್ಳ ಬ್ರಾಹ್ಮಣರುಳ್ಳ ಆಶ್ರಮವನ್ನು ನೋಡಿದನು.

೧೭. ಅಗ್ನಿಹೋತ್ರದ ಹೊಗೆಯಿಂದ ಅಂತರಿಕ್ಷವನ್ನು ಪರಿಶುದ್ಧವನ್ನಾಗಿ ಮಾಡುತ್ತಿರುವ, ಮುನಿಗಳು ಮಾಡಿದ ಯಾಗಗಳ ಯೂಪಸ್ತಂಭಗಳುಳ್ಳ ಆ ಆಶ್ರಮವನ್ನು ನೋಡಿದನು.

೧೮. ಆ ಆಶ್ರಮಗಳಲ್ಲಿ ಗೋವುಗಳನ್ನು ಹುಲಿಗಳು ತಿನ್ನದೇ ಕಾಪಾಡುತ್ತಿದ್ದುವು. ಇಲಿಗಳು ಬೆಕ್ಕುಗಳ ಹೆದರಿಕೆಯಿಲ್ಲದುದರಿಂದ ಬಿಲಗಳನ್ನು ತೋಡುತ್ತಿರಲಿಲ್ಲ.

೧೯. ಹಾವುಗಳು ನವಿಲುಗಳೊಡನೆಯೂ, ಮುಂಗಸಿಗಳೊಡನೆಯೂ, ಆಡುತ್ತಿದ್ದುವು. ಆನೆಗಳೂ ಸಿಂಹಗಳೂ ಜೊತೆಯಲ್ಲಿ ಸ್ನೇಹದಿಂದಿರುತ್ತಿದ್ದುವು.

೨೦. ಜಿಂಕೆಗಳು ನೀವಾರಗಳನ್ನು ತಿನ್ನುತ್ತಾ ಮುನಿಗಳಿಂದ ಆದರಿಸಲ್ಪಟ್ಟು ಯಮನಿಂದಲೂ ಭಯಪಡದಿದ್ದುವು.

ಗಾವಃ ಕುಂಭಸಮೋಧಸ್ಕಾ ನಂದಿನೀಸಮವಿಗ್ರಹಾಃ ।
ಕುರ್ವಂತಿ ಚರಣೋತ್ಥೇನ ರಜಸೇಲಾಂ ಪವಿತ್ರಿತಾಂ ॥ ೨೧ ॥

ಮುನಿವರ್ಯೈಃ ಸಮಿತ್ಪಾಣಿಪದ್ಮೈರ್ಧರ್ಮಕ್ರಿಯೋಚಿತಾಂ ।
ದೃಷ್ಟ್ವಾ ಪಪ್ರಚ್ಛ ಸುಮತಿಂ ಸರ್ವಜ್ಞಂ ರಾಮಮಂತ್ರಿಣಂ ॥ ೨೨ ॥

॥ ಶತ್ರುಘ್ನ ಉವಾಚ ॥

ಸುಮತೇ ಕಸ್ಯ ಸಂಸ್ಥಾನಂ ಮುನೇರ್ಭಾತಿ ಪುರೋಗತಂ ।
ನಿರ್ವೈರಜಂತುಸಂಸೇವ್ಯಂ ಮುನಿವೃಂದಸಮಾಕುಲಂ ॥ ೨೩ ॥

ಶ್ರೋಷ್ಯಾಮಿ ಮುನಿವಾರ್ತಾಂ ಚ ವಿದಧಾಮಿ ಪವಿತ್ರಿತಂ ।
ನಿಜಂ ವಪುಸ್ತದೀಯಾಭಿರ್ವಾರ್ತಾಭಿರ್ವರ್ಣನಾದಿಭಿಃ ॥ ೨೪ ॥

ಇತಿ ಶ್ರುತ್ವಾ ಮಹದ್ವಾಕ್ಯಂ ಶತ್ರುಘ್ನಸ್ಯ ಮಹಾತ್ಮನಃ ।
ಕಥಯಾಮಾಸ ಸಚಿವೋ ರಘುನಾಥಸ್ಯ ಧೀಮತಃ ॥ ೨೫ ॥

---

೨೧. ಹಸುಗಳು ಬಿಂದಿಗೆಯ ದಪ್ಪಕ್ಕೆ ಕೆಚ್ಚಲನ್ನು ಹೊಂದಿ ನಂದಿನಿಯಂತೆ ಚೆನ್ನಾಗಿದ್ದುವು. ಮತ್ತು ಅವುಗಳ ಗೊರಸಿನಿಂದೆದ್ದ ಧೂಳಿನಿಂದ ಭೂಮಿಯನ್ನು ಪವಿತ್ರವನ್ನಾಗಿ ಮಾಡುತ್ತಿದ್ದುವು.

೨೨. ಸಮಿತ್ತು, ದರ್ಭೆ, ಪದ್ಮಗಳೇ ಮುಂತಾದ ಧರ್ಮಕ್ರಿಯೆಗಳಿಗೆ ಬೇಕಾದ ಪದಾರ್ಥಗಳನ್ನು ಹಿಡಿದಿರುವ ಮುನಿಗಳಿಂದ ಕೂಡಿದ ಆ ಆಶ್ರಮವನ್ನು ನೋಡಿ, ರಾಮ ಮಂತ್ರಿಯಾದ ಸುಮತಿಯನ್ನು ಶತ್ರುಘ್ನನು ಕೇಳಿದನು.

೨೩. ಶತ್ರುಘ್ನನು ಕೇಳಿದನು :—ಎಲೈ ಸುಮತಿಯೇ ಈ ಮುಂದೆ ಕಾಣುವ, ವೈರವಿಲ್ಲದ ಜಂತುಗಳುಳ್ಳ, ಮುನಿಗಳಿಂದ ಕೂಡಿರುವ ಈ ಆಶ್ರಮಜಾಗವು ಯಾರದು ?

೨೪. ಮುನಿಗಳ ವಿಷಯಗಳನ್ನು ಕೇಳಿ, ಅವರ ಕಥೆಗಳಿಂದಲೂ ವರ್ಣನೆಗಳಿಂದಲೂ ಈ ದೇಹವನ್ನು ಪವಿತ್ರವಾದುದನ್ನಾಗಿ ಮಾಡಿಕೊಳ್ಳುತ್ತೇನೆ.

೨೫. ಶತ್ರುಘ್ನನ ಈ ಮಾತನ್ನು ಕೇಳಿ ಸುಮತಿಯು ಅವನಿಗೆ ಇಂತೆಂದನು.

॥ ಸುಮತಿರುವಾಚ ॥

ಚ್ಯವನಸ್ಯಾಶ್ರಮಂ ವಿದ್ಧಿ ಮಹಾತಾಪಸಶೋಭಿತಂ ।
ನಿರ್ವೈರಜಂತುಸಂಕೀರ್ಣಂ ಮುನಿಪತ್ನೀಭಿರಾವೃತಂ ॥ ೨೬ ॥

ಯೋಽಸೌ ಮಹಾಮುನಿಃ ಸ್ವರ್ಗವೈದ್ಯಯೋರ್ಭಾಗಮಾದಧಾತ್ ।
ಸ್ವಾಯಂಭುವಮಹಾಯಜ್ಞೇ ಶಕ್ರಮಾನವಿಭೇದನಃ ॥ ೨೭ ॥

ಮಹಾಮುನೇಃ ಪ್ರಭಾವೋಽಯಂ ನ ಕೇನಾಪಿ ಸಮಾಪ್ಯತೇ ।
ತಪೋಬಲಸಮೃದ್ಧಸ್ಯ ವೇದಮೂರ್ತಿಧರಸ್ಯ ತು ॥ ೨೮ ॥

ಶ್ರುತ್ವಾ ರಾಮಾನುಜೋ ವಾರ್ತಾಂ ಚ್ಯವನಸ್ಯ ಮಹಾತ್ಮನಃ ।
ಸರ್ವಂ ಪಪ್ರಚ್ಛ ಸುಮತಿಂ ಶಕ್ರಮಾನಾದಿಭಂಜನಂ ॥ ೨೯ ॥

॥ ಶತ್ರುಘ್ನ ಉವಾಚ ॥

ಕದಾಸೌ ದಸ್ರಯೋರ್ಭಾಗಂ ಚಕಾರ ಸುರಪಂಕ್ತಿಷು ।
ಕಿಂ ಕೃತಂ ದೇವರಾಜೇನ ಸ್ವಾಯಂಭುವಮಹಾಮುಖೇ ॥ ೩೦ ॥

---

೨೬. ಸುಮತಿಯಿಂತೆಂದನು:—ನಿರ್ವೈರದಿಂದ ಕೂಡಿರುವ ಮತ್ತು ಮುನಿಪತ್ನಿಯರು ಸೇವಿಸುತ್ತಿರುವ, ಮಹಾತಪಸ್ವಿಗಳಿಂದ ಕೂಡಿದ ಈ ಆಶ್ರಮವು ಚ್ಯವನ ಋಷಿಯದೆಂದು ತಿಳಿ.

೨೭. ಈ ಋಷಿಯು ಅಶ್ವಿನೀದೇವತೆಗಳಿಗೆ ಯಜ್ಞದಲ್ಲಿ ಭಾಗವನ್ನು ಕೊಟ್ಟನು. ಬ್ರಹ್ಮನಯಜ್ಞದಲ್ಲಿ ಇಂದ್ರನಿಗೆ ಮಾನಭಂಗಮಾಡಿದನು.

೨೮. ಅವನ ಪ್ರಭಾವವನ್ನು ಹೇಳಿ ಮುಗಿಸಲು ಯಾರಿಗೂ ಸಾಧ್ಯವಿಲ್ಲ. ಅವನ ತಪೋಬಲವು ಅಷ್ಟು ಅಧಿಕವಾದುದು.

೨೯. ಚ್ಯವನನ ವಿಷಯವನ್ನು ಕೇಳಿ ಆ ಇಂದ್ರನ ಅವಮಾನವೇ ಮುಂತಾದುದನ್ನು ಕೇಳಿದನು.

೩೦. ಶತ್ರುಘ್ನನು ಕೇಳಿದನು:—ಬ್ರಹ್ಮನ ಯಜ್ಞದಲ್ಲಿ ಅಶ್ವಿನೀದೇವತೆಗಳಿಗೆ ಭಾಗವನ್ನು ಹೇಗೆ ಕೊಟ್ಟನು? ದೇವರಾಜನು ಏನು ಮಾಡಿದನು?

॥ ಸುಮತಿರುವಾಚ ॥

ಬ್ರಹ್ಮವಂಶೇऽತಿವಿಖ್ಯಾತೋ ಮುನಿರ್ಭೃಗುರಿತಿ ಶ್ರುತಃ ।
ಕದಾಚಿದ್ಗತವಾನ್ಸಾಯಂ ಸಮಿದಾಹರಣಂ ಪ್ರತಿ । ॥ ೩೧ ॥

ತದಾ ಮಖವಿನಾಶಾಯ ದಮನೋ ರಾಕ್ಷಸೋ ಬಲೀ ।
ಆಗತ್ಯೋಚ್ಚೈರ್ಜಗಾದೇದಂ ಮಹಾಭಯಕರಂ ವಚಃ ॥ ೩೨ ॥

ಕುತ್ರಾಸ್ತಿ ಮುನಿಬಂಧುಸ್ಸ ಕುತ್ರ ತನ್ಮಹಿಳಾನಘಾ ।
ಪುನಃ ಪುನರುವಾಚೇದಂ ವಚೋ ರೋಷಸಮಾಕುಲಃ ॥ ೩೩ ॥

ತದಾ ಹುತವಹೋ ಜ್ಞಾತ್ವಾ ರಾಕ್ಷಸಾದ್ಭಯಮಾಗತಂ ।
ದರ್ಶಯಾಮಾಸ ತಜ್ಜಾಯಾಮನ್ತರ್ವತ್ನೀಮನಿಂದಿತಾಂ ॥ ೩೪ ॥

ಜಗ್ರಾಹ ರಾಕ್ಷಸಸ್ತಾಂ ತು ರುದತೀಂ ಕುರರೀಮಿವ ।
ಭೃಗೋ ರಕ್ಷ ಪತೇ ರಕ್ಷ ರಕ್ಷ ನಾಥ ತಪೋನಿಧೇ ॥ ೩೫ ॥

---

೩೧. ಸುಮತಿಯು ಹೇಳಿದನು :—ಬ್ರಹ್ಮನ ವಂಶದಲ್ಲಿ ಭೃಗುವೆಂಬ ಮುನಿಯು ಪ್ರಸಿದ್ಧನಾಗಿದ್ದಾನೆ. ಒಂದುಸಾರಿ ಸಾಯಂಕಾಲದಲ್ಲಿ ಸಮಿತ್ತನ್ನು ತರಲು ಹೋದನು.

೩೨. ಆಗ ಬಲಿಷ್ಠನಾದ ದಮನನೆಂಬ ರಾಕ್ಷಸನು ಬಂದು ಗಟ್ಟಿಯಾಗಿ ಹೀಗೆಂದನು.

೩೩. ಆ ಅಯೋಗ್ಯಋಷಿ ಎಲ್ಲಿ? ಆತನ ಹೆಂಡಿರೆಲ್ಲಿ? ಹೀಗೆಂದು ಕೋಪದಿಂದ ಗಟ್ಟಿಯಾಗಿ ಅನೇಕಬಾರಿ ಕೇಳಿದನು.

೩೪. ಆಗ ಅಗ್ನಿಯು ತನಗೆ ರಾಕ್ಷಸನಿಂದ ಭಯ ಬಂದಿತೆಂದು ತಿಳಿದು ಗರ್ಭಿಣಿಯಾದ ಆತನ ಹೆಂಡತಿಯನ್ನು ತೋರಿಸಿದನು.

೩೫. ಅಳುತ್ತಿರುವ ಆಕೆಯನ್ನು ರಾಕ್ಷಸನು ಹಿಡಿದುಕೊಂಡನು. ಆಗ ಆಕೆಯು ಭೃಗುವೇ ಕಾಪಾಡು. ಪತಿಯೇ ರಕ್ಷಿಸು. ನಾಥನೇ ರಕ್ಷಿಸು. ತಪೋನಿಧಿಯೇ ರಕ್ಷಿಸು.

ಏವಂ ವದನ್ತೀಮಾರ್ತಾಂ ಸ ಗೃಹೀತ್ವಾ ನಿರಗಾದ್ಬಹಿಃ ।
ದುಷ್ಟವಾಕ್ಯಪ್ರವಾದೇನ ಧರ್ಷಯನ್ ಸ ಭೃಗೋಸ್ಸತೀಂ ॥ ೩೬ ॥

ತತೋ ಮಹಾಭಯತ್ರಸ್ತೋ ಗರ್ಭಶ್ಚೋದರಮಧ್ಯತಃ ।
ಪಪಾತ ಪ್ರಜ್ವಲನ್ನೇತ್ರೋ ವೈಶ್ವಾನರ ಇವಾಂಗಜಃ ॥ ೩೭ ॥

ತೇನೋಕ್ತಂ ಮಾ ವ್ರಜಸ್ವಾಶು ತ್ವಂ ಭಸ್ಮೀಭವ ದುರ್ಮತೇ ।
ನ ಹಿ ಸಾಧ್ವೀಪರಾಮರ್ಶಂ ಕೃತ್ವಾ ಶ್ರೇಯೋಽಭಿಯಾಸ್ಯಸಿ ॥ ೩೮ ॥

ಇತ್ಯುಕ್ತಃ ಸ ಪಪಾತಾಶು ಭಸ್ಮೀಭೂತಕಳೇಬರಃ ।
ಮಾತಾ ತದಾರ್ಭಕಂ ನೀತ್ವಾ ಜಗಾಮಾಶ್ರಮಮುನ್ಮನಾಃ ॥ ೩೯ ॥

ಭೃಗುರ್ವಹ್ನಿಕೃತಂ ಸರ್ವಂ ಜ್ಞಾತ್ವಾ ಕೋಪಸಮಾಕುಲಃ ।
ಶಶಾಪ ಸರ್ವಭಕ್ಷಸ್ತ್ವಂ ಭವ ದುಷ್ಟಾರಿಸೂಚಕ ॥ ೪೦ ॥

ತದಾ ಶಪ್ತೋಽತಿದುಃಖಾರ್ತೋ ಜಗ್ರಾಹಾಂಘ್ರ್ಯೋಶ್ಶುಶುಕ್ಷಣಿಃ ।
ಕುರು ಮೇಽನುಗ್ರಹಂ ಸ್ವಾಮಿನ್ ಕೃಪಾರ್ಣವ ಮಹಾಮತೇ ॥ ೪೧ ॥

---

೩೬. ಆ ರಾಕ್ಷಸನು ಋಷಿಪತ್ನಿಯನ್ನು ತಿರಸ್ಕರಿಸಿ ಬಯ್ಯುತ್ತಾ, ಅಳುತ್ತಿದ್ದರೂ ಹಿಡಿದುಕೊಂಡು, ಹೊರಕ್ಕೆ ಎಳೆದುಕೊಂಡು ಹೋದನು.

೩೭. ಆಕೆಯು ಭಯದಿಂದ ಹೆದರಿದುದರಿಂದ ಆಕೆಯ ಹೊಟ್ಟೆಯಿಂದ ಕೋಪಗೊಂಡ ಅಗ್ನಿಯೋ ಎಂಬಂತೆ ಗರ್ಭವು ಕೆಳಕ್ಕೆ ಬಿದ್ದಿತು.

೩೮. ಎಲೈ ರಾಕ್ಷಸನೇ! ಓಡಿಹೋಗಬೇಡ. ಬೂದಿಯಾಗು. ಪತಿವ್ರತಾ ಪರಾಮರ್ಶವು ಒಳ್ಳೆಯದನ್ನುಂಟುಮಾಡುವುದಿಲ್ಲ.

೩೯. ಹೀಗೆನ್ನಲು ಆ ರಾಕ್ಷಸನು ಭಸ್ಮವಾಗಿ ಕೆಳಗೆ ಬಿದ್ದನು. ತಾಯಿಯು ಆ ಮಗುವನ್ನು ತೆಗೆದುಕೊಂಡು ದುಃಖಿಸುತ್ತ ಆಶ್ರಮಕ್ಕೆ ಹೋದಳು

೪೦. ಭೃಗುವು ಅಗ್ನಿ ಮಾಡಿದ ಚೇಷ್ಟೆಯನ್ನು ತಿಳಿದು ಕೋಪಗೊಂಡು, ನೀನು ದುಷ್ಟನಾದ ರಾಕ್ಷಸನಿಗೆ ಸೂಚಿಸಿದುದರಿಂದ ಸರ್ವಭಕ್ಷಕನಾಗು ಎಂದು ಶಪಿಸಿದನು.

೪೧. ಹೀಗೆ ಶಾಪಕೊಡಲು ದುಃಖದಿಂದ ಆ ಋಷಿಯ ಪಾದಗಳನ್ನು ಹಿಡಿದು ಅಗ್ನಿಯು ಸ್ವಾಮಿಯೇ, ಅನುಗ್ರಹಿಸೆಂದು ಬಹುವಾಗಿ ಕೇಳಿಕೊಂಡನು.

ಮಯಾಽನೃತವಚೋಭೀತ್ಯಾ ಕಥಿತಂ ನ ಗುರುದ್ರುಹಾ ।
ತಸ್ಮಾನ್ಮಮೋಪರಿ ಕೃಪಾಂ ಕುರು ಧರ್ಮಶಿರೋಮಣೇ ॥ ೪೨ ॥

ತದಾನುಗ್ರಹಮಾಧತ್ತ ಸರ್ವಭಕ್ಷ್ಯೋ ಭವಾನ್ ಶುಚಿಃ ।
ಇತ್ಯುಕ್ತ್ವಾ ಹುತಭುಜಂ ದಯಾದ್ರೋ ಮುನಿತಾಪಸಃ ॥ ೪೩ ॥

ಗರ್ಭಾಚ್ಚ್ಯುತಸ್ಯ ಪುತ್ರಸ್ಯ ಜಾತಕರ್ಮಾದಿಕಂ ಶುಚಿಃ ।
ಚಕಾರ ವಿಧಿವದ್ವಿಪ್ರೋ ದರ್ಭಪಾಣಿಃ ಸುಮಂಗಲಃ ॥ ೪೪ ॥

ಚ್ಯವನ್ನಾಚ್ಚ್ಯವನಂ ಪ್ರಾಹುಃ ಸರ್ವೇ ತತ್ರ ತಪಸ್ವಿನಃ ।
ಶನೈಶ್ಶನೈಃ ಸ ವವೃಧೇ ಶುಕ್ಲಪ್ರತಿಪದಿಂದುವತ್ ॥ ೪೫ ॥

ಸ ಜಗಾಮ ತಪಃ ಕರ್ತುಂ ರೇವಾಂ ಲೋಕೈಕಪಾವನೀಂ ।
ಶಿಷ್ಯೈಃ ಪರಿವೃತಸ್ಸರ್ವೈಸ್ತಪೋಬಲಸಮನ್ವಿತೈಃ ॥ ೪೬ ॥

---

೪೨. ನಾನು ಸುಳ್ಳು ಹೇಳಬೇಕಾಗುತ್ತದಲ್ಲ ಎಂಬ ಹೆದರಿಕೆಯಿಂದ ಹಾಗೆ ನಿಜವನ್ನು ಹೇಳಿದನೇ ಹೊರತು, ನಿನಗೆ ದ್ರೋಹಮಾಡಬೇಕೆಂಬ ಬುದ್ಧಿಯಿಂದಲ್ಲ. ಎಲೈ ಧರ್ಮಿಷ್ಠನೇ, ನನ್ನ ಮೇಲೆ ದಯೆಮಾಡಬೇಕು.

೪೩. ಆಗ ಆ ಋಷಿಯು ನೀನು ಸರ್ವಭಕ್ಷನಾದರೂ ಶುಚಿಯಾಗಿರುತ್ತೀಯೆ. ಎಂದು ಕೃಪೆಮಾಡಿ ಅನುಗ್ರಹಮಾಡಿದನು.

೪೪. ಗರ್ಭದಿಂದ ಈಚೆಗೆ ಬಂದ ಆ ಮಗುವಿಗೆ ಆ ಋಷಿಯು ದರ್ಭಪಾಣಿಯಾಗಿ ಮಂಗಳಕರವಾದ ಜಾತಕರ್ಮಾದಿಗಳನ್ನು ಮಾಡಿದನು.

೪೫. ಗರ್ಭದಿಂದ ಚ್ಯವನ ಎಂದರೆ ಬಿದ್ದವನಾದುದರಿಂದ ಚ್ಯವನನೆಂದು ಹೆಸರಿಟ್ಟರು. ಆ ಮಗುವು ಶುಕ್ಲಪಕ್ಷದ ಚಂದ್ರನಂತೆ ನಿದಾನವಾಗಿ ಬೆಳೆಯಿತು.

೪೬-೪೭. ಆ ಚ್ಯವನನು ಶಿಷ್ಯರೊಡನೆ ಪವಿತ್ರವಾದ ರೇವಾನದಿಯ ತೀರಕ್ಕೆ ತಪಸ್ಸಿಗೆ ಹೋಗಿ ಹತ್ತುಸಾವಿರ ವರ್ಷಗಳ ವರೆಗೂ ತಪಸ್ಸುಮಾಡಿದನು. ಇವನ

ಗತ್ವಾ ತತ್ರ ತಪಸ್ತೇಪೇ ವರ್ಷಾಣಾಮಯುತಂ ಮಹಾನ್ ।
ಅಂಸಯೋಃ ಕಿಂಶುಕೌ ಜಾತೌ ವಲ್ಮೀಕೋಪರಿ ಶೋಭಿತೌ ॥ ೪೭ ॥

ಮೃಗಾ ಆಗತ್ಯ ತಸ್ಯಾಂಗೇ ಕಂಡೂಂ ವಿದಧುರುತ್ಸುಕಾಃ ।
ನ ಕಿಂಚಿತ್ಸ ಹ ಜಾನಾತಿ ದುರ್ನಿವಾರತಯಾ ದೃಢಃ ॥ ೪೮ ॥

ಕದಾಚಿನ್ಮನುರುದ್ಯುಕ್ತಸ್ತೀರ್ಥಯಾತ್ರಾಂ ಪ್ರತಿ ಪ್ರಭುಃ ।
ಸಕುಟುಂಬೋ ಯಯೌ ರೇವಾಂ ಮಹಾಬಲಸಮಾವೃತಃ ॥ ೪೯ ॥

ತತ್ರ ಸ್ನಾತ್ವಾ ಮಹಾನಂದ್ಯಾಂ ಸಂತರ್ಪ್ಯ ಪಿತೃದೇವತಾಃ ।
ದಾನಾನಿ ಪಾಡವೇಭ್ಯಶ್ಚ ಪ್ರಾದಾದ್ವಿಷ್ಣುಪ್ರತುಷ್ಟಯೇ ॥ ೫೦ ॥

ತತ್ಕನ್ಯಾ ವಿಚರಂತೀ ಸಾ ವನಮಧ್ಯ ಇತಸ್ತತಃ ।
ಸಖಿಭಿಸ್ಸಹಿತಾ ರಮ್ಯಾ ತಪ್ತಹಾಟಕಭೂಷಣಾ ॥ ೫೧ ॥

ತತ್ರ ದೃಷ್ಟ್ವಾಥ ವಲ್ಮೀಕಂ ಮಹಾತರುಸುಶೋಭಿತಂ ।
ನಿಮೇಷೋನ್ಮೇಷರಹಿತಂ ತೇಜಃ ಕಿಂತು ದದರ್ಶ ಸಾ ॥ ೫೨ ॥

---

ಮೇಲೆ ಹುತ್ತವು ಕಟ್ಟಿಕೊಂಡು ಅದರಲ್ಲಿ ಇವನ ಭುಜಗಳ ಮೇಲೆ ಮುತ್ತುಗದ ಮರ ಗಳು ಬೆಳೆದುವು.

೪೮. ಮೃಗಗಳು ಬಂದು ಕಡಿತವನ್ನು ತೀರಿಸಿಕೊಳ್ಳಲು ಅವನನ್ನು ಉಜ್ಜು ವುವು. ಅವನ ಮನಸ್ಸು ದೃಢವಾಗಿದ್ದುದರಿಂದ ಒಂದನ್ನೂ ತಿಳಿಯದೇ ತಿಳಿಯನು.

೪೯-೫೦. ಒಂದುಬಾರಿ ಮನುವು ತೀರ್ಥಯಾತ್ರೆಗೋಸ್ಕರ ಕುಟುಂಬದೊಡ ನೆಯೂ, ಸೈನ್ಯದೊಡನೆಯೂ, ಹೊರಟು ಆ ರೇವಾಮಹಾನದಿಯಲ್ಲಿ ಸ್ನಾನಮಾಡಿ, ಪಿತೃಗಳಿಗೆ ತರ್ಪಣಮಾಡಿ ಬ್ರಾಹ್ಮಣರಿಗೆ ದಾನಗಳನ್ನು ಕೊಟ್ಟನು.

೫೧. ಆಗ ಅವನ ಮಗಳು ಒಡವೆಗಳನ್ನು ಹಾಕಿಕೊಂಡು ಸಖಿಯರೊಡನೆ ಅತ್ತಿತ್ತ ಓಡಾಡುತ್ತಿದ್ದಳು.

೫೨. ಅಲ್ಲೊಂದು ಹುತ್ತವನ್ನೂ, ಅದರ ಮೇಲೆ ಬೆಳೆದಿರುವ ಒಂದು ಚೆನ್ನಾಗಿ ರುವ ಮರವನ್ನೂ ಕಂಡಳು. ಆ ಹುತ್ತದಲ್ಲಿ ಯೇನೋ ಕಾಣಿಸುವುದು ಕಾಣಿಸದಿರು ವುದು ಇವುಗಳಿಲ್ಲದ ತೇಜೋಮಯವಾದ ಒಂದು ರೂಪವನ್ನು ಕಂಡಳು.

ಗತ್ವಾ ತತ್ರ ಶಲಾಕಾಭಿರತುದದ್ರುಧಿರಂ ಸ್ರವತ್ ।
ದೃಷ್ಟ್ವಾ ರಾಜ್ಞ್ಯಂಗಜಾ ಖೇದಂ ಪ್ರಾಪ್ತವತ್ಯಥ ದುಃಖಿತಾ ॥ ೫೩ ॥

ನ ಜನನ್ಯೈ ತಥಾ ಪಿತ್ರೇ ಶಶಂಸಾಘೇನ ವಿಪ್ಲುತಾ ।
ಸ್ವಯಮೇವಾತ್ಮನಾತ್ಮಾನಂ ಶುಶೋಚ ಸಾ ಭಯಾತುರಾ ॥ ೫೪ ॥

ತದಾ ಭೂಶ್ಚಲಿತಾ ರಾಜನ್ ದಿವಶ್ಚೋಲ್ಕಾ ಪಪಾತ ಹ ।
ಧೂಮ್ರಾ ದಿಶೋಽಭವನ್ ಸರ್ವಾಃ ಸೂರ್ಯಶ್ಚ ಪರಿವೇಷಿತಃ ॥ ೫೫ ॥

ತದಾ ರಾಜ್ಞೋ ಹಯಾ ನಷ್ಟಾ ಹಸ್ತಿನೋ ಬಹವೋ ಮೃತಾಃ ।
ಧನಂ ರತ್ನಯುತಂ ನಷ್ಟಂ ಕಲಹೋಽಭೂನ್ಮಿಥಸ್ತದಾ ॥ ೫೬ ॥

ತದಾಲೋಕ್ಯ ನೃಪೋ ಭೀತಃ ಕಿಂಚಿದುದ್ವಿಗ್ನಮಾನಸಃ ।
ಜನಾನಪೃಚ್ಛತ್ಕೇನಾಪಿ ಮುನಯೇ ತ್ವಪರಾಧಿತಂ ॥ ೫೭ ॥

---

೫೩. ಅಲ್ಲಿಗೆ ಹೋಗಿ ಅದನ್ನು ತೆಗೆದುಕೊಳ್ಳಲು ಶಲಾಕೆಯಿಂದ ಚುಚ್ಚಿದಳು. ಅದರಿಂದ ರಕ್ತವು ಬಂದಿತು. ಅದನ್ನು ನೋಡಿ ರಾಜಪುತ್ರಿಯು ದುಃಖಗೊಂಡಳು.

೫೪. ಇದನ್ನು ತಾಯಿಗಾಗಲೀ ತಂದೆಗಾಗಲೀ ಹೇಳಲೇ ಇಲ್ಲ. ಈ ಪಾಪದಿಂದ ಖೇದಗೊಂಡು ಭಯದಿಂದ ತನ್ನಲ್ಲಿಯೇ ದುಃಖಪಡುತ್ತಿದ್ದಳು.

೫೫. ಆಗ ಭೂಮಿಯು ಅಲ್ಲಾಡಿತು. ಆಕಾಶದಿಂದ ಉಲ್ಕಾಪಾತವು ಬಿದ್ದಿತು. ದಿಕ್ಕುಗಳೆಲ್ಲಾ ಕಾಂತಿಹೀನವಾಗಿ ಹೊಗೆಬಣ್ಣವಾದುವು. ಸೂರ್ಯನ ಬೆಳಕು ಮಂದವಾಯಿತು.

೫೬. ಆಗ ರಾಜನ ಕುದುರೆಗಳೂ, ಆನೆಗಳೂ ಸತ್ತುವು. ರತ್ನಗಳೂ ಹಣವೂ ನಾಶವಾಯಿತು. ಒಬ್ಬೊರಿಗೊಬ್ಬರಿಗೆ ಜಗಳವಾಗುತ್ತಿತ್ತು.

೫೭. ಅದನ್ನು ನೋಡಿ ರಾಜನು ಹೆದರಿ, ಖೇದಗೊಂಡು, ನಿಮ್ಮಲ್ಲಿ ಯಾರಾದರೂ ಋಷಿಗಳಿಗೆ ಅಪರಾಧಮಾಡಿದಿರಾ? ಎಂದು ಎಲ್ಲರನ್ನೂ ಕೇಳಿದನು.

**ಪಾರಂಪರ್ಯೇಣ ತದ್ಜ್ಞಾತ್ವಾ ಸ್ವಪುತ್ರ್ಯಾಃ ಪರಿಚೇಷ್ಟಿತಂ ।**
**ಯಯೌ ಸ ದುಃಖಿತಸ್ತತ್ರ ಸನ್ನದ್ಧಬಲವಾಹನಃ ॥ ೫೮ ॥**

**ತಂ ವೈ ತಪೋನಿಧಿಂ ವೀಕ್ಷ್ಯ ಮಹತಾ ತಪಸಾ ಯುತಂ ।**
**ಸ್ತುತ್ವಾ ಪ್ರಸಾದಯಾಮಾಸ ಮುನಿವರ್ಯ ದಯಾಂ ಕುರು ॥ ೫೯ ॥**

**ತಸ್ಮೈ ತುಷ್ಟೋ ಜಗಾದಾಯಂ ಮುನಿವರ್ಯೋ ಮಹಾತಪಾಃ ।**
**ತವಾತ್ಮಜಾಕೃತಂ ಸರ್ವಮುತ್ಪಾತಾದ್ಯಮವೇಹಿ ತತ್ ॥ ೬೦ ॥**

**ತವ ಪುತ್ರ್ಯಾ ಮಹಾರಾಜ ಚಕ್ಷುರ್ವಿಸ್ಫೋಟನಂ ಕೃತಂ ।**
**ಬಹು ಸುಸ್ರಾವ ರುಧಿರಂ ಜಾನತೀ ತ್ವಾಮುವಾಚ ನ ॥ ೬೧ ॥**

**ತಸ್ಮಾದಿಯಂ ಮಹಾಭೂಪ ಮಹ್ಯಂ ದೇಯಾ ಯಥಾವಿಧಿ ।**
**ತತಶ್ಚೋತ್ಪಾತಶಮನಂ ಭವಿಷ್ಯತಿ ಸುರಾರ್ಚಿತ ॥ ೬೨ ॥**

**ತಚ್ಛ್ರುತ್ವಾ ದುಃಖಿತೋ ರಾಜಾ ಪ್ರಜ್ಞಾಚಕ್ಷುಷ ಆತ್ಮಜಾಂ ।**
**ದದೌ ಕುಲವಯೋರೂಪಶೀಲಲಕ್ಷಣಸಂಯುತಾಂ ॥ ೬೩ ॥**

---

೫೮-೫೯. ಬರಬರುತ್ತ ತನ್ನ ಮಗಳು ಮಾಡಿದುದನ್ನು ತಿಳಿದು, ದುಃಖಿತನಾಗಿ ಸೈನ್ಯದೊಡನೆ ಅಲ್ಲಿಗೆ ಬಂದು, ಅಲ್ಲಿ ಆ ತಪೋನಿಧಿಯನ್ನು ನೋಡಿ ಮುನಿಯೇ, ಕೃಪೆಮಾಡೆಂದು ಸ್ತುತಿಸಿದನು.

೬೦. ಮಹಾತಪಸ್ವಿಯಾದ ಆ ಮುನಿವರ್ಯನು ಅವನ ವಿಷಯದಲ್ಲಿ ಸಂತೋಷಗೊಂಡು ಎಲೈ ರಾಜನೇ, ಇದೆಲ್ಲವೂ ನಿನ್ನ ಮಗಳು ಮಾಡಿದ ದುಷ್ಕೃತ್ಯವೆಂದು ತಿಳಿ.

೬೧. ಮಹಾರಾಜನೇ. ನಿನ್ನ ಮಗಳೇ ನನ್ನ ಕಣ್ಣನ್ನು ಕಿತ್ತುಹಾಕಿದಳು. ಬಹುವಾಗಿ ರಕ್ತವು ಹರಿಯಿತು. ಅದನ್ನು ತಿಳಿದಿದ್ದರೂ, ಆಕೆಯು ನಿನ್ನೊಡನೆ ಅದನ್ನು ಹೇಳಲೇ ಇಲ್ಲ.

೬೨. ಆದ್ದರಿಂದ ಈಕೆಯನ್ನು ನನಗೆ ಲಗ್ನಮಾಡಿಕೊಡು. ಆ ಮೇಲೆ ಈ ತೊಂದರೆಗಳೆಲ್ಲವೂ ಹೋಗುತ್ತವೆ.

೬೩. ಅದನ್ನು ಕೇಳಿ ದುಃಖಗೊಂಡರೂ, ಜ್ಞಾನಿಯಾದ ರಾಜನು ಆಕೆಯನ್ನು ಅವನಿಗೆ ಕೊಟ್ಟು ವಿವಾಹಮಾಡಿದನು.

**ದತ್ತಾ ಯದಾ ನೃಪೇಣೈವಂ ಕನ್ಯಾ ಕಮಲಲೋಚನಾ ।**
**ತದೋತ್ಪಾತಾಃ ಶಮಂ ಯಾತಾಃ ಸರ್ವೇ ಮುನಿರುಷೋದ್ಗತಾಃ ॥ ೬೪ ॥**

**ರಾಜಾ ದತ್ತ್ವಾತ್ಮಜಾಂ ತಸ್ಮೈ ಮುನಯೇ ತಪಸಾಂ ನಿಧೇ ।**
**ಪ್ರಾಪ ಸ್ವಾಂ ನಗರೀಂ ಭೂಯೋ ದುಃಖಿತೋ ದಯಯಾ ಪುನಃ ॥ ೬೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಚ್ಯವನೋಪಾಖ್ಯಾನಂ ನಾಮ ಚತುರ್ದಶೋಽಧ್ಯಾಯಃ**



೬೪. ಮದುವೆ ಮಾಡಿಕೊಟ್ಟಕೂಡಲೇ ಆ ಋಷಿಯ ಕೋಪದಿಂದ ಉಂಟಾಗಿದ್ದ ತೊಂದರೆಗಳೆಲ್ಲವೂ ನಾಶವಾದುವು.

೬೫. ಆ ರಾಜನು ಮಗಳನ್ನು ಋಷಿಗೆ ಮದುವೆ ಮಾಡಿಕೊಟ್ಟು ಮಗಳ ಮೇಲಿನ ದಯೆಯಿಂದ ದುಃಖಪಡುತ್ತಾ ತನ್ನ ರಾಜಧಾನಿಗೆ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚದಶೋಽಧ್ಯಾಯಃ

---

॥ ಸುಮತಿರುವಾಚ ॥

ಅಥರ್ಷಿಸ್ಸ್ವಾಶ್ರಮಗತೋ ಮಾನವ್ಯಾ ಸಹ ಭಾರ್ಯಯಾ ।
ಮುದಂ ಪ್ರಾಪ ಹತಾಶೇಷಪಾತಕೋ ಭೋಗಯುಕ್ತಯಾ ॥ ೧ ॥

ಸಾ ಮಾನವೀ ತಂ ವರಮಾತ್ಮನಃ ಪತಿಂ
ನೇತ್ರೇಣ ಹೀನಂ ಜರಸಾ ಗತೌಜಸಂ ।
ಸಿಷೇವ ಏನಂ ಹರಿಮೇಧಸೋತ್ತಮಂ
ನಿಜೇಷ್ಟದಾತ್ರೀಂ ಕುಲದೇವತಾಂ ಯಥಾ ॥ ೨ ॥

ಶುಶ್ರೂಷತೀ ತಂ ಪತಿಮಿಂಗಿತಜ್ಞಾ
ಮಹಾನುಭಾವಂ ತಪಸಾಂ ನಿಧಿಂ ಪ್ರಿಯಂ ।
ಪರಾಂ ಮುದಂ ಪ್ರಾಪ ಸತೀ ಮನೋಹರಾ
ಶಚೀ ಯಥಾ ಶಕ್ರನಿಷೇವಣೋದ್ಯತಾ ॥ ೩ ॥

---

## ಹದಿನೈದನೆಯ ಅಧ್ಯಾಯವು

೧. ಸುಮತಿಯು ಹೇಳಿದನು:—ಇತ್ತ ಪುಣ್ಯಾತ್ಮನಾದ ಆ ಋಷಿಯು ಆ ಹೆಂಡತಿಯೊಡನೆ ಆಶ್ರಮಕ್ಕೆ ಹೋಗಿ ಸುಖವಾಗಿದ್ದನು.

೨. ಆ ಮನುವಿನ ಮಗಳು ಕುರುಡನೂ, ಮುದುಕನೂ ಆದ್ದರಿಂದ ಕಾಂತಿ ಹೀನನೂ ಆದ ಆ ಚ್ಯವನನನ್ನು ಇಷ್ಟದಾತೃವಾದ ಕುಲದೇವತೆಯನ್ನು ಸೇವಿಸುವಂತೆ ಸೇವಿಸುತ್ತಿದ್ದಳು.

೩. ಶಚಿಯು ಇಂದ್ರನನ್ನು ಸೇವಿಸುತ್ತಾ ಸಂತೋಷವನ್ನು ಹೊಂದುವಂತೆ ಆ ಋಷಿಯ ಸೇವೆಯಿಂದ ಸಂತೋಷವನ್ನು ಹೊಂದಿದಳು.

ಚರಣೌ ಸೇವತೇ ತಸ್ಯ ಸರ್ವಲಕ್ಷಣಲಕ್ಷಿತಾ ।
ರಾಜಪುತ್ರೀ ಸುಂದರಾಂಗೀ ಫಲಮೂಲೋದಕಾಶನಾ ॥ ೪ ॥

ನಿತ್ಯಂ ತದ್ವಾಕ್ಯಕರಣೇ ತತ್ಪರಾ ಪೂಜನೇ ರತಾ ।
ಕಾಲಕ್ಷೇಪಂ ಚ ಕುರುತೇ ಸರ್ವಭೂತಹಿತೇ ರತಾ ॥ ೫ ॥

ವಿಸೃಜ್ಯ ಕಾಮದಂಭಂ ಚ ದ್ವೇಷಂ ಲೋಭಂ ಭಯಂ ಮದಂ ।
ಅಪ್ರಮತ್ತೋದ್ಯತಾ ನಿತ್ಯಂ ಚ್ಯವನಂ ಸಮತೋಷಯತ್ ॥ ೬ ॥

ಏವಂ ತಸ್ಯ ಪ್ರಕುರ್ವಾಣಾ ಸೇವಾಂ ವಾಕ್ಕಾಯಕರ್ಮಭಿಃ ।
ಸಹಸ್ರಾಬ್ದಂ ಮಹಾರಾಜ ಸಾ ಚ ಕಾಮಂ ಮನಸ್ಯಧಾತ್ ॥ ೭ ॥

ಕದಾಚಿದ್ದೇವಭಿಷಜಾವಾಗತಾವಾಶ್ರಮೇ ಮುನೇಃ ।
ಸ್ವಾಗತೇನ ಸುಸಂಭಾವ್ಯ ತಯೋಃ ಪೂಜಾಂ ಚಕಾರ ಸಾ ॥ ೮ ॥

---

೪. ಆಕೆಯು ರಾಜಪುತ್ರಿಯಾದರೂ ಋಷಿಗೆ ಯೋಗ್ಯವಾದ ಆಹಾರವನ್ನೇ ತಾನೂ ತಿನ್ನುತ್ತಾ ಆತನ ಪಾದಗಳನ್ನು ಸೇವಿಸುತ್ತಿದ್ದಳು.

೫. ಯಾವಾಗಲೂ ಅವನ ಮಾತಿನಂತೆ ನಡೆಯುತ್ತಾ, ಅವನನ್ನೇ ಸೇವಿಸುತ್ತಾ ಸರ್ವಪ್ರಾಣಿಗಳ ಹಿತದಲ್ಲಿ ಆಸಕ್ತಳಾಗಿ ಕಾಲವನ್ನು ಕಳೆಯುತ್ತಿದ್ದಳು.

೬. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಬಿಟ್ಟು ಜಾಗರೂಕತೆಯಿಂದ ಆ ಚ್ಯವನನನ್ನು ಸೇವಿಸುತ್ತಿದ್ದಳು.

೭. ಮನೋವಾಕ್ಕಾಯಗಳಿಂದ ಆತನನ್ನು ಹೀಗೆ ಸೇವಿಸುತ್ತಿರಲು ಸಾವಿರ ವರ್ಷಗಳು ಕಳೆದುವು. ಆದರೆ ಒಂದು ಇಚ್ಛೆಯನ್ನು ಮಾತ್ರ ತನ್ನ ಮನಸ್ಸಿನಲ್ಲಿ ಇಟ್ಟುಕೊಂಡಿದ್ದಳು.

೮. ಒಂದುಸಾರಿ ಅಶ್ವಿನೀದೇವತೆಗಳು ಆ ಋಷಿಯ ಆಶ್ರಮಕ್ಕೆ ಬಂದರು. ಅವರನ್ನು ಸ್ವಾಗತಿಸಿ ಅವರಿಗೆ ಪೂಜೆಯನ್ನು ಮಾಡಿದಳು.

ಶರ್ಯಾತಿಕನ್ಯಾಕೃತಪೂಜನಾರ್ಘ್ಯ-
ಪಾದ್ಯಾದಿನಾ ತೋಷಿತಚಿತ್ತವೃತ್ತೀ ।
ತಾವೂಚತುಃ ಸ್ನೇಹವಶೇನ ಸುಂದರೌ
ವರಂ ವೃಣೀಷ್ವೇತಿ ಮನೋಹರಾಂಗೀಂ ॥ ೯ ॥

ತುಷ್ಟೌ ತೌ ವೀಕ್ಷ್ಯ ಭಿಷಜೌ ದೇವಾನಾಂ ವರಯಾಚನೇ ।
ಮತಿಂ ಚಕಾರ ನೃಪತೇಃ ಪುತ್ರೀ ಮತಿಮತಾಂ ವರಾ ॥ ೧೦ ॥

ಪತ್ಯಭಿಪ್ರಾಯಮಾಲಕ್ಷ್ಯ ತಾವುವಾಚ ನೃಪಾತ್ಮಜಾ ।
ದತ್ತಂ ಮೇ ಚಕ್ಷುಷೀ ಪತ್ಯುರ್ಯದಿ ತುಷ್ಟೌ ಯುವಾಂ ಸುರೌ ॥ ೧೧ ॥

ಇತ್യೇತದ್ವಚನಂ ಶ್ರುತ್ವಾ ಸುಕನ್ಯಾಯಾಃ ಮನೋಹರಂ ।
ಸತೀತ್ವಂ ಚ ವಿಲೋಕ್ಯೇದಮೂಚತುರ್ಭಿಷಜಾಂ ವರೌ ॥ ೧೨ ॥

ತ್ವತ್ಪತಿರ್ಯದಿ ದೇವಾನಾಂ ಭಾಗಂ ಯಜ್ಞೇ ದದಾತ್ಯಸೌ ।
ಆವಯೋರಧುನಾ ಕುರ್ವಶ್ಚಕ್ಷುಷೋಃ ಸ್ಫುಟದರ್ಶನಂ ॥ ೧೩ ॥

---

೯. ಈ ಶರ್ಯಾತಿಯ ಮಗಳಾದ ಸುಕನ್ಯೆಯು ಅರ್ಘ್ಯಪಾದ್ಯಾಚಮನಗಳಿಂದ ಅವರನ್ನು ಸತ್ಕರಿಸಿದಳು. ಅದರಿಂದ ಅವರಿಗೆ ಸಂತೋಷವಾಯಿತು. ಆಗ ಅವರು ಸ್ನೇಹದಿಂದ ಅಮ್ಮ ನಿನಗೇನು ವರಬೇಕು? ಕೇಳಿಕೋ? ಎಂದರು.

೧೦-೧೧. ಈಕೆಯು ಅಶ್ವಿನೀದೇವತೆಗಳು ಸಂತುಷ್ಟರಾಗಿರುವುದನ್ನು ತಿಳಿದು. ವರವನ್ನು ಕೇಳಬೇಕೆಂದು ಇಷ್ಟಪಟ್ಟು, ಗಂಡನ ಅಭಿಪ್ರಾಯವನ್ನು ತಿಳಿದುಕೊಂಡು, ನನ್ನ ಗಂಡನಿಗೆ ಕಣ್ಣುಗಳನ್ನು ಕೊಡಿರಿ ಎಂದಳು.

೧೨. ಈ ಮಾತನ್ನು ಕೇಳಿ ಆ ಅಶ್ವಿನೀದೇವತೆಗಳು ಆಕೆಯ ಪಾತಿವ್ರತ್ಯವನ್ನು ಲಕ್ಷಿಸಿ ಈರೀತಿ ಹೇಳಿದರು.

೧೩. ಅಮ್ಮಾ ನಿನ್ನ ಗಂಡನು ಯಜ್ಞದಲ್ಲಿ ದೇವತೆಗಳಂತೆ ನಮಗೂ ಭಾಗವನ್ನು ಕೊಡಿಸುವುದಾದರೆ ಅವನಿಗೆ ಕಣ್ಣುಗಳು ಕಾಣುವಂತೆ ಮಾಡುತ್ತೇವೆ ಎಂದರು.

ಚ್ಯವನೋಽಪ್ಯೇವಮಿತಿ ಪ್ರಾಹ ಭಾಗವಾನೇ ವರೌಜಸೋಃ ।
ತದಾ ಪ್ರಹೃಷ್ಟಾವಶ್ವಿನೌ ತಮೂಚತುಃ ತಪಸಾಂ ವರಂ ॥ ೧೪ ॥

ನಿಮಜ್ಜತಾಂ ಭವಾನಸ್ಮಿನ್ ಹ್ರದೇ ಸಿದ್ಧವಿನಿರ್ಮಿತೇ ।
ಇತ್ಯುಕ್ತೋ ಜರಯಾ ಗ್ರಸ್ತದೇಹೋ ಧಮನಿಸಂತತಃ ॥ ೧೫ ॥

ಹ್ರದಂ ಪ್ರವೇಶತೋಽಶ್ವಿಭ್ಯಾಂ ಸ್ವಯಂ ಚಾಮಜ್ಜತಾಂ ಹ್ರದೇ ।
ಪುರುಷಾಸ್ತ್ರಯ ಉತ್ತಸ್ಥುರಪೀಚ್ಯಾ ವನಿತಾಪ್ರಿಯಾಃ ॥ ೧೬ ॥

ರುಕ್ಮಸ್ರಜಃ ಕುಂಡಲಿನಸ್ತುಲ್ಯರೂಪಾಃ ಸುವಾಸಸಃ ।
ತಾನ್ನಿರೀಕ್ಷ್ಯ ವರಾರೋಹಾ ಸುರೂಪಾರ್ ಸೂರ್ಯವರ್ಚಸಃ ॥ ೧೭ ॥

ಅಜಾನತೀ ಪತಿಂ ಸಾಧ್ವೀ ಹ್ಯಶ್ವಿನೌ ಶರಣಂ ಯಯೌ ।
ದರ್ಶಯಿತ್ವಾ ಪತಿಂ ತಸ್ಯೈ ಪಾತಿವ್ರತ್ಯೇನ ತೋಷಿತೌ ॥ ೧೮ ॥

ಋಷಿಮಾಮಂತ್ರ್ಯ ಯಯತುರ್ವಿಮಾನೇನ ತ್ರಿವಿಷ್ಟಪಂ ।
ಯಕ್ಷ್ಯಮಾಣೇ ಕ್ರತೌ ಸ್ವೀಯಭಾಗಾಕಾರ್ಯಾಶಯಾ ಯುತೌ ॥ ೧೯ ॥

---

೧೪. ಚ್ಯವನನಿಗೆ ಈ ವಿಷಯವು ತಿಳಿಯಲು ಅವನು ಹಾಗೆಯೇ ಆಗಲಿ ಎಂದನು. ಅದರಿಂದ ಸಂತೋಷಗೊಂಡ ಅಶ್ವಿನೀದೇವತೆಗಳು ಇಂತೆಂದರು.

೧೫-೧೬. ನೀನು ಈ ಸಿದ್ಧರಿಂದ ನಿರ್ಮಿತವಾದ ಕೊಳದಲ್ಲಿ ಮುಳುಗು ಎಂದರು. ಮುದುಕನಾಗಿ ನರಗಳೆಲ್ಲವೂ ಈಚೆಗೆ ಕಾಣುತ್ತಿದ್ದ ಅವನು ಆಗಲೆನ್ನಲು ಅಶ್ವಿನೀದೇವತೆಗಳು ನೀರಿಗೆ ಅವನನ್ನು ಇಳಿಸಿ ತಾವೂ ಇಳಿದು ಮೂವರೂ ಅದರಲ್ಲಿ ಮುಳುಗಿದರು. ಅನಂತರ ದೃಢಕಾಯರಾದ, ಸುಂದರವಾದ, ಚಿನ್ನದ ಹಾರವನ್ನು ಹಾಕಿಕೊಂಡು ಕುಂಡಲಗಳನ್ನು ಧರಿಸಿ ಒಂದೇರೀತಿ ವಯಸ್ಸೂ, ದೇಹವೂ, ಬಟ್ಟೆಗಳೂ ಉಳ್ಳ ಮೂವರು ಗಂಡಸರು ಮೇಲಕ್ಕೆದ್ದರು.

೧೭-೧೮. ಸೂರ್ಯನಂತೆ ಕಾಂತಿಯುಳ್ಳ ಆ ಮೂವರಲ್ಲಿ ತನ್ನ ಗಂಡನು ಯಾರೆಂದು ಈಕೆಯು ತಿಳಿಯಲಾರದೆ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು, ಅವರು ಅವನನ್ನು ತೋರಿಸಿ ಈಕೆಯ ಪಾತಿವ್ರತ್ಯಕ್ಕೆ ಸಂತೋಷಪಟ್ಟರು.

೧೯. ಋಷಿಯ ಅನುಮತಿಯನ್ನು ಪಡೆದು ಆ ಅಶ್ವಿನೀದೇವತೆಗಳು ಹೊರಟು ಹೋದರು. ಈ ಋಷಿಯು ಯಾಗಮಾಡುವಾಗ ನಮಗೂ ಭಾಗವನ್ನು ಕೊಡುತ್ತಾನೆಂದು ತಿಳಿದುಕೊಂಡರು.

ಕಾಲೇನ ಭೂಯಸಾ ಕ್ಷಾಮಾಂ ಕರ್ಶಿತಾಂ ವ್ರತಚರ್ಯಯಾ ।
ಪ್ರೇಮಗದ್ಗದಯಾ ವಾಚಾ ಪೀಡಿತಃ ಕೃಪಯಾಽಬ್ರವೀತ್ ॥ ೨೦ ॥

ತುಷ್ಟೋಽಹಮದ್ಯ ತವ ಮಾನಿನಿ ಮಾನದಾಯಾಃ
ಶುಶ್ರೂಷಯಾ ಪರಮಯಾ ಹೃದಿ ಚೈಕಭಕ್ತ್ಯಾ ।
ಯೋ ದೇಹಿನಾಮಯಮತೀವ ಸುಹೃತ್ಸ್ವದೇಹೋ
ನಾವೇಕ್ಷಿತಸ್ಸಮುಚಿತಃ ಕ್ಷಪಿತುಂ ಮದರ್ಥೇ ॥ ೨೧ ॥

ಯೇ ಮೇ ಸ್ವಧರ್ಮನಿರತಸ್ಯ ತಪಸ್ಸಮಾಧಿ-
ವಿದ್ಯಾತ್ಮಯೋಗವಿಜಿತಾ ಭಗವತ್ಪ್ರಸಾದಾಃ ।
ತಾನೇವ ತೇ ಮದನುಸೇವನಯಾಽವರುದ್ಧಾನ್
ದೃಷ್ಟಿಂ ಪ್ರಪಶ್ಯ ವಿತರಾಮ್ಯಭಿಯಾನಶೋಕಾನ್ ॥ ೨೨ ॥

ಅನ್ಯೇ ಪುನರ್ಭಗವತೋ ಭ್ರುವ ಉದ್ವಿಜೃಂಭ
ವಿಶ್ರಂಸಿತಾರ್ಥರಚಿತಾಃ ಕಿಮುರುಕ್ರಮಸ್ಯ ।
ಸಿದ್ಧಾಸಿ ಭುಂಕ್ಷ್ವ ವಿಭವಾನ್ ನಿಜಧರ್ಮದೋಹಾನ್
ದಿವ್ಯಾನ್ನರೈರಧಿಗಮಾನ್ನೃಪವಿಕ್ರಿಯಾಭಿಃ ॥ ೨೩ ॥

---

೨೦. ಹೀಗಿರಲು ಬಹಳಕಾಲದ ಮೇಲೆ ತನ್ನ ಶುಶ್ರೂಷೆಯಲ್ಲಿ ನಿರತಳಾಗಿ ಬಡಕಲಾಗಿರುವ ಈಕೆಯನ್ನು ಕುರಿತು ಆ ಮುನಿಯು ಕೃಪೆಯಿಂದಲೂ, ಪ್ರೇಮದಿಂದಲೂ, ಇಂತೆಂದನು.

೨೧. ಎಲೈ! ಪತ್ನಿಯೇ ನಿನ್ನ ಶುಶ್ರೂಷೆಯಿಂದಲೂ, ಭಕ್ತಿಯಿಂದಲೂ ಬಹು ಸಂತೋಷಗೊಂಡಿದ್ದೇನೆ. ಈ ದೇಹವು ಪ್ರಾಣಿಗಳಿಗೆ ಬಹು ಹಿತವಾದುದಾದರೂ ನನಗೋಸ್ಕರ ಅದು ನಾಶವಾಗುತ್ತದೆಂದು ನೀನು ಲಕ್ಷಿಸಲಿಲ್ಲವಲ್ಲಾ.

೨೨. ನಾನು ತಪಸ್ಸಮಾಧಿಯಲ್ಲಿದ್ದುಕೊಂಡು ಆತ್ಮಯೋಗದಿಂದ ಯಾವ ಭಗವಂತನ ಪ್ರಸಾದಗಳನ್ನು ಗಳಿಸಿರುವೆನೋ ಅವನ್ನು ನನ್ನ ಸೇವನೆಯಿಂದ ತೃಪ್ತನಾಗಿ ನಿನಗೆ ಕೊಡುತ್ತೇನೆ. ಮತ್ತು ಉತ್ತಮವಾದ ದೃಷ್ಟಿಯನ್ನು ಕೊಡುತ್ತೇನೆ ನೋಡು.

೨೩. ವಿಷ್ಣುವು ಹುಬ್ಬಿನ ಸಂಜ್ಞೆಯಿಂದಲೇ ಕೊಡತಕ್ಕ, ಇತರ ಮನುಜರೂ, ರಾಜರೂ ಅನುಭವಿಸುವ ಮಿಕ್ಕ ಎಲ್ಲಾ ಭೋಗಗಳನ್ನೂ ಅನುಭವಿಸು ಎಂದು.

ಏವಂ ಬ್ರುವಾಣಮಬಲಾಽಖಿಲಯೋಗಮಾಯಾ
ವಿದ್ಯಾವಿಚಕ್ಷಣಮವೇಕ್ಷ್ಯ ಗತಾಧಿರಾಸೀತ್ ।
ಸಂಪ್ರಶ್ರಯಪ್ರಣಯವಿಹ್ವಲಯಾ ಗಿರೇಷದ್
ವ್ರೀಡಾವಿಲೋಕವಿಲಸದ್ಧಸಿತಾ ತಮಾಹ ॥ ೨೪ ॥

॥ ಸುಕನ್ಯೋವಾಚ ॥

ರಾದ್ಧಂ ಬತ ದ್ವಿಜವೃಷೈತದಮೋಘಯೋಗ
ಮಾಯಾಧಿಪೇ ತ್ವಯಿ ವಿಭೋ ತದವೈಮಿ ಭರ್ತಃ ।
ಯಸ್ತೇಽಭ್ಯಧಾಯಿ ಸಮಯಃ ಸಕೃದಂಗಸಂಗೋ
ಭೂಯಾದ್ಗರೀಯಸಿ ಗುಣಪ್ರಸವಃ ಸತೀನಾಂ ॥ ೨೫ ॥

ತತ್ರೇತಿ ಕೃತ್ಯಮುಪಶಿಕ್ಷ್ಯ ಯಥೋಪದೇಶಂ
ಯೇನೈಷ ಕರ್ಶಿತತಮೋಽತಿರಿರಂಸಯಾತ್ಮಾ ।
ಸಿದ್ಧ್ಯೇತ ತೇ ಕೃತಮನೋಭವಧರ್ಷಿತಾಯಾ
ದೀನಸ್ತದೀಶ ಭವನಂ ಸದೃಶಂ ವಿಚಕ್ಷ್ವ ॥ ೨೬ ॥

---

೨೪. ಗಂಡನು ಹೇಳುತ್ತಿರಲು ಅವನು ಸಮಸ್ತ ಯೋಗಗಳಿಂದ ಸಿದ್ಧಿಯನ್ನು ಹೊಂದಿ ವಿದ್ಯೆಯಲ್ಲಿ ವಿಶಾರದನಾಗಿರುವುದನ್ನು ನೋಡಿ ಸಂತೋಷಪಟ್ಟಳು. ನಮ್ರಳಾಗಿ ಲಜ್ಜೆಯಿಂದ ಕಟಾಕ್ಷಿಸುತ್ತಾ ಪ್ರೇಮದಿಂದ ಇಂತೆಂದಳು.

೨೫. ಸೂತಕನ್ಯೆಯು ಹೇಳಿದಳು:—ಎಲೈ ಬ್ರಾಹ್ಮಣಶ್ರೇಷ್ಠನೇ! ನೀನು ಆ ವಿದ್ಯೆಗಳಲ್ಲಿಯೂ, ಮಾಯಾವಿದ್ಯೆಯಲ್ಲಿಯೂ, ಗಟ್ಟಿಗನಾಗಿರುವುದು ಖಂಡಿತವೆಂದು ಬಲ್ಲೆ. ನೀನು ನನಗೆ ಒಂದಾವರ್ತಿ ಹೇಳಿದ ಆ ಅಂಗಸಂಗವೂ, ಆ ಮಾತುಗಳೂ, ಹೆಂಗಸರಿಗೆ ಬಹು ಗುಣವನ್ನು ಕೊಡತಕ್ಕವು. ಮತ್ತು ಅವೇ ಅಪಾಲವಾಗಿ ಆಗಲಿ.

೨೬. ಅದರಂತೆ ಮಾಡತಕ್ಕ ವಿಷಯಗಳನ್ನು ಹೇಳಿದಳು. ಅಲ್ಲದೆ ಎಲೈ ಪತಿಯೇ! ನಾನು ಯಾವ ಭೋಗದಿಂದ ಈ ಆತ್ಮನನ್ನು ಇಷ್ಟು ದಾರಿಸಿ ಕೃಶಮಾಡಿರುವೆನೋ ಅದಕ್ಕೆ ತಕ್ಕಂತಹ ಉತ್ತಮವಾದ, ಮನ್ಮಥನ ಯೋಗ್ಯತೆಗೆ ಮೀರಿದ ಮನೆಗಳನ್ನೂ ಅವಕ್ಕೆ ಬೇಕಾದ ಭೋಗಗಳನ್ನೂ ನಿರ್ಮಿಸು.

॥ ಸುಮತಿರುವಾಚ ॥

ಪ್ರಿಯಾಯಾಃ ಪ್ರಿಯಮನ್ವಿಚ್ಛಂಶ್ಚ್ಯವನೋ ಯೋಗಮಾಸ್ಥಿತಃ ।
ವಿಮಾನಂ ಕಾಮದಂ ರಾಜಂಸ್ತರ್ಹ್ಯೇವಾಽವಿರಚೀಕರತ್ ॥ ೨೭ ॥

ಸರ್ವಕಾಮದುಘಂ ದಿವ್ಯಂ ಸರ್ವರತ್ನಸಮನ್ವಿತಂ ।
ಸರ್ವರ್ಧ್ಯುಪಚಯೋದರ್ಕಂ ಮಣಿಸ್ತಂಭೈರುಪಸ್ಕೃತಂ ॥ ೨೮ ॥

ದಿವ್ಯೋಪಸ್ತರಣೋಪೇತಂ ಸರ್ವಕಾಲಸುಖಾವಹಂ ।
ಪಟ್ಟಿಕಾಭಿಃ ಪತಾಕಾಭಿರ್ವಿಚಿತ್ರಾಭಿರಲಂಕೃತಂ ॥ ೨೯ ॥

ಸ್ರಗ್ಭಿರ್ವಿಚಿತ್ರಮಾಲಾಭಿರ್ಮಂಜುಸಿಂಜತ್ಷಡಂಘ್ರಿಭಿಃ ।
ದುಕೂಲಕ್ಷೌಮಕೌಶೇಯೈರ್ನಾನಾವಸ್ತ್ರೈರ್ವಿರಾಜಿತಂ ॥ ೩೦ ॥

ಉಪರ್ಯುಪರಿ ವಿನ್ಯಸ್ತನಿಲಯೇಷು ಪೃಥಕ್ಪೃಥಕ್ ।
ಕ್ಲೃಪ್ತೈಃ ಕಶಿಪುಭಿಃ ಕ್ರಾನ್ತಂ ಪರ್ಯಂಕವ್ಯಜನಾದಿಭಿಃ ॥ ೩೧ ॥

---

೨೭. ಸುಮತಿಯು ಹೇಳಿದನು :—ಹೆಂಡತಿಯ ಅಭೀಷ್ಟವನ್ನು ನೆರವೇರಿಸಲು ಚ್ಯವನನು ಯೋಗವನ್ನು ಹೊಂದಿ ಇಷ್ಟಾರ್ಥವನ್ನು ಕೊಡುವ ಒಂದು ವಿಮಾನವನ್ನು ನಿರ್ಮಿಸಿದನು.

೨೮—೩೦. ಆ ಮನೆಯು ಇಷ್ಟಾರ್ಥವೆಲ್ಲವನ್ನೂ ಕೊಡುವಂತಹುದು. ಸರ್ವ ರತ್ನಗಳಿಂದ ಕೂಡಿರುವುದು. ಎಲ್ಲಾ ಪದಾರ್ಥಗಳೂ ವ್ಯಯವಾದಂತೆಲ್ಲಾ ಹೆಚ್ಚುತ್ತಿರುವುದು. ಎಲ್ಲಾ ಕಾಲಗಳಲ್ಲೂ ಸುಖವಾಗಿರುವುದು. ಪಟ್ಟಿಗಳೂ, ಪತಾಕೆಗಳಿಂದ ಎಲ್ಲಾ ಕಡೆಯೂ, ಅಲಂಕೃತವಾಗಿರುವುದು. ನಾನಾ ಬಗೆಯಾದ ಹೂಮಾಲೆಗಳಿದ್ದು ಅದರ ಮೇಲೆ ದುಂಬಿಗಳು ಕೂಗುತ್ತಲಿರುವುದು. ಪಟ್ಟೇಮಡಿ, ನಾರುಮಡಿ, ಮತ್ತು ಉತ್ತಮೋತ್ತಮವಾದ ಬಟ್ಟೆಗಳಿಂದ ಕೂಡಿರುವುದು.

೩೧. ಒಂದರ ಮೇಲೆ ಒಂದರಂತೆ ಅನೇಕ ಮಹಡಿಗಳನ್ನು ಕಟ್ಟಿ ಅವುಗಳಲ್ಲಿ ಆಹಾರಗಳನ್ನೂ ಬಟ್ಟೆಗಳನ್ನೂ ಬೇಕಾದಷ್ಟು ಇಟ್ಟು, ಮಲಗಿಕೊಳ್ಳಲು ಮಂಚ, ಹಾಸಿಗೆ, ಬೀಸಣಿಗೆ ಮುಂತಾದುವುಗಳನ್ನು ಸಿದ್ಧಪಡಿಸಿದ್ದರು.

ತತ್ರ ತತ್ರ ವಿನಿಕ್ಷಿಪ್ತನಾನಾಶಿಲ್ಪೋಪಶೋಭಿತಂ ।
ಮಹಾಮರಕತಸ್ಥಲ್ಯಾ ಜುಷ್ಟಂ ವಿದ್ರುಮವೇದಿಭಿಃ ॥ ೩೨ ॥

ದ್ವಾರ್ಭ್ನಿ ವಿದ್ರುಮದೇಹಲ್ಯಾ ಜಾತಂ ವಜ್ರಕಪಾಟಿಕಂ ।
ಶಿಖರೇಷ್ವಿಂದ್ರನೀಲೇಷು ಹೇಮಕುಂಭೈರಧಿಶ್ರಿತಂ ॥ ೩೩ ॥

ಚಕ್ಷುಷ್ಮತ್ಪದ್ಮರಾಗಾಗ್ರ್ಯೈರ್ವಜ್ರಭಿತ್ತಿಷು ನಿರ್ಮಿತೈಃ ।
ಜುಷ್ಟಂ ವಿಚಿತ್ರವೈತಾನ್ಯೈರ್ಮುಕ್ತಾಹಾರಾವಲಂಬಿತೈಃ ॥ ೩೪ ॥

ಹಂಸಪಾರಾವತವ್ರಾತೈಸ್ತತ್ರ ತತ್ರ ವಿಕೂಜಿತಂ ।
ಕೃತ್ರಿಮಾನ್ಮನ್ಯಮಾನೈಸ್ತಾನಧಿರುಹ್ಯಾಽವರುಹ್ಯ ಚ ॥ ೩೫ ॥

ವಿಹಾರಸ್ಥಾನವಿಶ್ರಾಮಸಂವೇಶಪ್ರಾಂಗಣಾಜಿರೈಃ ।
ಯಥೋಪಜೋಷಂ ರಚಿತೈರ್ವಿಸ್ಮಾಪನಮಿವಾತ್ಮನಃ ॥ ೩೬ ॥

---

೩೨. ನಾನಾಬಗೆಯಾದ ಶಿಲ್ಪದಿಂದ ಕೂಡಿದ ಪಕ್ಷಿ ಮೃಗ ಮುಂತಾದುವನ್ನು ಅಲ್ಲಲ್ಲಿಯೇ ಇಟ್ಟಿದ್ದರು. ನೆಲಕ್ಕೆ ಮರಕತಶಿಲೆಯನ್ನೂ, ಹವಳವನ್ನೂ ಹಾಕಿ ಅಳವಡಿಸಿ ಮನೋಹರವಾಗಿ ಮಾಡಿದ್ದರು.

೩೩. ಬಾಗಿಲಿಗೆ ಹವಳದ ಹೊಸಲುಗಳನ್ನು ಹಾಕಿ ವಜ್ರದ ಕದಗಳನ್ನು ಮಾಡಿದ್ದರು. ಇಂದ್ರನೀಲಮಣಿಯ ಶಿಖರಗಳ ಮೇಲೆ ಚಿನ್ನದ ಬಿಂದಿಗೆಗಳನ್ನಿಟ್ಟಿ ದ್ದರು.

೩೪. ವಜ್ರದ ಗೋಡೆಗಳಲ್ಲಿ ಅಲ್ಲಲ್ಲಿ ಪದ್ಮರಾಗಮಣಿಗಳನ್ನು ಹಾಕಿ ಕಿಟಕಿ ಗಳನ್ನು ಮಾಡಿದ್ದರು. ಮೇಲುಗಡೆ ಮೇಲ್ಕಟ್ಟನ್ನು ಹಾಕಿ ಮುತ್ತಿನ ಹಾರಗಳ ಗೊಂಚಲನ್ನು ಇಳಿಬಿಟ್ಟಿದ್ದರು.

೩೫. ಅವೆಲ್ಲವೂ ಸ್ವಭಾವವಾದುದಲ್ಲ. ಮಾಡಲ್ಪಟ್ಟುವೆಂದು ತಿಳಿದು ಹತ್ತಿ ಇಳಿದುಹೋಗುವಂತೆ ಮಾಡಲ್ಪಟ್ಟ ಹಂಸ ಪಾರಿವಾಳಗಳಿಂದಲೂ ಅವು ಕೂಗುತ್ತಿರು ವಂತೆಯೂ ಮಾಡಲ್ಪಟ್ಟಿರುತ್ತವೆ.

೩೬. ಕ್ರೀಡೆಗೆ ತಕ್ಕಂತಿರುವ ಕುಳಿತುಕೊಳ್ಳುವ ಸ್ಥಳ, ತೊಟ್ಟಿ, ಜಗುಲಿಗಳನ್ನು ಸರಿಯಾದ ಸ್ಥಳಗಳಲ್ಲಿಟ್ಟು ಆಶ್ಚರ್ಯಪಡುವಂತೆ ಮಾಡಿದ್ದಾರೆ.

ಈದೃಗ್ಗೃಹಂ ಪ್ರಪಶ್ಯನ್ತೀಂ ನಾತಿಪ್ರೀತೇನ ಚೇತಸಾ ।
ಸರ್ವಭೂತಾಶಯಾಭಿಜ್ಞಃ ಪ್ರೋವಾಚ ವಚನಂ ಸ್ವಯಂ ॥ ೩೭ ॥

ನಿಮಜ್ಜ್ಯಾಸ್ಮಿನ್ಹ್ರದೇ ಭೀರು ವಿಮಾನಮಿದಮಾರುಹ ।
ಸಾ ತು ಭರ್ತುಸ್ಸಮಾದಾಯ ವಚಃ ಕುವಲಯೇಕ್ಷಣಾ ॥ ೩೮ ॥

ಸರಜೋ ಬಿಭ್ರತೀ ವಾಸೋ ವೇಣೀಭೂತಾಂಶ್ಚ ಮೂರ್ಧಜಾನ್ ।
ಅಂಗಂ ಚ ಮಲಪಂಕೇನ ಸಂಛನ್ನಂ ಶಬಳಸ್ತನಂ ॥ ೩೯ ॥

ಆವಿವೇಶ ಸರಸ್ತತ್ರ ಮುದಾ ಶಿವಜಲಾಶಯಂ ।
ಸಾಂತಃಸರಸಿ ವೇಶ್ಮಸ್ಥಾಃ ಶತಾನಿ ದಶ ಕನ್ಯಕಾಃ ॥ ೪೦ ॥

ಸರ್ವಾಃ ಕಿಶೋರವಯಸೋ ದದರ್ಶೋತ್ಪಲಗಂಧಯಃ ।
ತಾ ದೃಷ್ಟ್ವಾ ಸಹಸೋತ್ಥಾಯ ಪ್ರೋಚುಃ ಪ್ರಾಂಜಲಯಃ ಸ್ತ್ರಿಯಃ ॥ ೪೧ ॥

---

೩೭. ಈ ರೀತಿಯಾದ ಮನೆಯನ್ನು ನೋಡುತ್ತಿರುವ ಈಕೆಯನ್ನು ಕುರಿತು ಸರ್ವಪ್ರಾಣಿಗಳ ಮನಸ್ಸನ್ನೂ ಬಲ್ಲ ಆತನು, ತಾನು ಇಷ್ಟು ಮಾಡಿದರೂ ಸಂತೋಷ ಪಡದೇ ಹೀಗೆಂದನು.

೩೮. ಎಲೈ ಮಂಗಳಳೇ, ಈ ಕೊಳದಲ್ಲಿ ಸ್ನಾನಮಾಡಿ ಈ ಮನೆಗೆ ಬಾ ಎಂದನು. ಅವಳು ಹಾಗೇ ಆಗಲೆಂದಳು.

೩೯. ಕೊಳೆಯ ಬಟ್ಟೆಯನ್ನುಟ್ಟು, ತಲೆಕೂದಲೆಲ್ಲವೂ ಜಡೆಯಾಗಿ, ಅವಯವಗಳು ಕೊಳೆಯಿಂದ ಕೂಡಿದ ಆಕೆಯು ಆ ಉತ್ತಮವೂ, ಮಂಗಳವೂ, ಆದ ಕೊಳದಲ್ಲಿ ಇಳಿದು ಸ್ನಾನಮಾಡಿದಳು.

೪೦-೪೧. ಆಕೆಯು ಕೊಳದಲ್ಲಿ ಮುಳುಗಿರುವಾಗಲೇ ಹತ್ತುಸಾವಿರ ಸಂಖ್ಯೆಯುಳ್ಳ, ಅದೇತಾನೇ ಪ್ರೌಢವಯಸ್ಸಿಗೆ ಕಾಲಿಟ್ಟಿರುವ, ಕಮಲದ ವಾಸನೆಯುಳ್ಳ ಹುಡುಗಿಯರು ಮೇಲೆ ನಿಂತಿದ್ದು, ಆಕೆಯು ಸ್ನಾನದಿಂದ ಎದ್ದ ಕೂಡಲೇ ಆಕೆಯನ್ನು ಕುರಿತು ಕೈಕಟ್ಟಿಕೊಂಡು ಇಂತೆಂದರು.

ವಯಂ ಕರ್ಮಕರಾಸ್ತುಭ್ಯಂ ಶಾಧಿ ನಃ ಕರವಾಮ ಕಿಂ ।
ಸ್ನಾನೇನ ತಾಂ ಮಹಾರ್ಹೇಣ ಸ್ನಾಪಯಿತ್ವಾ ಮನಸ್ವಿನೀಂ ॥ ೪೨ ॥

ಮುಕೂಲೇ ನಿರ್ಮಲೇ ಸೂಕ್ಷ್ಮೇ ದದುರಸ್ಯೈ ಚ ಮಾನದ ।
ಭೂಷಣಾನಿ ಪರಾರ್ಘ್ಯಾಣಿ ವರೀಯಾಂಸಿ ದ್ಯುಮಂತಿ ಚ ॥ ೪೩ ॥

ಅನ್ನಂ ಸರ್ವಗುಣೋಪೇತಂ ಪಾನಂ ಚೈವಾಮೃತಾಸವಂ ।
ಅಥಾದರ್ಶೇ ಸ್ವಮಾತ್ಮಾನಂ ಸ್ರಗ್ವಿಣಂ ವಿರಜೋಂಬರಂ ॥ ೪೪ ॥

ತಾಭಿಃ ಕೃತಸ್ವಸ್ತ್ಯಯನಂ ಕನ್ಯಾಭಿರ್ಬಹುಮಾನಿತಂ ।
ಹಾರೇಣ ಚ ಮಹಾರ್ಹೇಣ ರುಚಕೇನ ವಿಭೂಷಿತಂ ॥ ೪೫ ॥

ನಿಷ್ಕಗ್ರೀವಂ ವಲಯಿನಂ ಕೂಜತ್ಕಾಂಚನನೂಪುರಂ ।
ಶ್ರೋಣ್ಯೋರಧ್ಯಸ್ತಯಾ ಕಾಂಚ್ಯಾ ಕಾಂಚನ್ಯಾ ಬಹುರತ್ನಯಾ ॥ ೪೬ ॥

ಸುಭ್ರುವಾ, ಸುದತಾ ಶುಕ್ಲಸ್ನಿಗ್ಧಾಪಾಂಗೇನ ಚಕ್ಷುಷಾ ।
ಪದ್ಮಕೋಶಸ್ಪೃಧಾ ಲೀನೈರಲಕೈಶ್ಚ ಲಸನ್ಮುಖಂ ॥ ೪೭ ॥

---

೪೨-೪೩. ಅಮ್ಮಾ, ನಾವು ನಿನಗೆ ಆಳುಗಳು. ನಾವು ಏನು ಮಾಡಬೇಕೆಂಬುದನ್ನು ನೀನು ಹೇಳು. ಎಂದು ಆಕೆಗೆ ಸ್ನಾನಮಾಡಿಸಿ ಉತ್ತಮವಾದ ಬಟ್ಟೆಗಳನ್ನುಡಿಸಿ ರತ್ನಾಭರಣಗಳನ್ನು ತೊಡಿಸಿದರು.

೪೪. ಸಮಸ್ತ ರುಚಿಗಳಿಂದ ಕೂಡಿದ ಅನ್ನವನ್ನು ಸಿದ್ಧಮಾಡಿದರು. ಕನ್ನಡಿಯಲ್ಲಿ ತಾನು ಹಾರ ಹಾಕಿಕೊಂಡು ಕೊಳೆಯಿಲ್ಲದಿರುವುದನ್ನು ನೋಡಿಕೊಂಡಳು.

೪೫-೪೬. ಆ ಕನ್ಯೆಯರು ಒಳ್ಳೆಯದನ್ನು ಕೋರುತ್ತಾ, ಗೌರವಿಸುತ್ತಾ, ಉತ್ತಮವಾದ ಹಾರಗಳನ್ನು ಹಾಕಿ, ಕತ್ತಿನಲ್ಲಿ ಚಿನ್ನದ ಒಡವೆಗಳು, ಕೈಗೆ ಬಳೆಗಳು, ನಡುವಿಗೆ ಶಬ್ದಮಾಡುವ ಒಡ್ಯಾಣವು, ಕಾಲಿಗೆ ಸದ್ದುಮಾಡುವ ಕಾಲುಕಡಗ ಮಿಂಚುಗಳು ಇವನ್ನು ತೊಡಿಸಿದರು.

೪೭. ಹುಬ್ಬುಗಳು ಚೆನ್ನಾಗಿಯೂ, ಹಲ್ಲುಗಳು ಸಾಲುಸಾಲಾಗಿ ಶುಭ್ರವಾಗಿಯೂ, ಕಣ್ಣುಗಳು ಮನೋಹರವಾಗಿಯೂ, ಮುಂಗುರುಳು ಮುಖಕ್ಕೆ ಅಲಂಕಾರವಾಗುವಂತೆಯೂ, ಮಾಡಲ್ಪಟ್ಟುವು.

ಯದಾ ಸಸ್ಮಾರ ದಯಿತಮೃಷೀಣಾಂ ವಲ್ಲಭಂ ಪತಿಂ ।
ತತ್ರ ಚಾಸ್ತೇ ಸಹ ಸ್ತ್ರೀಭಿರ್ಯತ್ರಾಸ್ತೇ ಸ ಮುನೀಶ್ವರಃ ॥ ೪೮ ॥

ಭರ್ತುಃ ಪುರಸ್ತಾದಾತ್ಮಾನಂ ಸ್ತ್ರೀಸಹಸ್ರವೃತಂ ತದಾ ।
ನಿಶಮ್ಯ ತದ್ಯೋಗಗತಿಂ ಸಂಶಯಂ ಪ್ರತ್ಯಪದ್ಯತ ॥ ೪೯ ॥

ಸ ತಾಂ ಕೃತಮಲಸ್ನಾನಾಂ ವಿಭ್ರಾಜನ್ತೀಮನುಪೂರ್ವವತ್ ।
ಆತ್ಮನೋ ಬಿಭ್ರತೀಂ ರೂಪಂ ಸಂವೀತರುಚಿರಸ್ತನೀಂ ॥ ೫೦ ॥

ವಿದ್ಯಾಧರೀಸಹಸ್ರೇಣ ಸೇವ್ಯಮಾನಾಂ ಸುವಾಸಸಂ ।
ಜಾತಭಾವೋ ವಿಮಾನಂ ತದಾರೋಪಯದಮಿತ್ರಹನ್ ॥ ೫೧ ॥

ತಸ್ಮಿನ್ನಲುಪ್ತಮಹಿಮಾ ಪ್ರಿಯಯಾನುಷಕ್ತೋ
ವಿದ್ಯಾಧರೀಭಿರುಪಚೀರ್ಣವಪುರ್ವಿಮಾನೇ ।
ಬಭ್ರಾಜ ಉತ್ಕಚಕುಮುದ್ಗಣವಾನಪೀಚ್ಯ-
ಸ್ತಾರಾಭಿರಾವೃತ ಇವೋಡುಪತಿರ್ನಭಸ್ಥಃ ॥ ೫೨ ॥

---

೪೮. ಋಷಿಶ್ರೇಷ್ಠನಾದ ಆ ಚ್ಯವನನನ್ನು ಸ್ಮರಿಸಿದ ಕೂಡಲೇ ಆತನ ಬಳಿಗೆ ಆ ಸ್ತ್ರೀಯರು ಆಕೆಯನ್ನು ಕರೆದುಕೊಂಡು ಹೋದರು.

೪೯. ಗಂಡನ ಎದುರಿಗೆ ಆ ಸ್ತ್ರೀಯರೊಡನೆ ಹೋಗಲು ಆತನು ನೋಡಿ ತನ್ನ ಯೋಗದ ಸ್ಥಿತಿಯನ್ನು ಕುರಿತು ತನಗೇ ಸಂಶಯವುಂಟಾಯಿತು.

೫೦-೫೧. ಅಭ್ಯಂಜನಮಾಡಿದ, ರಮ್ಯಳಾಗಿರುವ, ಸ್ತನಗಳು ಗುಪ್ತವಾಗಿ ಕಾಣುವಂತೆ ಬಟ್ಟೆಯನ್ನು ಹಾಕಿಕೊಂಡು ವಿದ್ಯಾಧರಿಯಿಂದ ಸೇವಿಸಲ್ಪಡುತ್ತಿರುವ ಆಕೆಯಲ್ಲಿ ಮನಸ್ಸು ಹುಟ್ಟಿ ಆ ವಿಮಾನವನ್ನು ಹತ್ತಿದನು.

೫೨. ಆ ಪೂರ್ಣಮಹಿಮಾವಂತನಾದ ಋಷಿಯು ಪ್ರೀತಿಯಿಂದ ಕೂಡಿಕೊಂಡು, ವಿದ್ಯಾಧರಿಯರಿಂದ ಪ್ರಕಾಶಿಸುತ್ತಾ, ಕಾಂತಿಮಂತನಾಗಿ, ನಕ್ಷತ್ರಗಳಿಂದ ಕೂಡಿ ಪೂರ್ಣನಾದ ಚಂದ್ರನಂತೆ ವಿಮಾನದಲ್ಲಿ ಪ್ರಕಾಶಿಸಿದನು.

ತೇನಾಷ್ಟಲೋಕಪವಿಹಾರಕುಲಾಚಲೇಂದ್ರ-
ದ್ರೋಣೀಷ್ವನಂಗಸಖಮಾರುತಸೌಭಗಾಸು ।
ಸಿದ್ಧೈರ್ನುತೋದ್ಯುಧುನಿಪಾತಶಿವಸ್ವನಾಸು
ರೇಮೇ ಚಿರಂ ಧನದವಲ್ಲಲನಾವರೂಥೀ ॥ ೫೩ ॥

ವೈಶ್ರಂಭಕೇ ಸುರವನೇ ನಂದನೇ ಪುಷ್ಪಭದ್ರಕೇ ।
ಮಾನಸೇ ಚೈತ್ರರಥ್ಯೇ ಚ ಸ ರೇಮೇ ರಾಮಯಾ ಯುತಃ ॥ ೫೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಚ್ಯವನಸ್ಯ ತಪೋಭೋಗವರ್ಣನಂ
ನಾಮ ಪಂಚದಶೋಽಧ್ಯಾಯಃ



---

೫೩. ಎಂಟುಜನ ಲೋಕಪಾಲಕರೂ ವಿಹರಿಸುವ, ಮಂದಮಾರುತದಿಂದ ರಮ್ಯವಾದ, ಗಂಗಾಪ್ರವಾಹವು ಬೀಳುವುದರಿಂದ ಪವಿತ್ರವಾದ ಮೇರು ಹಿಮವಂತಗಳ ಸಾನುಪ್ರದೇಶಗಳಲ್ಲಿ ಸಿದ್ಧರಿಂದ ಹೊಗಳಲ್ಪಡುತ್ತಾ ವಿಮಾನದಲ್ಲಿ ಬಹುಕಾಲ ರಮಿಸಿದನು.

೫೪. ವೈಶ್ರಂಭಕ, ಸುರವನ, ನಂದನ, ಪುಷ್ಪಭದ್ರ, ಮಾನಸ, ಚೈತ್ರರಥ್ಯ ಗಳೆಂಬ ವನಗಳಲ್ಲಿ ಆ ಹೆಂಡತಿಯೊಡನೆ ರಮಿಸುತ್ತಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಚ್ಯವನನ ತಪಸ್ಸಿನ ಭೋಗವರ್ಣನವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷೋಡಶೋಽಧ್ಯಾಯಃ

॥ ಸುಮತಿರುವಾಚ ॥

ಏವಂ ತಯಾ ಕ್ರೀಡಮಾನಃ ಸರ್ವತ್ರ ಧರಣೀತಲೇ ।
ನಾಬುದ್ಧ್ಯತ ಗತಾನಬ್ದಾನ್ ಶತಸಂಖ್ಯಾಪರಿಮಿತಾನ್ ॥ ೧ ॥

ತತೋ ಜ್ಞಾತ್ವಾಥ ತದ್ವಿಪ್ರಃ ಸ್ವಕಾಲಪರಿವರ್ತಿನೀಂ ।
ಮನೋರಥೇನ ಪೂರ್ಣಾಂ ಚ ಸ್ವಸ್ಯ ಪ್ರಿಯತಮಾಂ ವರಾಂ ॥ ೨ ॥

ನ್ಯವರ್ತತಾಶ್ರಮಂ ಶ್ರೇಷ್ಠಂ ಪಯೋಷ್ಣ್ಯಾಸ್ತೀರಸಂಸ್ಥಿತಂ ।
ನಿರ್ವೈರಜನ್ತುಜನತಾಸಂಕುಲಂ ಮೃಗಸೇವಿತಂ ॥ ೩ ॥

---

## ಹದಿನಾರನೆಯ ಅಧ್ಯಾಯವು

೧. ಸುಮತಿಯು ಹೇಳಿದನು:—ಹೀಗೆ ಅವಳೊಡನೆ ಕ್ರೀಡಿಸುತ್ತಾ ನೂರರ ಗಟ್ಟಲೆ ಕಳೆದ ವರ್ಷಗಳನ್ನು ಅವನು ತಿಳಿಯಲೇ ಇಲ್ಲ.

೨. ಅನಂತರ ಆ ಚ್ಯವನನು ತನ್ನ ಹಿಂದಿನ ಸ್ಥಿತಿ ಈಗಿನ ಸ್ಥಿತಿಗಳನ್ನು ತಿಳಿದು ಆದ ವ್ಯತ್ಯಾಸವು ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನೂ ತಿಳಿದನು. ಮತ್ತು ಆ ಪರಿವರ್ತನೆಯಿಂದ ತನ್ನ ಹೆಂಡತಿಯು ಆಶಾಪೂರ್ತಿಯಾದದ್ದನ್ನೂ ತಿಳಿದನು.

೩. ಆಮೇಲೆ ಪಯೋಷ್ಣೀನದಿಯ ದಡದಲ್ಲಿರುವ, ವೈರವನ್ನು ಬಿಟ್ಟಿರುವ ಜನಗಳಿಂದಲೂ, ಮೃಗಗಳಿಂದಲೂ, ಕೂಡಿರುವ ತನ್ನ ಆಶ್ರಮಕ್ಕೆ ಮತ್ತೆ ಬಂದನು.

ತತ್ರಾವಸತ್ಸ ಸುತಪಾಃ ಶಿಷ್ಯೈರ್ವೇದಪಸಮನ್ವಿತೈಃ ।
ಸೇವಿತಾಂಘ್ರಿಯುಗೋ ನಿತ್ಯಂ ತತಾಪ ಪರಮಂ ತಪಃ ॥ ೪ ॥

ಕದಾಚಿದಥ ಶರ್ಯಾತಿರ್ಯಷ್ಟುಮೈಚ್ಛತ ದೇವತಾಃ ।
ತದಾ ಚ್ಯವನಮಾನೇತುಂ ಪ್ರೇಷಯಾಮಾಸ ಸೇವಕಾನ್ ॥ ೫ ॥

ತೈರಾಹೂತೋ ದ್ವಿಜವರಸ್ತದಾಗಚ್ಛನ್ ಮಹಾತಪಾಃ ।
ಸುಕನ್ಯಯಾ ಧರ್ಮಪತ್ನ್ಯಾ ಸ್ವಾಚಾರಪರಿನಿಷ್ಠಯಾ ॥ ೬ ॥

ಆಗತಂ ತಂ ಮುನಿವರಂ ಪತ್ನ್ಯಾ ಸಹ ಮಹಾಯಶಾಃ ।
ದದರ್ಶ ದುಹಿತುಃ ಪಾರ್ಶ್ವೇ ಪುರುಷಂ ಸೂರ್ಯವರ್ಚಸಂ ॥ ೭ ॥

ರಾಜಾ ದುಹಿತರಂ ಪ್ರಾಹ ಕೃತಪಾದಾಭಿವಂದನಾಂ ।
ಆಶಿಷೋ ನ ಪ್ರಯುಂಜಾನೋ ನಾತಿಪ್ರೀತಮನಾ ಇವ ॥ ೮ ॥

---

೪. ಅಲ್ಲಿ ತನ್ನ ವೇದಜ್ಞರಾದ ಶಿಷ್ಯರಿಂದ ಸೇವಿಸಲ್ಪಡುತ್ತಾ ಬಹುಕಾಲ ತಪಸ್ಸನ್ನು ಮಾಡಿದನು.

೫. ಒಂದುಸಾರಿ ಶರ್ಯಾತಿರಾಜನಿಗೆ ಯಾಗಮಾಡಬೇಕೆಂಬ ಇಚ್ಛೆಯುಂಟಾಗಲು, ಚ್ಯವನಋಷಿಯನ್ನು ಕರೆತರಲು ಆಳುಗಳನ್ನು ಕಳುಹಿದನು.

೬. ಅವರು ಬಂದು ಕರೆಯಲು ಆ ಋಷಿಯು ಆಚಾರದಲ್ಲಿ ನಿರತಳಾದ ಆ ಸುಕನ್ಯೆಯೆಂಬ ತನ್ನ ಧರ್ಮಪತ್ನಿಯೊಡನೆ ಹೋದನು.

೭. ಹೆಂಡತಿಯೊಡನೆ ಋಷಿಯು ಬರಲು, ತನ್ನ ಮಗಳ ಪಕ್ಕದಲ್ಲಿ ಹಿಂದೆ ತಾನು ಮದುವೆಮಾಡಿದ ರೀತಿಯಲ್ಲಿಲ್ಲದ ಮತ್ತೊಬ್ಬ ಸೌರ‍್ಯನ ತೇಜಸ್ಸಿನ ಗಂಡಸನ್ನು ನೋಡಿದನು.

೮. ಮಗಳು ಬಂದು ತಂದೆಗೆ ನಮಸ್ಕರಿಸಲು ಪ್ರೀತಿಯಿಲ್ಲದವನಂತೆ ಆಶೀರ್ವದಿಸದೇ ಇಂತೆಂದನು.

ಚಿಕೀರ್ಷಿತಂ ತೇ ಕಿಮಿದಂ ಪತಿಸ್ತ್ವಯಾ
ಪ್ರಲಂಭಿತೋ ಲೋಕನಮಸ್ಕೃತೋ ಮುನಿಃ ।
ಯಾ ತ್ವಂ ಜರಾಗ್ರಸ್ತಮಸಂಮ್ಮತಂ ಪತಿಂ
ವಿಹಾಯ ಜಾರಂ ಭಜಸೇಽಮುಮಧ್ಯಗಂ ॥ ೯ ॥

ಕಥಂ ಮತಿಸ್ತೇಽವಗತಾಽನ್ಯಥಾ ಸತಾಂ
ಕುಲಪ್ರಸೂತೇಃ ಕುಲದೂಷಣಂ ತ್ವಿದಂ ।
ಬಿಭರ್ಷಿ ಜಾರಂ ಯದಪತ್ರಸಾ ಕುಲಂ
ಪಿತುಸ್ಸ್ವಭರ್ತುಶ್ಚ ನಯಸ್ಯಧಸ್ತಮಾಂ ॥ ೧೦ ॥

ಏವಂ ಬ್ರುವಾಣಂ ಪಿತರಂ ಸ್ಮಯಮಾನಾ ಶುಚಿಸ್ಮಿತಾ ।
ಉವಾಚ ತಾತ ಜಾಮಾತಾ ತವೈಷ ಭೃಗುನಂದನಃ ॥ ೧೧ ॥

ಶಶಂಸ ಪಿತ್ರೇ ತತ್ಸರ್ವಂ ವಯೋರೂಪಾಭಿಲಂಭನಂ ।
ವಿಸ್ಮಿತಃ ಪರಮಪ್ರೀತಃ ತನಯಾಂ ಪರಿಷಸ್ವಜೇ ॥ ೧೨ ॥

---

೯. ಇದೇನು ನೀನು ಮಾಡಿದುದು? ಲೋಕವೇ ನಮಸ್ಕರಿಸುವ ಆ ಋಷಿಯನ್ನು ಮುದುಕನೆಂದೂ, ಇಷ್ಟದಲ್ಲವನೆಂದೂ, ವಂಚಿಸಿ ಈ ನಿನ್ನ ಪಕ್ಕದಲ್ಲಿರುವ ಈ ಜಾರನನ್ನು ಅನುಸರಿಸುತ್ತಿರುವೆ.

೧೦. ನಿನಗೆ ಬುದ್ಧಿ ಹೇಗೆತಾನೇ ಹುಟ್ಟಿತು? ಸದ್ವಂಶದವರಿಗೆ ಇದು ಕಳಂಕವಲ್ಲವೇ? ನಾಚಿಕೆಯಿಲ್ಲದೇ ಈ ಜಾರನನ್ನು ಕಟ್ಟಿಕೊಂಡು ನಿನ್ನ ಗಂಡನ ಮತ್ತು ತಂದೆಯ ಕುಲವನ್ನು ನರಕಕ್ಕೆ ತಳ್ಳಿದೆಯಲ್ಲಾ?

೧೧. ಹೀಗೆ ಹೇಳಿದ ತಂದೆಯನ್ನು ಕುರಿತು ಆಕೆಯು ನಗುತ್ತಾ ತಂದೆಯೇ! ಈತನೇ ನಿನ್ನ ಅಳಿಯನಾದ ಭೃಗುನಂದನನಾದ ಚ್ಯವನನು ಎಂದಳು.

೧೨. ವಯಸ್ಸು, ರೂಪು ಇವುಗಳು ಬಂದ ವಿಷಯವನ್ನೆಲ್ಲಾ ತಿಳಿಸಿದಳು. ಆ ಶರ್ಯಾತಿಯು ಸಂತೋಷಗೊಂಡು ಮಗಳನ್ನು ಮುದ್ದಿಸಿದನು.

ಸೋಮೇನಾಯಾಜಯದ್ವೀರಂ ಗ್ರಹಂ ಸೋಮಸ್ಯ ಜಾಗ್ರಹೀತ್ ।
ಅಸೋಮಪೋರಪ್ಯಶ್ವಿನೋಶ್ಚ್ಯವನಃ ಸ್ವೇನ ತೇಜಸಾ ॥ ೧೩ ॥

ಗ್ರಹಂ ತು ಗ್ರಾಹಯಾಮಾಸ ತಪೋಬಲಸಮನ್ವಿತಃ ।
ವಜ್ರಂ ಗೃಹೀತ್ವಾ ಶಕ್ರಸ್ತು ಹನ್ತುಂ ಬ್ರಾಹ್ಮಣಸತ್ತಮಂ ॥ ೧೪ ॥

ಅಪಂಕ್ತಿಪಾವನೌ ದೇವೌ ಕುರ್ವಾಣಂ ಪಂಕ್ತಿಗೋಚರೌ ।
ಶಕ್ರಂ ವಜ್ರಧರಂ ದೃಷ್ಟ್ವಾ ಮುನಿಃ ಸ್ವಹನನೋದ್ಯತಂ ॥ ೧೫ ॥

ಹುಂಕಾರಮಕರೋದ್ಧೀಮಾ ಸ್ತಂಭಯಾಮಾಸ ತದ್ಭುಜಂ ।
ಇಂದ್ರಸ್ತಬ್ಧಭುಜಸ್ತತ್ರ ದೃಷ್ಟಃ ಸರ್ವೈಶ್ಚ ಮಾನವೈಃ ॥ ೧೬ ॥

ಕೋಪೇನ ಶ್ವಸಮಾನೋಽಹಿರ್ಯಥಾ ಮಂತ್ರನಿಯಂತ್ರಿತಃ ।
ತುಷ್ಟಾವ ಸ ಮುನಿಂ ಶಕ್ರಃ ಸ್ತಬ್ಧಬಾಹುಸ್ತಪೋನಿಧಿಂ ॥ ೧೭ ॥

---

೧೩. ಆ ರಾಜನಿಗೆ ಸೋಮಯಾಗವನ್ನು ಮಾಡಿಸಿದನು. ಸೋಮಪಾನಕ್ಕೆ ಅರ್ಹರಲ್ಲದ ಅಶ್ವಿನೀದೇವತೆಗಳಿಗೂ ಕೂಡ ಸೋಮದ ಪಾಲನ್ನು ತನ್ನ ತಪಶ್ಶಕ್ತಿಯಿಂದ ಕೊಡಲು ಮೊದಲು ಮಾಡಿದನು (ಕೊಡಲುದ್ಯುಕ್ತನಾದನು).

೧೪. ತಪಸ್ಸಿನ ಬಲದಿಂದ ಆ ಅಶ್ವಿನೀದೇವತೆಗಳಿಗೆ ಸೋಮಭಾಗವನ್ನು ಹಿಡಿಯಲು, ಇಂದ್ರನು ವಜ್ರಾಯುಧವನ್ನು ತೆಗೆದುಕೊಂಡು ಹೊಡೆಯಲು ಬಂದನು.

೧೫-೧೬. ಪಂಕ್ತಿಗೆ ಬರಲು ಯೋಗ್ಯರಲ್ಲದ ಅಶ್ವಿನೀದೇವತೆಗಳನ್ನು ಪಂಕ್ತಿಯಲ್ಲಿ ಕಾಣುತ್ತಾ, ಹಾಗೆ ಮಾಡಿದ ಆ ಋಷಿಯನ್ನು ಕೊಲ್ಲುತ್ತೇನೆಂದು ವಜ್ರವನ್ನೆತ್ತಿಕೊಂಡುಬರಲು, ಚ್ಯವನನ್ನು ಕೊಲ್ಲಲು ಬರುತ್ತಿರುವ ಇಂದ್ರನನ್ನು ನೋಡಿ ಹುಂಕಾರ ಮಾಡಲು ಚೇಷ್ಟಾರಹಿತನಾಗಿ ನಿಂತನು. ಇಂದ್ರನ ಭುಜವು ಅಲ್ಲಾಡಿಸಲಾಗದಿದ್ದುದನ್ನು ಅಲ್ಲಿರುವವರೆಲ್ಲರೂ ಕಂಡರು.

೧೭. ಆಗ ದೇವೇಂದ್ರನು ಮಂತ್ರದಿಂದ ಕಟ್ಟಲ್ಪಟ್ಟ ಸರ್ಪದಂತೆ ಕೋಪದಿಂದ ನಿಟ್ಟುಸಿರಬಿಡುತ್ತಾ, ಕೈ ಸ್ವಾಧೀನವಿಲ್ಲದಿರಲು ಆ ಚ್ಯವನನನ್ನು ಸ್ತುತಿಸಿದನು.

ಅಶ್ವಿಭ್ಯಾಂ ಭಾಗಮಾದಾನಂ ಕುರ್ವಂತಂ ನಿರ್ಭಯಾನ್ತರಂ ।
ಕಥಯಾಮಾಸ ಭೋ ಸ್ವಾಮಿನ್ ದೀಯತಾಮಶ್ವಿನೋರ್ಬಲಿಃ ॥ ೧೮ ॥

ಮಯಾ ನ ವಾರ್ಯತೇ ತಾತ ಕ್ಷಮಸ್ವಾಘಂ ಮಯಾ ಕೃತಂ ।
ಇತ್ಯುಕ್ತಃ ಸ ಮುನಿಃ ಕೋಪಂ ಜಹೌ ತೂರ್ಣಂ ಕೃಪಾನಿಧಿಃ ॥ ೧೯ ॥

ಇಂದ್ರೋ ಮುಕ್ತಭುಜಸ್ತ್ವಾಸೀತ್ತದಾಸೀಂ ಪುರುಷರ್ಷಭ ।
ಏತದ್ವೀಕ್ಷ್ಯ ಜನಾಸ್ಸರ್ವೇ ಕೌತುಕಾವಿಷ್ಟಮಾನಸಾಃ ॥ ೨೦ ॥

ಶಶಂಸುರ್ಬ್ರಾಹ್ಮಣಾನಾಂ ತು ಬಲಂ ದೇವಾದಿದುರ್ಲಭಂ ।
ತತೋ ರಾಜಾ ಬಹುಧನಂ ಬ್ರಾಹ್ಮಣೇಭ್ಯೋ ದದನ್ಮಹಾನ್ ॥ ೨೧ ॥

ಚಕ್ರೇ ಚಾವಭೃತಸ್ನಾನಂ ಯಾಗಾಂತೇ ಶತ್ರುತಾಪನಃ ।
ತ್ವಯಾ ಪೃಷ್ಟಂ ಯದಾಚಕ್ಷ್ವ ಚ್ಯವನಸ್ಯ ಮಹೋದಯಂ ॥ ೨೨ ॥

ಸ ಮಯಾ ಕಥಿತಸ್ಸರ್ವಸ್ತಪೋಯೋಗಸಮನ್ವಿತಃ ।
ನಮಸ್ಕೃತ್ವಾ ತಪೋಮೂರ್ತಿಮೇನಂ ಪ್ರಾಪ್ಯ ಜಯಾಶಿಷಃ ॥ ೨೩ ॥

---

೧೮-೧೯. ಹೆದರಿಕೆಯೆಲ್ಲವನ್ನೂ ಬಿಟ್ಟು ಅಶ್ವಿನೀದೇವತೆಗಳಿಗೆ ಭಾಗವನ್ನು ಕೊಡುತ್ತಿರುವ ಅವನನ್ನು ಕುರಿತು ಸ್ವಾಮಿ, ಅಶ್ವಿನೀದೇವತೆಗಳಿಗೆ ಭಾಗವನ್ನು ಕೊಡಿ. ಬೇಡವೆನ್ನುವುದಿಲ್ಲ. ನನ್ನ ಅಪರಾಧವನ್ನು ಕ್ಷಮಿಸಿ ಎಂದನು. ಹೀಗೆ ಹೇಳಲು ಆ ಋಷಿಯು ಕೋಪವನ್ನು ಬಿಟ್ಟುಬಿಟ್ಟನು.

೨೦. ಆಗ ಇಂದ್ರನ ಭುಜಗಳು ಬಿಡಲ್ಪಟ್ಟುವು. ಇದನ್ನು ನೋಡಿದ ಜನರೆಲ್ಲರೂ ಆಶ್ಚರ್ಯಪಟ್ಟು, ದೇವತೆಗಳಿಗೂ ಇಲ್ಲದ ಬ್ರಾಹ್ಮಣರ ಬಲವನ್ನು ಹೊಗಳಿದರು.

೨೧. ಆಮೇಲೆ ಆ ರಾಜನು ಬ್ರಾಹ್ಮಣರಿಗೆ ಧನವನ್ನು ಬಹುವಾಗಿ ದಾನ ಮಾಡಿ ಕೊನೆಯಲ್ಲಿ ಅವಭೃತಸ್ನಾನವನ್ನು ಮಾಡಿದನು.

೨೨. ನೀನು ಈತನ ವಿಷಯವನ್ನು ಕೇಳಿದೆ. ಆದ್ದರಿಂದ ನಾನು ಅವನ ತಪಸ್ಸಿನ ವಿಷಯವೇ ಮೊದಲಾದುವನ್ನು ಹೇಳಿದೆನು.

೨೩-೨೪. ಆದ್ದರಿಂದ ಈ ತಪಸ್ವಿಯಾದ ಚ್ಯವನನಿಗೆ ನಮಸ್ಕರಿಸಿ ಅವನಿಂದ

ಪ್ರೇಷಯ ತ್ವಂ ಸಪತ್ನೀಕಂ ರಾಮಯಜ್ಞೇ ಮನೋರಮೇ ॥ ೨೪ ॥

॥ ಶೇಷ ಉವಾಚ ॥

ಏವಂ ತು ಕುರ್ವತೋ ವಾರ್ತಾಂ ಹಯಃ ಪ್ರಾಪಾಶ್ರಮಂ ಪ್ರತಿ ।
ವಿದಧದ್ವಾಯುವೇಗೇನ ಪೃಥ್ವೀಂ ಖುರವಿಲಕ್ಷಿತಾಂ ॥ ೨೫ ॥

ದೂರ್ವಾಂಕುರಾನ್ ಮುಖಾಗ್ರೇಣ ಚರಂಸ್ತತ್ರಮಹಾಶ್ರಮೇ ।
ಮುನಯೋ ಯಾವದಾದಾಯ ದರ್ಭಾನ್ ಸ್ನಾತುಂ ಗತಾ ನದೀಂ ॥ ೨೬ ॥

ಶತ್ರುಘ್ನಃ ಶತ್ರುಸೇನಾಯಾಸ್ತ್ರಾಪನಃ ಶೂರಸಂಮತಃ ।
ತಾವತ್ಪ್ರಾಪ ಮುನೇರ್ವಾಸಂ ಚ್ಯವನಸ್ಯಾಧಿಶೋಭಿತಂ ॥ ೨೭ ॥

ಗತ್ವಾ ತದಾಶ್ರಮೇ ವೀರೋ ದದರ್ಶ ಚ್ಯವನಂ ಮುನಿಂ ।
ಸುಕನ್ಯಾಯಾಃ ಸಮೀಪಸ್ಥಂ ತಪೋಮೂರ್ತಿಮಿವ ಸ್ಥಿತಂ ॥ ೨೮ ॥

---

ಆಶೀರ್ವಾದವನ್ನು ಹೊಂದಿ ರಾಮನ ಯಾಗಕ್ಕೆ ಅವನನ್ನೂ ಅವನ ಹೆಂಡತಿಯನ್ನೂ ಕಳುಹಿಸು.

೨೫. ಶೇಷನು ಹೇಳಿದನು:—ಹೀಗೆ ಮಾತಾಡುತ್ತಿರುವಾಗ ಆ ಯಾಗದ ಕುದುರೆಯು ವಾಯುವೇಗದಿಂದ ಬಂದು ಆಶ್ರಮಕ್ಕೆ ಹೋಗಿತ್ತು. ಅದನ್ನು ಅದರ ಹೆಜ್ಜೆಯಿಂದ ಗುರ್ತಿಸಿದರು.

೨೬. ಮುನಿಗಳು ದರ್ಭೆಯನ್ನು ತೆಗೆದುಕೊಂಡು ಸ್ನಾನಮಾಡಲು ಹೋದಾಗ ಆ ಕುದುರೆಯು ಆ ಆಶ್ರಮದಲ್ಲಿ ಹುಲ್ಲು ಮೇಯುತ್ತಿದ್ದುದನ್ನು ನೋಡಿದರು.

೨೭. ಶೂರನಾದ ಶತ್ರುಘ್ನನು ಅಷ್ಟರೊಳಗೆ ಚ್ಯವನನ ಆಶ್ರಮಕ್ಕೆ ಬಂದನು.

೨೮. ಆ ಆಶ್ರಮಕ್ಕೆ ಹೋಗಿ ಶತ್ರುಘ್ನನು ಸುಕನ್ಯೆಯ ಸಮೀಪದಲ್ಲಿ ಕುಳಿತಿರುವ ತಪೋಮೂರ್ತಿಯಾದ ಚ್ಯವನನನ್ನು ನೋಡಿದನು.

ನವಂದೇ ಚರಣೌ ತಸ್ಯ ಸ್ವಾಭಿಧಾಂ ಸಮುದಾಹರನ್ ।
ಶತ್ರುಘ್ನೋಽಹಂ ರಘುಪತೇರ್ಭ್ರಾತಾ ವಾಹಸ್ಯ ಪಾಲಕಃ ॥ ೨೯ ॥

ನಮಸ್ಕರೋಮಿ ಯುಷ್ಮಭ್ಯಂ ಮಹಾಪಾಪೋಪಶಾಂತಯೇ ।
ಇತಿ ವಾಕ್ಯಂ ಸಮಾಕರ್ಣ್ಯ ಜಗಾದ ಮುನಿಸತ್ತಮಃ ॥ ೩೦ ॥

ಶತ್ರುಘ್ನ ತವ ಕಲ್ಯಾಣಂ ಭೂಯಾನ್ನರವರರ್ಷಭ ।
ಯಜ್ಞಂ ಪಾಲಯಮಾನಸ್ಯ ಕೀರ್ತಿಸ್ತೇ ವಿಪುಲಾ ಭವೇತ್ ॥ ೩೧ ॥

ಚಿತ್ರಂ ಪಶ್ಯತ ಭೋ ವಿಪ್ರಾ ರಾಮೋಽಪಿ ಮಖಕಾರಕಃ ।
ಯನ್ನಾಮಸ್ಮರಣಾದೀನಿ ಕುರ್ವಂತಿ ಪಾಪನಾಶನಂ ॥ ೩೨ ॥

ಮಹಾಪಾತಕಸಂಯುಕ್ತಾಃ ಪರದಾರರತಾ ನರಾಃ ।
ಯನ್ನಾಮಸ್ಮರಣೇ ಯುಕ್ತಾ ಮುದಾ ಯಾಂತಿ ಪರಾಂ ಗತಿಂ ॥ ೩೩ ॥

---

೨೯-೩೦. ಆ ಋಷಿಯ ಬಳಿಗೆ ಹೋಗಿ ನಾನು ಶತ್ರುಘ್ನನು. ಯಾಗದ ಕುದುರೆಯನ್ನು ಕಾಪಾಡುತ್ತಾ ಬಂದಿದ್ದೇನೆ. ಶ್ರೀರಾಮನ ಸಹೋದರನು. ಪಾಪ ಶಾಂತಿಗೋಸ್ಕರ ನಿಮ್ಮನ್ನು ನಮಸ್ಕರಿಸುತ್ತೇನೆ. ಎಂದು ಅವರ ಚರಣಗಳನ್ನು ವಂದಿಸಿದನು. ಈ ಮಾತನ್ನು ಕೇಳಿ ಋಷಿಯು ಇಂತೆಂದನು.

೩೧. ಎಲೈ ಶತ್ರುಘ್ನನೇ, ನಿನಗೆ ಮಂಗಳವಾಗಲಿ. ಯಜ್ಞದ ಕುದುರೆಯ ರಕ್ಷಣೆಯಿಂದ ನಿನಗೆ ಬಹಳವಾದ ಕೀರ್ತಿಯು ಬರಲಿ.

೩೨. ಎಲೈ ಋಷಿಗಳೇ! ಯಾವ ರಾಮನ ಸ್ಮರಣೆಯೇ ಪಾಪಗಳನ್ನು ನಾಶಮಾಡುತ್ತದೋ ಆ ರಾಮನು ಯಾಗಮಾಡುತ್ತಾನಂತೆ. ಈ ಆಶ್ಚರ್ಯವನ್ನು ನೋಡಿರಿ.

೩೩. ಪರಹೆಂಡಿರಲ್ಲಿ ಆಸಕ್ತರಾದ ಪಾಪಿಗಳಾಗಲೀ, ಸ್ವರ್ಣಸ್ತೇಯಾದಿ ಮಹಾ ಪಾತಕವನ್ನು ಮಾಡಿದವರೇ ಆಗಲಿ, ಆ ರಾಮಸ್ಮರಣೆಯನ್ನು ಮಾಡಿದರೆ ಸಂತೋಷದಿಂದ ಉತ್ತಮಗತಿಯನ್ನು ಹೊಂದುತ್ತಾರೆ.

ಪಾದಪದ್ಮಸಮುತ್ಥೇನ ರೇಣುನಾ ಗ್ರಾವಮೂರ್ತಿಭೃತ್ ।
ತತ್ಕ್ಷಣಾದ್ಗೌತಮಾರ್ಧಾಂಗೀ ಜಾತಾ ಮೋಹನರೂಪಧೃತ್ ॥ ೩೪ ॥

ಮಾಮಕೀ ಯಸ್ಯ ರೂಪಸ್ಯ ಧ್ಯಾನೇನ ಪ್ರೇಮನಿರ್ಭರಾ ।
ಸರ್ವಪಾತಕರಾಶಿಂ ಸಾ ದಗ್ಧ್ವಾ ಪ್ರಾಪ್ತಾ ಸ್ವರೂಪತಾಂ ॥ ೩೫ ॥

ದೈತ್ಯಾ ಯಸ್ಯ ಮನೋಹಾರಿ ರೂಪಂ ಪ್ರಧನಮಂಡಲೇ ।
ಪಶ್ಯಂತಃ ಪ್ರಾಪುರೇತಸ್ಯರೂಪಂ ವಿಕೃತಿವರ್ಜಿತಂ ॥ ೩೬ ॥

ಯೋಗಿನೋ ಧ್ಯಾನನಿಷ್ಠಾಸು ಯಂ ಧ್ಯಾತ್ವಾ ಯೋಗಮಾಸ್ಥಿತಾಃ ।
ಸಂಸಾರಭಯನಿರ್ಮುಕ್ತಾಃ ಪ್ರಯಾತಾಃ ಪರಮಂ ಪದಂ ॥ ೩೭ ॥

ಧನ್ಯೋಽಹಮದ್ಯ ರಾಮಸ್ಯ ಮುಖಂ ದ್ರಕ್ಷ್ಯಾಮಿ ಶೋಭನಂ ।
ಪಯೋದಜಲನೇತ್ರಾಂತಂ ಸುನಾಸಂ ಸುಭ್ರು ಸನ್ನತಂ ॥ ೩೮ ॥

ಸಾ ಜಿಹ್ವಾ ರಘುನಾಥಸ್ಯ ನಾಮಕೀರ್ತನಮಾದರಾತ್ ।
ಕರೋತಿ ವಿಪರೀತಾ ಯಾ ಫಣಿನೋ ರಸನಾಸಮಾ ॥ ೩೯ ॥

---

೩೪. ಆ ರಾಮನ ಕಾಲಿನ ಧೂಳು ತಾಕಿದುದರಿಂದಲೇ, ಆ ಗಳಿಗೆಯಲ್ಲಿಯೇ ಕಲ್ಲಾಗಿದ್ದ ಗೌತಮನ ಹೆಂಡತಿಯು ಸುಂದರಿಯಾದ ಸ್ತ್ರೀಯಾದಳು.

೩೫. ನನ್ನ ದೇಹವೂ ಕೂಡ ರಾಮನಾಮಸ್ಮರಣೆಯಿಂದ ಪಾಪರಾಶಿಗಳನ್ನು ಸುಟ್ಟು ಯೋಗ್ಯವಾದ ರೂಪವನ್ನು ಹೊಂದಿತು.

೩೬. ಆ ದೈತ್ಯರು ಯುದ್ಧರಂಗದಲ್ಲಿ ಆ ಸ್ವಾಮಿಯ ರೂಪವನ್ನು ನೋಡಿ ಮೋಕ್ಷಹೊಂದಿದರು.

೩೭. ಯೋಗಿಗಳು ಧ್ಯಾನದಿಂದ ಯಾವನನ್ನು ಧ್ಯಾನಿಸಿ ಸಂಸಾರದಿಂದ ಮುಕ್ತರಾಗಿ ಪರಮಪದವನ್ನು ಹೊಂದುತ್ತಾರೆಯೋ ಆತನೇ ಈ ರಾಮನು.

೩೮. ಶುಭ್ರವಾದ ಕಡೆನೋಟವುಳ್ಳ, ಒಳ್ಳೆಯ ಮೂಗುಳ್ಳ, ಬಗ್ಗಿರುವ ಹುಬ್ಬುಳ್ಳ ರಾಮನ ಮುಖವನ್ನು ನೋಡುತ್ತೇನಾದ್ದರಿಂದ ಇಂದು ಧನ್ಯನು.

೩೯. ಆ ರಾಮಧ್ಯಾನವನ್ನು ಮಾಡುವ ನಾಲಿಗೆಯೇ ನಾಲಿಗೆಯು. ಅವನಿಗಿಂತ ಬೇರೆಯವರ ಸ್ತೋತ್ರಮಾಡುವ ನಾಲಿಗೆಯು ವಿಷದ ನಾಲಿಗೆಯು.

**ಅದ್ಯ ಪ್ರಾಪ್ತಂ ತಪಃ ಪುಣ್ಯಮದ್ಯ ಪೂರ್ಣಾ ಮನೋರಥಾಃ ।**
**ಯದ್ರಕ್ಷ್ಯೇ ರಾಮಚಂದ್ರಸ್ಯ ಮುಖಂ ಬ್ರಹ್ಮಾದಿದುರ್ಲಭಂ ॥ ೪೦ ॥**

**ತತ್ಪಾದರೇಣುನಾ ಸ್ವಾಂಗಂ ಪವಿತ್ರಂ ವಿದಧಾಮ್ಯಹಂ ।**
**ವಿಚಿತ್ರತರವಾರ್ತಾಭಿಃ ಪಾವಯೇ ರಸನಾಂ ಸ್ವಕಾಂ ॥ ೪೧ ॥**

**ಇತ್ಯಾದಿ ರಾಮಚರಣಸ್ಮರಣಪ್ರಬುದ್ಧ-**
**ಪ್ರೇಮವ್ರಜಪ್ರಸೃತಗದ್ಗದವಾಗುದಶ್ರು ।**
**ಶ್ರೀರಾಮಚಂದ್ರ ರಘುಪುಂಗವ ಧರ್ಮಮೂರ್ತೇ**
**ಭಕ್ತಾನುಕಂಪಕ ಸಮುದ್ಧರ ಸಂಸೃತೇರ್ಮಾಂ ॥ ೪೨ ॥**

**ಜಲ್ಪನ್ನಶ್ರುಕಲಾಪೂರ್ಣೋ ಮುನೀನಾಂ ಪುರತಸ್ತದಾ ।**
**ನಾಜ್ಞಾಸೀತ್ತತ್ರ ಪಾರಕ್ಯಂ ನಿಜಧ್ಯಾನೇನ ಸಂಸ್ಥಿತಃ ॥ ೪೩ ॥**

**ಶತ್ರುಘ್ನಸ್ತಂ ಮುನಿಂ ಪ್ರಾಹ ಸ್ವಾಮಿನ್ನೋ ಮಖಸತ್ತಮಃ ।**
**ಕ್ರಿಯತಾಂ ಭವತಾಂ ಪಾದರಜಸಾ ಸುಪವಿತ್ರಿತಃ ॥ ೪೪ ॥**

---

೪೦. ಬ್ರಹ್ಮಾದಿಗಳಿಗೂ ದುರ್ಲಭವಾದ ರಾಮಚಂದ್ರನ ಮುಖವನ್ನು ನೋಡುವುದರಿಂದ ಈಗ ತಪಸ್ಸಿನ ಪುಣ್ಯವು ಲಭಿಸಿತು. ಮನೋರಥಗಳೆಲ್ಲಾ ಪೂರ್ಣವಾದುವು.

೪೧. ಬ್ರಹ್ಮಾದಿಗಳಿಗೂ ದುರ್ಲಭವಾದ ರಾಮಚಂದ್ರನ ಪಾದಧೂಳಿನಿಂದ ನನ್ನ ದೇಹವನ್ನು ಪವಿತ್ರವಾದುದನ್ನಾಗಿ ಮಾಡಿಕೊಳ್ಳುತ್ತೇನೆ. ಅವನೊಡನೆ ನಾನಾ ಬಗೆಯ ಮಾತುಗಳನ್ನಾಡಿ ನಾಲಿಗೆಯನ್ನು ಪವಿತ್ರವನ್ನಾಗಿ ಮಾಡಿಕೊಳ್ಳುತ್ತೇನೆ.

೪೨. ಇವೇ ಮೊದಲಾದ ರಾಮಸ್ಮರಣೆಯಿಂದ ಜ್ಞಾಪಕಬಂದ ಪ್ರೇಮದಿಂದ ಗದ್ಗದ ಮಾತೂ, ಕಣ್ಣೀರೂ ಬಂದು, ರಾಮಚಂದ್ರ, ರಘುಪುಂಗವ, ಧರ್ಮಮೂರ್ತೇ, ಭಕ್ತಾನುಕಂಪಿಯೇ ನನ್ನನ್ನು ಸಂಸಾರದಿಂದ ತಪ್ಪಿಸು ಎಂದನು.

೪೩. ಮುನಿಗಳ ಎದುರಿಗೆ ಇಂತು ಹೇಳುತ್ತಾ ಆಗ ಎಲ್ಲವನ್ನೂ ಅಭೇದ ಭಾವದಿಂದ ಕಂಡನು.

೪೪. ಆಗ ಶತ್ರುಘ್ನನು ಎಲೈ ಸ್ವಾಮಿಯೇ, ನಮ್ಮ ಯಾಗವನ್ನು ತಮ್ಮ ಪಾದದ ಧೂಳಿನಿಂದ ಪವಿತ್ರವನ್ನಾಗಿ ಮಾಡಿರಿ ಎಂದನು.

ಮಹದ್ಭಾಗ್ಯಂ ರಘುಪತೇರ್ಯದ್ಯುಷ್ಮನ್ಮಾನಸಾಂತರೇ ।
ತಿಷ್ಠತ್ಯಸೌ ಮಹಾಬಾಹುಃ ಸರ್ವಲೋಕೈಕಪೂಜಿತಃ ॥ ೪೫ ॥

ಇತ್ಯುಕ್ತಃ ಸಪರೀವಾರಃ ಸರ್ವಾಗ್ನಿಪರಿಸಂವೃತಃ ।
ಜಗಾಮ ಚ್ಯವನಸ್ತತ್ರ ಪ್ರಮೋದಪ್ಲವಸಂಪ್ಲುತಃ ॥ ೪೬ ॥

ಹನೂಮಾಂಸ್ತಂ ಪದಾ ಯಾಂತಂ ರಾಮಭಕ್ತಮವೇಕ್ಷ್ಯ ಚ ।
ಶತ್ರುಘ್ನಂ ನಿಜಗಾದಾಸೌ ವಚೋ ವಿನಯಸಂಯುತಃ ॥ ೪೭ ॥

ಸ್ವಾಮಿನ್ಕಥಯಸಿ ತ್ವಂ ಚೇನ್ಮಹಾಪುರುಷಸುಂದರಂ ।
ರಾಮಭಕ್ತಂ ಮುನಿವರಂ ನಯಾಮಿ ಸ್ವಪುರೀಮಹಂ ॥ ೪೮ ॥

ಇತಿ ಶ್ರುತ್ವಾ ಮಹದ್ವಾಕ್ಯಂ ಕಪಿವೀರಸ್ಯ ಶತ್ರುಹಾ ।
ಆದಿದೇಶ ಹನೂಮನ್ತಂ ಗಚ್ಛ ಪ್ರಾಪಯ ತಂ ಮುನಿಂ ॥ ೪೯ ॥

ಹನೂಮಾಂಸ್ತಂ ಮುನಿಂ ಸ್ವೀಯೇ ಪೃಷ್ಠ ಆರೋಪ್ಯ ವೇಗವಾನ್ ।
ಸಕುಟುಂಬಂ ನಿನಾಯಾಶು ವಾಯುಃ ಖ ಇವ ಸರ್ವಗಃ ॥ ೫೦ ॥

---

೪೫. ನಿಮ್ಮಗಳ ಮನಸ್ಸಿನಲ್ಲಿ ಆ ಮಹಾಬಾಹುವೂ, ಲೋಕಪೂಜಿತನೂ, ಆದ ಆ ರಾಮಚಂದ್ರನು ಇರುವುದೇ ಆ ರಾಮಚಂದ್ರನ ಮಹಾಭಾಗ್ಯವು.

೪೬. ಹೀಗೆ ಹೇಳಲ್ಪಟ್ಟು ಪರಿವಾರದೊಡನೆಯೂ, ಅಗ್ನಿಗಳೊಡನೆಯೂ, ಸಂತೋಷದ ಪರಂಪರೆಗಳನ್ನು ಅನುಭವಿಸುತ್ತಾ ರಾಮನಲ್ಲಿಗೆ ಹೊರಟನು.

೪೭. ರಾಮಭಕ್ತನಾದ ಆ ಋಷಿಯು ಕಾಲುನಡೆಗೆಯಲ್ಲಿ ಹೋಗುತ್ತಿರುವುದನ್ನು ಕಂಡು ಹನುಮಂತನು ಶತ್ರುಘ್ನನಿಗೆ ವಿನಯದಿಂದ ಇಂದೆಂದನು.

೪೮. ಸ್ವಾಮಿ, ಈ ಸುಂದರನಾದ ಋಷಿಯನ್ನು ನಿನ್ನ ಅಪ್ಪಣೆಯಾದರೆ ಕರೆದುಕೊಂಡು ಹೋಗಿ ಅಯೋಧ್ಯೆಯಲ್ಲಿ ಬಿಡುತ್ತೇನೆ ಎಂದನು.

೪೯. ಆ ವೀರನು ಹನುಮಂತನ ಈ ಉತ್ತಮ ಸಲಹೆಯನ್ನು ಕೇಳಿ ಹೋಗು ಕರೆದುಕೊಂಡು ಹೋಗಿ ಬಿಡೆಂದನು.

೫೦. ಹನುಮಂತನು ತನ್ನ ಬೆನ್ನಿನ ಮೇಲೆ ಅವನನ್ನು ಕುಟುಂಬದೊಡನೆ ಕೂರಿಸಿಕೊಂಡು ಆಕಾಶದಲ್ಲಿ ವಾಯುವಿನಂತೆ ಕರೆದುಕೊಂಡು ಹೋದನು.

**ಆಗತಂ ತಂ ಮುನಿಂ ದೃಷ್ಟ್ವಾ ರಾಮೋ ಮತಿಮತಾಂ ವರಃ ।**
**ಅರ್ಘ್ಯಪಾದ್ಯಾದಿಕಂ ಚಕ್ರೇ ಪ್ರೀತಃ ಪ್ರಣಯವಿಹ್ವಲಃ　　॥ ೫೧ ॥**

**ಧನ್ಯೋಽಸ್ಮಿ ಮುನಿವರ್ಯಸ್ಯ ದರ್ಶನೇನ ತವಾಧುನಾ ।**
**ಪವಿತ್ರಿತೋ ಮಖೋ ಮಹ್ಯಂ ಸರ್ವಸಂಭಾರಸಂವೃತಃ　　॥ ೫೨ ॥**

**ಇತಿ ವಾಕ್ಯಂ ಸಮಾಕರ್ಣ್ಯ ಚ್ಯವನೋ ಮುನಿಸತ್ತಮಃ ।**
**ಉವಾಚ ಪ್ರೇಮನಿರ್ಭಿನ್ನಪುಲಕಾಂಗೋಽತಿನಿರ್ವೃತಃ　　॥ ೫೩ ॥**

**ಸ್ವಾಮಿನ್ ಬ್ರಹ್ಮಣ್ಯದೇವಸ್ಯ ತವ ಬಾಡಬಪೂಜನಂ ।**
**ಯುಕ್ತಮೇವ ಮಹಾರಾಜ ಧರ್ಮಮಾರ್ಗಪ್ರರಕ್ಷಿತುಃ　　॥ ೫೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಚ್ಯವನಾಶ್ರಮೇ ಹಯಾಗಮನಂ ನಾಮ ಷೋಡಶೋಽಧ್ಯಾಯಃ**

---

೫೧. ರಾಮನು ಆ ಋಷಿಯು ಬಂದುದನ್ನು ನೋಡಿ ಸಂತೋಷಗೊಂಡು ಅರ್ಘ್ಯಪಾದ್ಯಾದಿಗಳನ್ನು ಕೊಟ್ಟನು.

೫೨. ಮುನಿಶ್ರೇಷ್ಠನಾದ ನಿನ್ನ ದರ್ಶನದಿಂದ ಧನ್ಯನಾದೆನು. ಸಮಸ್ತ ಪದಾರ್ಥಗಳಿಂದ ಕೂಡಿದ ನನ್ನ ಯಾಗವು ಪವಿತ್ರವಾಯಿತು.

೫೩. ಈ ಮಾತನ್ನು ಕೇಳಿ ಋಷಿಶ್ರೇಷ್ಠನಾದ ಚ್ಯವನನು ಸಂತೋಷಪಟ್ಟು ರೋಮಾಂಚವುಳ್ಳವನಾಗಿ ಹೀಗೆಂದನು.

೫೪. ಸ್ವಾಮಿಯೇ, ಬ್ರಹ್ಮನನ್ನು ತಿಳಿದವರಿಗೂ, ದೇವನಾದ ಧರ್ಮಮಾರ್ಗವನ್ನು ಕಾಪಾಡುವ ನಿನಗೆ ಅಶ್ವಮೇಧಯಾಗವು ಯುಕ್ತವಾದುದು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತದಶೋಽಧ್ಯಾಯಃ

॥ ಶೇಷ ಉವಾಚ ॥

ಶತ್ರುಘ್ನಶ್ಚ್ಯವನಸ್ಯಾಥ ದೃಷ್ಟ್ವಾಽಚಿಂತ್ಯಂ ತಪೋಬಲಂ ।
ಪ್ರಶಶಂಸ ತಪೋ ಬ್ರಾಹ್ಮಂ ಸರ್ವಲೋಕೈಕವಂದಿತಂ ॥ ೧ ॥

ಅಹೋ ಪಶ್ಯತ ಯೋಗಸ್ಯ ಸಿದ್ಧಿರ್ಬ್ರಾಹ್ಮಣಸತ್ತಮೇ ।
ಯಃ ಕ್ಷಣಾದೇವ ದುಷ್ಪ್ರಾಪಂ ಸುವಿಮಾನಮಚೀಕರತ್ ॥ ೨ ॥

ಕ್ವ ಭೋಗಸಿದ್ಧಿರ್ಮಹತೀ ಮುನೀನಾಮಮಲಾತ್ಮನಾಂ ।
ಕ್ವ ತಪೋಬಲಹೀನಾನಾಂ ಭೋಗೇಚ್ಛಾ ಮನುಜಾತ್ಮನಾಂ ॥ ೩ ॥

---

## ಹದಿನೇಳನೆಯ ಅಧ್ಯಾಯವು

೧. ಶೇಷನು ಹೇಳಿದನು:—ಶತ್ರುಘ್ನನು ಆ ಚ್ಯವನನ ಅಸಾಧ್ಯವಾದ ತಪೋಬಲವನ್ನು ಯೋಚಿಸಿ ಸರ್ವಲೋಕಗಳಿಂದಲೂ, ಪೂಜ್ಯನಾದ ಬ್ರಾಹ್ಮಣನನ್ನು ಹೊಗಳಿದನು.

೨. ಆ ಬ್ರಾಹ್ಮಣನ ಯೋಗದ ಸಿದ್ಧಿಯೆಂತಹದಿರಬಹುದು ನೋಡಿರಿ. ಆ ಸಿದ್ಧಿಯಿಂದ ಒಂದು ಕ್ಷಣಕಾಲದಲ್ಲಿ ಅತ್ಯುತ್ತಮವಾದ ವಿಮಾನವನ್ನು ರಚಿಸಿ ಕೊಂಡನಲ್ಲ.

೩. ಮಹಾತ್ಮರ ಭೋಗಸಿದ್ಧಿ ಎಷ್ಟರದು? ತಪೋಬಲವಿಲ್ಲದ ಮನುಷ್ಯರ ಭೋಗೇಚ್ಛೆ ಎಷ್ಟರದು. ಸಂಬಂಧವೇ ಇಲ್ಲವಲ್ಲ.

**ಇತಿ ಸ್ವಗತಮಾಶಂಸರ್ ಶತ್ರುಘ್ನಶ್ಚ್ಯವನಾಶ್ರಮೇ ।**
**ಕ್ಷಣಂ ಸ್ಥಿತ್ವಾ ಜಲಂ ಪೀತ್ವಾ ಸುಖಸಂಭೋಗಮಾಪ್ತವಾನ್ ॥ ೪ ॥**

**ಹಯಸ್ತಸ್ಯಾಃ ಪಯೋಷ್ಣ್ಯಾಖ್ಯಾ ನದ್ಯಾಃ ಪುಣ್ಯಜಲಾತ್ಮನಃ ।**
**ಪಯಃ ಪೀತ್ವಾ ಯಯೌ ಮಾರ್ಗೇ ವಾಯುವೇಗಂ ಪದಂ ದಧತ್ ॥ ೫ ॥**

**ಯೋಧಾಸ್ತನ್ನಿರ್ಗಮಂ ದೃಷ್ಟ್ವಾ ಪೃಷ್ಠತೋಽನುಯಯುಸ್ತದಾ ।**
**ಹಸ್ತಿಭಿಃ ಪತ್ತಿಭಿಃ ಕೇಚಿದ್ರಥೈಃ ಕೇಚನ ವಾಜಿಭಿಃ ॥ ೬ ॥**

**ಶತ್ರುಘ್ನೋಽಮಾತ್ಯವರ್ಯೇಣ ಸುಮತ್ಯಾಹ್ವೇನ ಸಂಯುತಃ ।**
**ಪೃಷ್ಠತೋಽನುಜಗಾಮಾಶು ರಥೇನ ಹಯಶೋಭಿನಾ ॥ ೭ ॥**

**ಗಚ್ಛನ್ವಾಜೀ ಪುರಂ ಪ್ರಾಪ್ತೋ ವಿಮಲಾಖ್ಯಸ್ಯ ಭೂಪತೇಃ ।**
**ರತ್ನಾತಟಾಖ್ಯಂ ಜನತಾಹೃಷ್ಟಪುಷ್ಟಸಮಾಕುಲಂ ॥ ೮ ॥**

---

೪. ಹೀಗೆಂದು ತನ್ನ ಮನಸ್ಸಿನಲ್ಲಿಯೇ ಯೋಚಿಸುತ್ತಾ ಶತ್ರುಘ್ನನು ಚ್ಯವನಾಶ್ರಮದಲ್ಲಿ ಕ್ಷಣಕಾಲವಿದ್ದು, ಬಾಯಾರಿಕೆಯನ್ನು ನೀಗಿಕೊಂಡು ಸುಖವಾಗಿದ್ದನು.

೫. ಆ ಯಾಗದ ಕುದುರೆಯೂ, ಆ ನದಿಯ ನೀರನ್ನು ಕುಡಿದು ವಾಯುವೇಗದಿಂದ ದಾರಿಯಲ್ಲಿ ಹೊರಟಿತು.

೬. ಯೋಧರುಗಳು ಅದು ಹೊರಡುವುದನ್ನು ನೋಡಿ ತಮ್ಮ ವಾಹನಗಳಾದ ಆನೆ, ಕುದುರೆ, ರಥಗಳ ಮೇಲೆ ಹತ್ತಿಕೊಂಡು, ಕೆಲವರು ಕಾಲಿನಿಂದಲೂ, ಅದನ್ನು ಅನುಸರಿಸಿದರು.

೭. ಶತ್ರುಘ್ನನೂ ಕೂಡ ಆ ಮಂತ್ರಿಯಾದ ಸುಮತಿಯೊಡನೆ ರಥದಲ್ಲಿ ಕುಳಿತು ಕುದುರೆಯ ಮಾರ್ಗವನ್ನನುಸರಿಸಿದನು.

೮. ಕುದುರೆಯು ಹೋಗುತ್ತಾ ಸಮೃದ್ಧಿಮತ್ತಾದ ವಿಮಲನೆಂಬ ರಾಜನ ರತ್ನಾತಟಕವೆಂಬ ಊರಿಗೆ ಹೋಯಿತು.

ಸ ಸೇವಕಾದುಪಶ್ರುತ್ಯ ರಘುನಾಥಹಯೋತ್ತಮಂ ।
ಪುರಾಂತಿಕೇ ಹಿ ಸಂಪ್ರಾಪ್ತಂ ಸರ್ವಯೋಧಸಮನ್ವಿತಂ ॥ ೯ ॥

ತದಾ ಗಜಾನಾಂ ಸಪ್ತತ್ಯಾ ಚಂದ್ರವರ್ಣಸಮಾನಯಾ ।
ಅಶ್ವಾನಾಮಯುತೈಸ್ಸಾರ್ಧಂ ರಥಾನಾಂ ಕಾಂಚನತ್ವಿಷಾಂ ॥ ೧೦ ॥

ಸಹಸ್ರೇಣ ಚ ಸಂಯುಕ್ತೋ ಶತ್ರುಘ್ನಂ ಪ್ರತಿಜಗ್ಮಿವಾನ್ ।
ಶತ್ರುಘ್ನಂ ಸ ನಮಸ್ಕೃತ್ಯ ಸರ್ವಂ ಪ್ರಾದಾನ್ಮಹಾನೃಪಃ ॥ ೧೧ ॥

ವಸುಕೋಶಂ ಧನಂ ಸರ್ವಂ ರಾಜ್ಯಂ ತಸ್ಮೈ ನಿವೇದ್ಯ ಚ ।
ಕಿಂ ಕರೋಮೀತಿ ರಾಜಾನಂ ಜಗಾದ ಪುರತಃ ಸ್ಥಿತಃ ॥ ೧೨ ॥

ರಾಜಾಪಿ ತಂ ಸ್ವಿಯುಪದೇ ಪ್ರಣಮ್ರಂ
ದೋರ್ಭ್ಯಾಂ ದೃಢಂ ತಂ ಪರಿಷಸ್ವಜೇ ಮುಹುಃ ।
ಜಗಾಮ ಸಾಕಂ ತನಯೇ ಸ್ವರಾಜ್ಯಂ
ನಿಕ್ಷಿಪ್ಯ ಸರ್ವಂ ಬಹುಧನ್ವಿಭಿರ್ವೃತಃ ॥ ೧೩ ॥

---

೯. ಊರಿನ ಬಳಿಗೆ ಬಂದ ಆ ಶ್ರೀರಾಮನ ಯಜ್ಞದ ಕುದುರೆಯನ್ನು ಅಲ್ಲಿನ ರಾಜನು ಆಳುಗಳಿಂದ ತಿಳಿದನು.

೧೦-೧೧. ಆಗ ಆ ರಾಜನು ಎಪ್ಪತ್ತು ಆನೆಗಳು, ಹತ್ತುಸಾವಿರ ಕುದುರೆಗಳು, ಒಂದುಸಾವಿರ ರಥಗಳೊಡನೆ ಹೊರಟು ಶತ್ರುಘ್ನನನ್ನು ಎದುರುಗೊಂಡು ನಮಸ್ಕರಿಸಿ ತನ್ನ ಸರ್ವವನ್ನೂ ಕೊಟ್ಟನು.

೧೨. ಭಂಡಾರವನ್ನೂ ರಾಜ್ಯವನ್ನೂ ಕೊಟ್ಟು ನಾನು ಏನುಮಾಡಬೇಕೆಂದು ಕೇಳಿದನು.

೧೩. ಶತ್ರುಘ್ನನು ಅವನ ನಮ್ರತೆಯನ್ನು ನೋಡಿ ಆಲಿಂಗಿಸಿದನು. ಈ ರಾಜನೂ ಕೂಡ ಮಗನಿಗೆ ರಾಜ್ಯವನ್ನು ಕೊಟ್ಟು ತಾನು ಶತ್ರುಘ್ನನ ಕೂಡ ಹೊರಟನು.

**ರಾಮಚಂದ್ರಾಭಿದಾಂ ಶ್ರುತ್ವಾ ಸರ್ವಶ್ರುತಿಮನೋಹರಾಂ ।**
**ಸರ್ವೇ ಪ್ರಣಮ್ಯ ತಂ ವಾಹಂ ದದುರ್ವಸು ಮಹಾಧನಂ　　॥ ೧೪ ॥**

**ಏವಂ ಸ ಗಚ್ಛಂಸ್ತನ್ಮಾರ್ಗೇ ಪರ್ವತಾಗ್ರ್ಯಂ ದದರ್ಶ ಹ ।**
**ಸ್ಫಾಟಿಕೈಃ ಕಾನಕೈ ರೌಪ್ಯೈ ರಾಜಿತಂ ಪ್ರಸ್ಥರಾಜಿಭಿಃ　　॥ ೧೫ ॥**

**ಜಲನಿರ್ಝರಸಂಹ್ಲಾದನಾನಾಧಾತುಕಭೂತಲಂ ।**
**ಗೈರಿಕಾದಿಕಸದ್ಧಾತುರಾಶಿರಂಗವಿರಾಜಿತಂ　　॥ ೧೬ ॥**

**ವೀಣಾರಣದ್ಧಂಸಶುಕಕ್ವಣಸುಂದರಶೋಭಿತಂ ।**
**ಯತ್ರ ಸಿದ್ಧಾಂಗನಾಃ ಸಿದ್ಧೈಃ ಕ್ರೀಡಂತ್ಯಕುತೋಭಯಾಃ　　॥ ೧೭ ॥**

**ಗಂಧರ್ವಾಪ್ಸರಸೋ ನಾಗಾ ಯತ್ರ ಕ್ರೀಡಂತಿ ಲೀಲಯಾ ।**
**ಗಂಗಾತರಂಗಸಂಸ್ಪರ್ಶಶೀತವಾಯುನಿಷೇವಿತಂ　　॥ ೧೮ ॥**

**ಪರ್ವತಂ ವೀಕ್ಷ್ಯ ಶತ್ರುಘ್ನ ಉವಾಚ ಸುಮತಿಂ ತ್ವಿದಂ ।**
**ತದ್ದರ್ಶನಸಮುದ್ಭೂತವಿಸ್ಮಯಾವಿಷ್ಟಮಾನಸಃ　　॥ ೧೯ ॥**

---

೧೪. ಮನೋಹರವಾದ ರಾಮಚಂದ್ರನ ಹೆಸರನ್ನು ಕೇಳಿದ ಮಾತ್ರದಿಂದಲೇ ಎಲ್ಲರೂ ಆ ಕುದುರೆಗೆ ನಮಸ್ಕರಿಸಿ ತಮ್ಮ ಧನವನ್ನೆಲ್ಲಾ ಸಮರ್ಪಿಸಿದರು.

೧೫-೧೬. ಹೀಗೆ ಮಾರ್ಗದಲ್ಲಿ ಹೋಗುತ್ತಾ ಒಂದು ಪರ್ವತವನ್ನು ಕಂಡನು. ಅದು ಸ್ಫಟಿಕಶಿಲೆ, ಸ್ವರ್ಣ, ಬೆಳ್ಳಿಗಳಿಂದ ಕೂಡಿದ ತಪ್ಪಲು ಪ್ರದೇಶವುಳ್ಳದಾಗಿತ್ತು. ನೀರಿನ ಝರಿಗಳೂ ಹರಿಯುತ್ತಿದ್ದುವು. ಅನೇಕವಾದ ಧಾತುಗಳೂ, ಇದ್ದುವು. ಸೀಸವೂ ಕೂಡ ಯಥೇಚ್ಛವಾಗಿದ್ದಿತು. ವೀಣೆಯಿಂದ ಶಬ್ದಮಾಡುವ ಹಂಸ ಮುಂತಾದ ಪಕ್ಷಿಗಳಿಂದ ಶೋಭಿಸುತ್ತಿದ್ದಿತು.

೧೭-೧೮. ಅಲ್ಲಿ ಸಿದ್ಧಾಂಗನೆಯರು ಗಂಡಂದಿರೊಡನೆ ನಿರ್ಭಯವಾಗಿ ಕ್ರೀಡಿಸುತ್ತಿರುವರು. ಗಂಧರ್ವರು, ಅಪ್ಸರಸ್ಸುಗಳು, ನಾಗರೂ ಕೂಡ ಅಲ್ಲಿ ಬಂದು ಕ್ರೀಡಿಸುವರು. ಗಂಗೆಯ ನೀರಿನ ಹನಿಯಿಂದ ವಾಯು ಅದೆಲ್ಲವನ್ನೂ ಪವಿತ್ರ ಮಾಡಿದ್ದಿತು.

೧೯. ಆ ಪರ್ವತವನ್ನು ನೋಡಿ ಆಶ್ಚರ್ಯಪಟ್ಟು ಶತ್ರುಘ್ನನು ಸುಮತಿಗೆ ಇಂತೆಂದನು.

ಕೋಽಯಂ ಗಿರಿರ್ಮಹಾಮಂತ್ರಿನ್ ವಿಸ್ಮಾಯಯತಿ ಮೇ ಮನಃ ।
ಮಹಾರಜತಪ್ರಸ್ಥಾಢ್ಯೋ ಮಾರ್ಗೇ ರಾಜತಿ ಮೇಽದ್ಭುತಃ ॥ ೨೦ ॥

ಅತ್ರ ಕಿಂ ದೇವತಾವಾಸೋ ದೇವಾನಾಂ ಕ್ರೀಡನಸ್ಥಳಂ ।
ಯದೇತನ್ಮನಸಃ ಕ್ಷೋಭಂ ಕರೋತಿ ಶ್ರೀಸಮುಚ್ಚಯೈಃ ॥ ೨೧ ॥

ಇತಿ ವಾಕ್ಯಂ ಸಮಾಕರ್ಣ್ಯ ಜಗಾದ ಸುಮತಿಸ್ತದಾ ।
ವಕ್ಷ್ಯಮಾಣಗುಣಾಗಾರರಾಮಚಂದ್ರಪದಾಬ್ಜಧೀಃ ॥ ೨೨ ॥

ನೀಲೋಽಯಂ ಪರ್ವತೋ ರಾಜನ್ ಪುರತೋ ಭಾತಿ ಭೂಮಿಪ ।
ಮಹಾಶೃಂಗೈರ್ಮನೋಹಾರ್ಯೈಃ ಸ್ಫಾಟಿಕಾದ್ಯೈಃ ಸಮಂತತಃ ॥ ೨೩ ॥

ಏನಂ ಪಶ್ಯಂತಿ ನೋ ಪಾಪಾಃ ಪರದಾರರತಾ ನರಾಃ ।
ವಿಷ್ಣೋರ್ಗುಣಗಣಾನ್ಯೇ ವೈ ನ ಮನ್ಯಂತೇ ನರಾಧಮಾಃ ॥ ೨೪ ॥

ಶ್ರುತಿಸ್ಮೃತಿಸಮುತ್ಥಂ ಯೋ ಧರ್ಮಂ ಸದ್ಭಿಸ್ಸುಸಾಧಿತಂ ।
ನ ಮನ್ಯಂತೇ ಸ್ವಬುದ್ಧಿಸ್ಥಹೇತುವಾದವಿಚಾರಿಣಃ ॥ ೨೫ ॥

---

೨೦. ಈ ಎದುರಿಗೆ ಕಾಣುತ್ತಿರುವ ಬೆಟ್ಟವಾವುದು ? ನನಗೆ ಆಶ್ಚರ್ಯವನ್ನುಂಟುಮಾಡುತ್ತಿದೆ.

೨೧. ಇಲ್ಲಿ ಯಾವ ದೇವತೆ ಇರುವುದು ? ಇದರ ಕಾಂತಿಯು ಮನಸ್ಸಿಗೆ ಕ್ಷೋಭೆಯನ್ನುಂಟುಮಾಡುತ್ತಿದೆಯಲ್ಲ.

೨೨. ಈ ಮಾತನ್ನು ಕೇಳಿ ಸುಮತಿಯು ರಾಮಚಂದ್ರನ ಪಾದಗಳನ್ನು ಸ್ಮರಿಸಿ ಮುಂದಿನ ಗುಣಗಳನ್ನು ಹೇಳಿದನು.

೨೩. ದೊಡ್ಡ ಕೋಡುಗಲ್ಲುಗಳಿಂದಲೂ, ಸ್ಫಟಿಕವೇ ಮುಂತಾದುವುಗಳಿಂದಲೂ, ಪ್ರಕಾಶಿಸುವ ಈ ಪರ್ವತವು ನೀಲಪರ್ವತವು.

೨೪. ಪಾಪಿಗಳೂ, ವಿಷ್ಣುವಿನ ಗುಣಗಳನ್ನು ತಿಳಿಯದವರಿಗೂ ಇದು ಕಾಣುವುದಿಲ್ಲ.

೨೫. ವೇದಶಾಸ್ತ್ರಗಳಲ್ಲಿ ಹೇಳಿದ ಧರ್ಮವನ್ನು ನಂಬದೆ ಕಾರಣವಾದಿಗಳಾದ ನಾಸ್ತಿಕರಿಗೆ ಇದು ಕಾಣುವುದಿಲ್ಲ.

ನೀಲೀವಿಕ್ರಯಕರ್ತಾರೋ ಲಾಕ್ಷಾವಿಕ್ರಯಕಾರಕಾಃ ।
ಯೇ ಬ್ರಾಹ್ಮಣೋ ಘೃತಾದೀನಿ ವಿಕ್ರೀಣಾತಿ ಸುರಾಪಕಃ ॥ ೨೬ ॥

ಕನ್ಯಾಂ ರೂಪೇಣ ಸಂಪನ್ನಾಂ ನ ದದ್ಯಾತ್ಕುಲಶಾಲಿನೇ ।
ವಿಕ್ರೀಣಾತಿ ದ್ರವ್ಯಲೋಭಾತ್ ಪಿತಾ ಪಾಪವಿಮೋಹಿತಃ ॥ ೨೭ ॥

ಸತೀಂ ದೂಷಯತೇ ಯಸ್ತು ಕುಲಶೀಲವತೀಂ ನರಃ ।
ಸ್ವಯಮೇವಾತ್ತಿ ಮಧುರಂ ಬಂಧುಭ್ಯೋ ನ ದದಾತಿ ಯಃ ॥ ೨೮ ॥

ಮಾಯಾವೀ ಬ್ರಾಹ್ಮಣಾರ್ಥೇ ಚ ಪಾಕಭೇದಂ ಕರೋತಿ ಯಃ ।
ಕೃಶರಾಂ ಪಾಯಸಂ ವಾಪಿ ನಿಜಾರ್ಥೇ ಪಾಚಯೇತ್ಕುಧೀಃ ॥ ೨೯ ॥

ಅತಿಥೀನವಮನ್ಯಂತೇ ಸೂರ್ಯೋಢಾನ್ ಸುಕ್ಷುಧಾರ್ದಿತಾನ್ ।
ಅಂತರಿಕ್ಷಭುಜೋ ಯೇ ಚ ಯೇ ಚವಿಶ್ವಾಸಘಾತಕಾಃ ॥ ೩೦ ॥

---

೨೬. ನೀಲೀಬಣ್ಣ, ಅರಗು, ತುಪ್ಪ ಮುಂತಾದುವನ್ನು ಮಾರುವ ಬ್ರಾಹ್ಮಣನಿಗೂ, ಹೆಂಡಕುಡುಕನಿಗೂ ಕಾಣುವುದಿಲ್ಲ.

೨೭. ಸುಂದರಿಯಾದ ಕನ್ಯೆಯನ್ನು ಯೋಗ್ಯನಾದ ವರನಿಗೆ ದಾನಮಾಡದೇ ಹಣದಾಸೆಯಿಂದ ಮಾರತಕ್ಕವನಿಗೆ ಕಾಣುವುದಿಲ್ಲ.

೨೮. ಕುಲಶೀಲಗಳುಳ್ಳ ಪತಿವ್ರತೆಯನ್ನು ದೂಷಿಸುವವನಿಗೂ, ಬಂಧುಗಳಿಗೆ ಕೊಡದೇ ತಾನೇ ಮಧುರಭೋಜನಮಾಡುವವನಿಗೂ ಇದು ಕಾಣುವುದೂ ಇಲ್ಲ.

೨೯. ಕಪಟಿಯು ಬ್ರಾಹ್ಮಣನು ಬಂದಾಗ ತನಗೊಂದೂಟ ಅವನಿಗೊಂದು ಊಟದ ಅಡಿಗೆಯಲ್ಲಿ ಭೇದತೋರಿಸುವವನಿಗೂ, ಚಿಗುಳಿ, ಪಾಯಸಗಳನ್ನು ತಾನೊಬ್ಬನೇ ತಿನ್ನುವವನು ಇವರಿಗೂ ಇದು ಕಾಣಿಸುವುದಿಲ್ಲ.

೩೦. ಮಧ್ಯಾಹ್ನದ ವೇಳೆಯಲ್ಲಿ ಹಸಿದುಬಂದ ಅತಿಥಿಗಳನ್ನು ತಿರಸ್ಕರಿಸುವವರಿಗೂ, ನೆಲದ ಮೇಲೆ ಊಟಮಾಡದವರಿಗೂ, ವಿಶ್ವಾಸಘಾತಕರಿಗೂ, ಇದು ಕಾಣಿಸುವುದಿಲ್ಲ.

ನ ಪಶ್ಯಂತಿ ಮಹಾರಾಜ ರಘುನಾಥಪರಾಙ್ಮುಖಾಃ ।
ಅಸೌ ಪುಣ್ಯೋ ಗಿರಿವರಃ ಪುರುಷೋತ್ತಮಶೋಭಿತಃ ॥ ೩೧ ॥

ಪವಿತ್ರಯತಿ ಸರ್ವಾನ್ಯೋ ದರ್ಶನೇನ ಮನೋಹರಃ ।
ಅತ್ರ ತಿಷ್ಠತಿ ದೇವಾನಾಂ ಮುಕುಟೈರರ್ಚಿತಾಂಘ್ರಿಕಃ ॥ ೩೨ ॥

ಪುಣ್ಯವದ್ಭಿಃ ಸುದರ್ಶಾರ್ಹಃ ಪುಣ್ಯದಃ ಪುರುಷೋತ್ತಮಃ ।
ಶ್ರುತಯೋ ನೇತಿ ನೇತೀತಿ ಬ್ರುವಾಣಾ ನ ವಿದಂತಿ ಯಂ ॥ ೩೩ ॥

ಯತ್ಪಾದರಜ ಇಂದ್ರಾದಿದೇವೈರ್ಮೃಗ್ಯಂ ಸುದುರ್ಲಭಂ ।
ವೇದಾಂತಾದಿಭಿರಸ್ಯೈರ್ವಾಕ್ಯೈರ್ವಿಂದಂತಿ ಯಂ ಬುಧಾಃ ॥ ೩೪ ॥

ಸೋಽತ್ರ ಶ್ರೀಮನ್ಮಹಾಶೈಲೇ ವಸತೇ ಪುರುಷೋತ್ತಮಃ ।
ಆರುಹ್ಯ ತಂ ನಮಸ್ಕೃತ್ಯ ಸಂಪೂಜ್ಯ ಸುಕೃತಾದಿನಾ ॥ ೩೫ ॥

---

೩೧. ರಘುನಾಥನಲ್ಲಿ ಯಾರು ಪರಾಙ್ಮುಖರೋ ಅವರಿಗೂ ಈ ಬೆಟ್ಟವು ಕಾಣಿಸುವುದಿಲ್ಲ. ಈ ಪುಣ್ಯವಾದ ಪರ್ವತದಲ್ಲಿ ವಿಷ್ಣುವಿದ್ದಾನೆ.

೩೨. ದೇವತೆಗಳ ತಲೆಯಿಂದ ನಮಸ್ಕೃತನಾದ ಆ ಸ್ವಾಮಿಯು ಇಲ್ಲಿದ್ದಾನೆ. ಆತನ ದರ್ಶನಮಾಡಿದರೆ ಅವನು ನಮ್ಮನ್ನು ಪವಿತ್ರರನ್ನಾಗಿ ಮಾಡುತ್ತಾನೆ.

೩೩. ಪುಣ್ಯವನ್ನು ಮಾಡಿದವರಿಗೆ ನೋಡಲು ಸಾಧ್ಯನು. ಆ ಸ್ವಾಮಿಯನ್ನು ಶ್ರುತಿಗಳು ಕೂಡ ಅಲ್ಲ ಅಲ್ಲ ಎಂದು ಅವನನ್ನು ತಿಳಿಯಲಾರವು.

೩೪. ಯಾವನ ಪಾದಧೂಳಿಯು ಇಂದ್ರಾದಿಗಳಿಗೂ ಅಲಭ್ಯವೋ, ವೇದಾಂತಿಗಳೂ ಉತ್ತಮವಾದ ವಾಕ್ಯಗಳಿಂದ ಯಾವನನ್ನು ತಿಳಿಯುತ್ತಾರೋ ಅವನು ಇಲ್ಲಿರುತ್ತಾನೆ.

೩೫-೩೬. ಆ ಸ್ವಾಮಿಯು ಈ ಬೆಟ್ಟದಲ್ಲಿ ವಾಸವಾಗಿದ್ದಾನೆ. ಈ ಬೆಟ್ಟವನ್ನು ಹತ್ತಿ ದೇವರನ್ನು ನಮಸ್ಕರಿಸಿ, ನೈವೇದ್ಯಾದಿಗಳಿಂದ ಪೂಜಿಸಿ, ಪ್ರಸಾದ ಸ್ವೀಕಾರ

ನೈವೇದ್ಯಂ ಭಕ್ಷಯಿತ್ವಾ ವೈ ಭೂಪ ಭೂಯಾಚ್ಚತುರ್ಭಜಃ ।
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ॥ ೩೬ ॥

ತಂ ಶೃಣುಷ್ವ ಮಹಾರಾಜ ಸರ್ವಾಶ್ಚರ್ಯಸಮನ್ವಿತಂ ।
ರತ್ನಗ್ರೀವಸ್ಯ ನೃಪತೇರ್ಯದ್ವೃತ್ತಂ ಸಕುಟುಂಬಿನಃ ॥ ೩೭ ॥

ಚತುರ್ಭುಜಾದಿಕಂ ಪ್ರಾಪ್ತಂ ದೇವದಾನವದುರ್ಲಭಂ ।
ಆಸೀತ್ಕಾಂಚೀ ಮಹಾರಾಜ ಪುರೀ ಲೋಕೇಷು ವಿಶ್ರುತಾ ॥ ೩೮ ॥

ಮಹಾಜನಪರೀವಾರಸಮೃದ್ಧಬಲವಾಹನಾ ।
ಯಸ್ಯಾಂ ವಸಂತಿ ವಿಪ್ರಾಗ್ರ್ಯಾಃ ಷಟ್ಕರ್ಮನಿರತಾ ಭೃಶಂ ॥ ೩೯ ॥

ಸರ್ವಭೂತಹಿತೇ ಯುಕ್ತಾ ರಾಮಭಕ್ತಿಷು ಲಾಲಸಾಃ ।
ಕ್ಷತ್ರಿಯಾ ರಣಕರ್ತಾರಃ ಸಂಗ್ರಾಮೇऽಪ್ಯಪಲಾಯಿನಃ ॥ ೪೦ ॥

ಪರದಾರಪರದ್ರವ್ಯಪರದ್ರೋಹಪರಾಙ್ಮುಖಾಃ ।
ವೈಶ್ಯಾಃ ಕುಸೀದಕೃಷ್ಯಾದಿವಾಣಿಜ್ಯಶುಭವೃತ್ತಯಃ ॥ ೪೧ ॥

---

ಮಾಡಿದರೆ ಅವನು ಚತುರ್ಭುಜನಾಗುತ್ತಾನೆ. ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ ಕೇಳು.

೩೭. ರತ್ನಗ್ರೀವನೆಂಬ ರಾಜನಿಗುಂಟಾದ ಆಶ್ಚರ್ಯಕರವಾದ ಕಥೆಯನ್ನು ಕೇಳು.

೩೮. ಆ ರತ್ನಗ್ರೀವನಿಗೆ ದೇವದಾನವರಿಗೆ ಬರದ ಚತುರ್ಭುಜವು ಪ್ರಾಪ್ತವಾಯಿತು. ಪ್ರಪಂಚದಲ್ಲಿ ಪ್ರಖ್ಯಾತವಾದ ಕಾಂಚೀ ನಗರವೆಂಬುದೊಂದು ಪಟ್ಟಣವಿದೆ.

೩೯. ಅಲ್ಲಿ ಮಹಾಜನಗಳೂ, ಪರಿವಾರಗಳೂ ಇದ್ದಾರೆ. ಸರ್ವಸಮೃದ್ಧಿಯಿಂದಲೂ ಕೂಡಿದೆ. ಅಲ್ಲಿ ಷಟ್ಕರ್ಮನಿರತರಾದ ಬ್ರಾಹ್ಮಣರು ವಾಸಿಸುತ್ತಾರೆ.

೪೦-೪೧. ಅಲ್ಲಿರುವವರು ಪ್ರಾಣಿದಯೆಯುಳ್ಳವರು. ರಾಮಭಕ್ತರು. ಕ್ಷತ್ರಿಯರು. ಯುದ್ಧಾಸಕ್ತರು. ರಣದಲ್ಲಿ ಹಿಮ್ಮೆಟ್ಟುವವರಲ್ಲ. ಪರಹೆಂಡಿರು. ಅವರ ಸ್ವತ್ತು, ಅವರಿಗೆ ದ್ರೋಹಮಾಡದವರು. ವೈಶ್ಯರು ಬಡ್ಡಿಗೆ ಹಣಹಾಕಿ ಜೀವನ, ವ್ಯವಸಾಯ, ವ್ಯಾಪಾರರೂಪವಾದ ವೃತ್ತಿಯಲ್ಲಿ ನಿರತರಾಗಿ ರಾಮಭಕ್ತರಾಗಿದ್ದಾರೆ.

ಕುರ್ವಂತಿ ರಘುನಾಥಸ್ಯ ಪದಾಂಭೋಜೇ ರತಿಂ ಸದಾ ।
ಶೂದ್ರಾ ಬ್ರಾಹ್ಮಣಸೇವಾಭಿರ್ಗತರಾತ್ರಿದಿನಾ ನರಾಃ ॥ ೪೨ ॥

ಕುರ್ವಂತಿ ಕಥನಂ ರಾಮರಾಮೇತಿ ರಸನಾಗ್ರತಃ ।
ಪ್ರಾಕೃತಾಃ ಕೇಽಪಿ ನೋ ಪಾಪಂ ಕುರ್ವಂತಿ ಮನಸಾತ್ರ ವೈ ॥ ೪೩ ॥

ದಾನಂ ದಯಾ ದಮಸ್ಸತ್ಯಂ ತತ್ರ ತಿಷ್ಠತಿ ನಿತ್ಯಶಃ ।
ವದತೇ ನ ಪರಾಬಾಧಂ ವಾಕ್ಯಂ ಕೋಽಪಿ ನರೋಽನಘ ॥ ೪೪ ॥

ನ ಪಾರಕ್ಯೇ ಧನೇ ಲೋಭಂ ಕುರ್ವಂತಿ ನ ಹಿ ಪಾತಕಂ ।
ಏವಂ ಪ್ರಜಾ ಮಹಾರಾಜ ರತ್ನಗ್ರೀವೇಣ ಪಾಲ್ಯತೆ ॥ ೪೫ ॥

ಷಷ್ಠಾಂಶಂ ತತ್ರ ಗೃಹ್ಣಾತಿ ನಾನ್ಯಂ ಲೋಭವಿವರ್ಜಿತಃ ।
ಏವಂ ಪಾಲಯಮಾನಸ್ಯ ಪ್ರಜಾ ಧರ್ಮೇಣ ಭೂಪತೇಃ ॥ ೪೬ ॥

ಗತಾನಿ ಬಹುವರ್ಷಾಣಿ ಸರ್ವಭೋಗವಿಲಾಸಿನಃ ।
ವಿಶಾಲಾಕ್ಷೀಂ ಮಹಾರಾಜ ಏಕದಾ ಹ್ಯುಚಿವಾನಿದಂ ॥ ೪೭ ॥

---

೪೨-೪೩. ಶೂದ್ರರು ಯಾವಾಗಲೂ ಬ್ರಾಹ್ಮಣರ ಸೇವೆಮಾಡುತ್ತಾ ರಾಮನಾಮಸ್ಮರಣೆ ಮಾಡುತ್ತಿರುತ್ತಾರೆ. ದಡ್ಡರೂ ಕೂಡ ಮನಸ್ಸಿನಿಂದಲೂ ಪಾಪ ಮಾಡುವುದಿಲ್ಲ.

೪೪. ದಾನ, ದಯೆ, ದಮ್ಮ, ಸತ್ಯಗಳು ಅಲ್ಲಿ ಯಾವಾಗಲೂ ಇವೆ. ಪರರಿಗೆ ತೊಂದರೆಯಾಗುವ ಯಾವುದನ್ನೂ ಯಾವನೂ ಮಾಡುವುದಿಲ್ಲ.

೪೫. ಪರರ ಧನಾದಿಗಳಲ್ಲಿ ಆಸೆಯನ್ನೂ, ತಮ್ಮ ಧನದಲ್ಲಿ ಲೋಭವನ್ನೂ ಯಾರೂ ಮಾಡುವುದಿಲ್ಲ. ಪಾಪವೆಂಬುದನ್ನೇ ಮಾಡುವುದಿಲ್ಲ. ಈ ರೀತಿಯಾಗಿ ರತ್ನಗ್ರೀವನು ಪ್ರಜೆಗಳನ್ನು ಪಾಲಿಸುತ್ತಾನೆ. ಆರನೆಯ ಭಾಗವೊಂದನ್ನು ಮಾತ್ರ ತೆಗೆದುಕೊಳ್ಳುತ್ತಾನೆಯೇ ಹೊರತು ಆಸೆಯಿಂದ ಮತ್ತೇನನ್ನೂ ಮುಟ್ಟುವದಿಲ್ಲ.

೪೬-೪೭. ಹೀಗೆ ಪ್ರಜೆಗಳನ್ನು ಕಾಪಾಡುತ್ತಿರಲು ಸರ್ವಭೋಗಗಳನ್ನು ಅನುಭವಿಸುತ್ತ, ಬಹು ವರ್ಷಗಳು ಕಳೆದನು. ಒಂದುಸಾರಿ ಪತಿವ್ರತೆಯೂ, ಧರ್ಮಪತ್ನಿಯೂ, ಆದ ವಿಶಾಲಾಕ್ಷಿಯನ್ನು ಕುರಿತು ಇಂತೆಂದನು.

ಪತಿವ್ರತಾಂ ಧರ್ಮಪತ್ನೀಂ ಪತಿವ್ರತಪರಾಯಣಾಂ ।
ಪುತ್ರಾ ಜಾತಾ ವಿಶಾಲಾಕ್ಷಿ ಪ್ರಜಾರಕ್ಷಾಧರಂಧರಾಃ ॥ ೪೮ ॥

ಪರಿವಾರೋ ಮಹಾನ್ ಮಹ್ಯಂ ವರ್ತತೇ ವಿಗತಜ್ವರಃ ।
ಹಸ್ತಿನೋ ಮಮ ಶೈಲಾಭಾ ವಾಜಿನಃ ಪವನೋಪಮಾಃ ॥ ೪೯ ॥

ರಥಾಶ್ಚ ಸುಹಯೈರ್ಯುಕ್ತಾ ವರ್ತಂತೆ ಮಮ ನಿತ್ಯಶಃ ।
ಮಹಾವಿಷ್ಣುಪ್ರಸಾದೇನ ಕಿಂಚಿನ್ನ್ಯೂನಂ ಮಮಾಸ್ತಿ ನ ॥ ೫೦ ॥

ಪರಂ ಮನೋರಥಸ್ತ್ವೇಕಸ್ತಿಷ್ಠತೇ ಮಾನಸೇ ಮಮ ।
ಪರಂ ತೀರ್ಥಂ ಮಯಾ ನಾದ್ಯ ಕೃತಂ ಪರಮಶೋಭನಂ ॥ ೫೧ ॥

ಗರ್ಭವಾಸವಿರಾಮಾಯ ಕ್ಷಮಂ ಗೋವಿಂದಶೋಭಿತಂ ।
ವೃದ್ಧೋ ಜಾತೋಽಸ್ಮ್ಯಹಂ ತಾವದ್ವಲೀಪಲಿತದೇಹವಾನ್ ॥ ೫೨ ॥

ಕರಿಷ್ಯಾಮಿ ಮನೋಹಾರಿತೀರ್ಥಸೇವನಮಾದೃತಃ ।
ಯೋ ನರೋ ಜನ್ಮಪರ್ಯಂತಂ ಸ್ವೋದರಸ್ಯ ಪ್ರಪೂರಕಃ ॥ ೫೩ ॥

---

೪೮-೫೦. ಎಲೈ ವಿಶಾಲಾಕ್ಷಿಯೇ, ಮಕ್ಕಳಾದರು. ಅವರು ಪ್ರಜೆಗಳನ್ನು ಕಾಪಾಡುವುದರಲ್ಲಿ ಶಕ್ತರೂ ಆದರು. ಪರಿವಾರಗಳು ಸಮರ್ಥವಾಗಿವೆ. ಯೋಚನೆ ಇಲ್ಲ. ಪರ್ವತದಂತೆ ಇರುವ ಆನೆಗಳೂ, ಉತ್ತಮವಾದ ಕುದುರೆಗಳೂ ರಥಗಳೂ ಬೇಕಾದಷ್ಟಿವೆ. ಮಹಾವಿಷ್ಣುವಿನ ಅನುಗ್ರಹದಿಂದ ಸ್ವಲ್ಪವೂ ಕಮ್ಮಿಯಾಗಿಲ್ಲ.

೫೧. ಆದರೆ ಒಂದು ಯೋಚನೆ ಮಾತ್ರವಿದೆ. ಪುನರ್ಜನ್ಮ ಬಾರದಿರುವುದಕ್ಕೆ ಯೋಗ್ಯವಾದ ಗೋವಿಂದನಿಂದ ಕೂಡಿದ ಒಂದು ತೀರ್ಥಸೇವನೆಯನ್ನೂ ಕೂಡ ಮಾಡಲಿಲ್ಲವಲ್ಲ.

೫೨. ಮುದುಕನಾದೆ. ಮೈಸುಕ್ಕು ಹಿಡಿಯಿತು. ತಲೆ ನೆರೆತಿದೆ. ಆದ್ದರಿಂದ ತೀರ್ಥಯಾತ್ರೆಯನ್ನು ಮಾಡಬೇಕು.

೫೩-೫೪. ಯಾವನು ಬದುಕಿರುವವರೆಗೂ ತನ್ನ ಹೊಟ್ಟೆಯನ್ನೇ ತುಂಬಿಕೊಂಡು ಹರಿಯ ಪೂಜೆಯನ್ನು ಮಾಡುವುದಿಲ್ಲವೋ ಅವನನ್ನು ಬಸವನೆಂದನ್ನುವರು.

ಸ ಕರೋತಿ ಹರೇಃ ಪೂಜಾಂ ಸ ನರೋ ಗೋವೃಷಸ್ಸ್ಮೃತಃ ।
ತಸ್ಮಾದ್ಗಚ್ಛಾಮಿ ಭೋ ಭದ್ರೇ ತೀರ್ಥಯಾತ್ರಾಂ ಪ್ರತಿ ಪ್ರಿಯೇ ॥ ೫೪ ॥

ಸಕುಟುಂಬಃ ಸುತೇ ನ್ಯಸ್ಯ ಧುರಂ ರಾಜ್ಯಸ್ಯ ನಿರ್ಭರತಾಂ ।
ಇತಿ ವ್ಯವಸ್ಯ ಸಂಧ್ಯಾಯಾಂ ಹರಿಂ ಧ್ಯಾಯನ್ನಿಶಾಂತರೇ ॥ ೫೫ ॥

ಅದ್ರಾಕ್ಷೀತ್ಸ್ವಪ್ನಮಪ್ಯೇಕಂ ಬ್ರಾಹ್ಮಣಂ ತಾಪಸಂ ವರಂ ।
ಪ್ರಾತರುತ್ಥಾಯ ರಾಜಾಸೌ ಕೃತ್ವಾ ಸಂಧ್ಯಾಧಿಕಾಃ ಕ್ರಿಯಾಃ ॥ ೫೬ ॥

ಸಭಾಂ ಮಂತ್ರಿಜನೈಸ್ಸಾರ್ಧಂ ಸುಖಮಾಸೇದಿವಾನ್ಮಹಾನ್ ।
ತಾವದ್ವಿಪ್ರಂ ದದರ್ಶಾಥ ತಾಪಸಂ ಕೃಶದೇಹಿನಂ ॥ ೫೭ ॥

ಜಟಾವಲ್ಕಲಕೌಪೀನಧಾರಿಣಂ ದಂಡಪಾಣಿನಂ ।
ಅನೇಕತೀರ್ಥಸೇವಾಭಿಃ ಕೃತಪುಣ್ಯಕಳೇಬರಂ ॥ ೫೮ ॥

ರಾಜಾ ತಂ ವೀಕ್ಷ್ಯ ಶಿರಸಾ ಪ್ರಣನಾಮ ಮಹಾಭುಜಃ ।
ಅರ್ಘ್ಯಪಾದ್ಯಾಕಂ ಚಕ್ರೇ ಪ್ರಹೃಷ್ಟಾತ್ಮಾ ಮಹೀಪತಿಃ ॥ ೫೯ ॥

---

ಆದ್ದರಿಂದ ತೀರ್ಥಯಾತ್ರೆ ಮಾಡಲು ರಾಜ್ಯಭಾರವನ್ನು ಮಗನಿಗೆ ಕೊಟ್ಟು ಸಕುಟುಂಬನಾಗಿ ಹೊರಡುತ್ತೇನೆ.

೫೫-೫೬. ಹೀಗೆಂದು ನಿರ್ಧರಿಸಿ ಹರಿಯ ಧ್ಯಾನವನ್ನು ಮಾಡುತ್ತ ಮಲಗಿರಲು, ಬೆಳಗಿನ ಜಾವದಲ್ಲಿ ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣನನ್ನು ಕಂಡನು. ಬೆಳಗ್ಗೆ ಎದ್ದು ಸಂಧ್ಯಾವಂದನಾದಿ ಕ್ರಿಯೆಗಳನ್ನು ಮಾಡಿಕೊಂಡನು.

೫೭-೫೮. ಬೆಳಗ್ಗೆ ಸಭೆಯಲ್ಲಿ ಮಂತ್ರಿಗಳೊಂದಿಗೆ ಇರುವಾಗ ಒಬ್ಬ ಬಡಕಲನಾದ, ಜಟೆ, ನಾರುಬಟ್ಟೆ, ಕೌಪೀನ, ದಂಡಗಳನ್ನು ಧರಿಸಿರುವ, ಅನೇಕ ತೀರ್ಥಯಾತ್ರೆಯಿಂದ ಪವಿತ್ರವಾದ ದೇಹವುಳ್ಳ ತಪಸ್ವಿಯನ್ನು ಕಂಡನು.

೫೯. ರಾಜನು ಆತನನ್ನು ನೋಡಿ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಸತ್ಕರಿಸಿದನು.

ಸುಖೋಪವಿಷ್ಟಂ ವಿಶ್ರಾಂತಂ ಪಪ್ರಚ್ಛ ವಿದಿತಂ ದ್ವಿಜಂ ।
ಸ್ವಾಮಿಂಸ್ತ್ವದ್ದರ್ಶನಾನ್ಮೇಽದ್ಯ ಗತಂ ದೇಹಸ್ಯ ಪಾತಕಂ ॥ ೬೦ ॥

ಮಹಾಂತಃ ಕೃಪಣಾನ್ ಪಾತುಂ ಯಾಂತಿ ತದ್ಗೇಹಮಾದರಾತ್ ।
ತಸ್ಮಾತ್ಕಥಯ ಭೋ ವಿಪ್ರ ವೃದ್ಧಸ್ಯ ಮಮ ಸಂಪ್ರತಿ ॥ ೬೧ ॥

ಕೋ ದೇವೋ ಗರ್ಭವಾರಾಯ ಕಿಂ ತೀರ್ಥಂ ವಾ ಕ್ಷಮಂ ಭವೇತ್ ।
ಯೂಯಂ ಸರ್ವಗತಿಶ್ರೇಷ್ಠಾಃ ಸಮಾಧಿಧ್ಯಾನತತ್ಪರಾಃ ॥ ೬೨ ॥

ಸರ್ವತೀರ್ಥಾವಗಾಹೇನ ಕೃತಪುಣ್ಯಾತ್ಮನೋಽಮಲಾಃ ।
ಯಥಾವಚ್ಛೃಣ್ವತೇ ಮಹ್ಯಂ ಶ್ರದ್ಧಧಾನಾಯ ವಿಸ್ತರಾತ್ ।
ಕಥಯಸ್ವ ಪ್ರಸಾದೇನ ಸರ್ವತೀರ್ಥವಿಚಕ್ಷಣ ॥ ೬೩ ॥

॥ ಬ್ರಾಹ್ಮಣ ಉವಾಚ ॥

ಶೃಣು ರಾಜೇಂದ್ರ ವಕ್ಷ್ಯಾಮಿ ಯತ್ಪೃಷ್ಟಂ ತೀರ್ಥಸೇವನಂ ।
ಕಸ್ಯ ದೇವಸ್ಯ ಕೃಪಯಾ ಗರ್ಭಸ್ಯ ವಾರಣಂ ಭವೇತ್ ॥ ೬೪ ॥

---

೬೦-೬೧. ವಿಶ್ರಮಿಸಿಕೊಂಡು ಸುಖವಾಗಿ ಕುಳಿತಿರುವ ಆ ಬ್ರಾಹ್ಮಣನನ್ನು ಈರೀತಿ ದೊರೆಯು ಕೇಳಿದನು. ಸ್ವಾಮಿ, ತಮ್ಮ ದರ್ಶನದಿಂದ ನನ್ನ ದೇಹದ ಪಾಪವು ಹೋಯಿತು. ಯೋಗ್ಯರಾದವರು, ದೀನರ ಮನೆಗೆ ಅವರನ್ನು ಕಾಪಾಡಲು ಬರುತ್ತಾರೆ. ಆದ್ದರಿಂದ ವೃದ್ಧನಾದ ನನಗೆ ನಾನು ಕೇಳುವುದನ್ನು ಹೇಳಿ .

೬೨. ನೀವು ಎಲ್ಲಾ ಕಡೆಯಲ್ಲೂ ಸುತ್ತುವವರು. ಶ್ರೇಷ್ಠರು, ಸಮಾಧಿ ಧ್ಯಾನಗಳನ್ನು ಬಲ್ಲವರು. ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿ ಪುಣ್ಯವಂತರಾಗಿ ಪಾಪವನ್ನು ಕಳೆದುಕೊಂಡಿದ್ದೀರಿ. ಆದ್ದರಿಂದ ಪುನರ್ಜನ್ಮವನ್ನು ನಾಶಮಾಡುವುದಕ್ಕೆ ಯಾವ ದೇವನು ಸಮರ್ಥನು ? ಅಥವಾ ಯಾವ ತೀರ್ಥದಿಂದ ಅದು ಸಾಧ್ಯವಾದೀತು ?

೬೩. ಶ್ರದ್ಧೆಯಿಂದ ಸತ್ಯವಾಗಿ ಕೇಳುವ ನನಗೆ ಎಲ್ಲವನ್ನೂ ದಯವಿಟ್ಟು ವಿಸ್ತಾರವಾಗಿ ಹೇಳು.

೬೪. ಬ್ರಾಹ್ಮಣನು ಹೇಳಿದನು:—ಎಲೈ ರಾಜನೇ ಹೇಳುತ್ತೇನೆ, ಕೇಳು. ಯಾವ ತೀರ್ಥವನ್ನಾಗಲೀ, ಯಾವ ದೇವರನ್ನಾಗಲೀ ಸೇವಿಸಿದರೆ ಗರ್ಭವಾಸವು ತಪ್ಪುವುದೆಂಬುದನ್ನು ಕೇಳಿದೆಯಲ್ಲ.

ಸೇವ್ಯಶ್ರೀರಾಮಚಂದ್ರೋಽಸೌ ಸಂಸಾರಜ್ವರನಾಶಕಃ ।
ಪೂಜ್ಯಸ್ಸ ಏವ ಭಗವಾನ್ ಪುರುಷೋತ್ತಮಸಂಜ್ಞಿತಃ ॥ ೬೫ ॥

ಪುರ್ಯೋ ನಾನಾ ಮಯಾ ದೃಷ್ಟಾಃ ಸರ್ವಪಾಪಕ್ಷಯಾವಹಾಃ ।
ಅಯೋಧ್ಯಾ ಸರಯೂಸ್ತಾಪೀ ತಥಾ ದ್ವಾರಂ ಹರೇಃ ಪರಂ ॥ ೬೬ ॥

ಅವಂತೀ ವಿಮಲಾ ಕಾಂಚೀ ರೇವಾ ಸಾಗರಗಾಮಿನೀ ।
ಗೋಕರ್ಣಂ ಹಾಟಕಾಖ್ಯಂ ಚ ಹತ್ಯಾಕೋಟಿವಿನಾಶನಂ ॥ ೬೭ ॥

ಮಲ್ಲಿಕಾಖ್ಯೋ ಮಹಾಶೈಲೋ ಮೋಕ್ಷದಃ ಪಶ್ಯತಾಂ ನೃಣಾಂ ।
ಯತ್ರಾಂಗೇಷು ನೃಣಾಂ ತೋಯಂ ಶ್ಯಾಮಂ ವಾ ನಿರ್ಮಲಂ ಭವೇತ್ ।
ಪಾತಕಸ್ಯಾಪಹಾರೀದಂ ಮಯಾ ದೃಷ್ಟಂ ತು ತೀರ್ಥಕಂ ॥ ೬೮ ॥

ಮಯಾ ದ್ವಾರವತೀ ದೃಷ್ಟಾ ಸುರಾಸುರನಿಷೇವಿತಾ ॥ ೬೯ ॥

---

೬೫. ರಾಮಚಂದ್ರನನ್ನು ಸೇವಿಸಬೇಕು. ಅವನೇ ಸಂಸಾರದಿಂದ ಪಾರು ಮಾಡುವವನು. ಅವನೇ ಪೂಜ್ಯನು, ಅವನೇ ಪುರುಷೋತ್ತಮನು.

೬೬-೬೭. ಪಾಪಗಳನ್ನೂ ನಾಶಮಾಡುವ ಅನೇಕ ಪಟ್ಟಣಗಳನ್ನು ನೋಡಿದ್ದೇನೆ. ಅಯೋಧ್ಯೆ, ಸರಯೂ, ತಪತೀ, ಗಂಗಾದ್ವಾರ, ಅವಂತೀ, ಕಾಂಚೀ, ರೇವಾ, ಗೋಕರ್ಣ, ಧನುಷ್ಕೋಟಿ, ಮಲ್ಲಿಕಾರ್ಜುನಪರ್ವತ, ಇವೆಲ್ಲವೂ ಮೋಕ್ಷವನ್ನು ಕೊಡುತ್ತವೆ.

೬೮. ಎಲ್ಲ ಮನುಷ್ಯರ ಅಂಗದ ಮೇಲೆ ನೀರು ಬೀಳುವುದರಿಂದ ಕಪ್ಪಗಿರುವ ಅಂಗವು ನಿರ್ಮಲವಾಗುತ್ತದೆಯೋ ಆ ತೀರ್ಥವು ಪಾಪವನ್ನು ಹಾಳುಮಾಡುತ್ತದೆ. ಅಂಥಹವುಗಳನ್ನು ನೋಡಿದ್ದೇನೆ.

೬೯. ಸುರಾಸುರರಿಂದ ಸೇವಿಸಲ್ಪಟ್ಟ ದ್ವಾರವತಿಯನ್ನು ಹೀಗೆಂದು ಹೇಳಬಹುದು.

**ಗೋಮತೀ ಯತ್ರವಹತಿ ಸಾಕ್ಷಾದ್ಬ್ರಹ್ಮಜಲಾ ಶುಭಾ**
**ಯತ್ರ ಸ್ವಾಪೋ ಲಯಃ ಪ್ರೋಕ್ತೋ ಮೃತಿರ್ಮೋಕ್ಷ ಇತಿ ಶ್ರುತಿಃ ॥೭೦॥**

**ಯಸ್ಯಾಂ ಸಂವಸತಾಂ ನೃಣಾಂ ನ ಕಲಿಃ ಪ್ರಭವೇತ್ಕ್ವಚಿತ್ ।**
**ಚಕ್ರಾಂಕಾ ಯತ್ರ ಪಾಷಾಣಾ ಮಾನವಾ ಅಪಿ ಚಕ್ರಿಣಃ ॥ ೭೧ ॥**

**ಪಶವಃ ಕೀಟಪಕ್ಷ್ಯಾದ್ಯಾಃ ಸರ್ವೇ ಚಕ್ರಶರೀರಣಃ ।**
**ತ್ರಿವಿಕ್ರಮೋ ವಸೇದ್ಯಸ್ಯಾಂ ಸರ್ವಲೋಕೈಕಪಾಲಕಃ ॥ ೭೨ ॥**

**ಸಾ ಪುರೀ ತು ಮಹಾಪುಣ್ಯೈರ್ಮಯಾ ದೃಗ್ಗೋಚರೀಕೃತಾ ।**
**ಕುರುಕ್ಷೇತ್ರಂ ಮಯಾ ದೃಷ್ಟಂ ಸರ್ವಹತ್ಯಾಪನೋದನಂ ॥ ೭೩ ॥**

**ಸ್ಯಮಂತಪಂಚಕಂ ಯತ್ರ ಮಹಾಪಾತಕನಾಶನಂ ।**
**ವಾರಾಣಸೀ ಮಯಾ ದೃಷ್ಟಾ ವಿಶ್ವನಾಥಕೃತಾಲಯಾ ।**
**ಯತ್ರೋಪದಿಶತೇ ಮಂತ್ರಂ ತಾರಕಂ ಬ್ರಹ್ಮಸಂಜ್ಞಿತಂ ॥ ೭೪ ॥**

---

೭೦. ಗೋಮತಿಯು ಹರಿಯುವ ಜಾಗವು ಶ್ರೇಷ್ಠವಾದುದು. ಅದನ್ನು ಬ್ರಹ್ಮಜಲವೆಂದೆನ್ನುತ್ತಾರೆ. ಅಲ್ಲೇ ಮಲಗಿದ್ದರೆ ಅದೇ ಲಯವು. ಅಲ್ಲಿ ಸತ್ತರೆ ಅದೇ ಮೋಕ್ಷವು ಎಂದು ಶ್ರುತಿ ಹೇಳುತ್ತದೆ.

೭೧-೭೨. ಅಲ್ಲಿ ವಾಸಮಾಡುತ್ತಿದ್ದವರಿಗೆ ಕಲಿಯ ಬಾಧೆಯಿರುವುದಿಲ್ಲ. ಅಲ್ಲಿ ರುವ ಕಲ್ಲುಗಳೂ ಚಕ್ರದಿಂದ ಗುರ್ತನ್ನು ಹೊಂದಿವೆ. ಮನುಷ್ಯರೂ ಕೂಡ ಚಕ್ರಾಂಕಿತರಾಗಿದ್ದು ಸಾಕ್ಷಾದ್ದೇವರೆಂದೆನ್ನಬಹುದು. ಪಶುಗಳು ಕೀಟಗಳೆಲ್ಲವೂ ಚಕ್ರಾಂಕಿತಗಳೇ, ಅಲ್ಲಿಯೇ ಲೋಕಪಾಲಕನಾದ ವಿಷ್ಣುವೂ ವಾಸಿಸುವುದು.

೭೩. ಆ ಊರನ್ನು ಬಹು ಪುಣ್ಯಮಾಡಿರುವುದರಿಂದ ನಾನು ಕಂಡೆನು. ಕುರುಕ್ಷೇತ್ರವು ಸರ್ವವಧೆಗಳ ಪಾಪಗಳನ್ನೂ ನಾಶಮಾಡುತ್ತದೆ. ಅದನ್ನು ನೋಡಿ ದ್ದೇನೆ.

೭೪. ಆ ಕುರುಕ್ಷೇತ್ರದಲ್ಲಿ ಸ್ಯಮಂತಪಂಚಕಗಳಿವೆ. ಪಾಪನಾಶಕಗಳು. ತಾರಕಮಂತ್ರವನ್ನು ದೇವರೇ ಉಪದೇಶಮಾಡುವ ವಿಶ್ವನಾಥನಿರುವ ವಾರಾಣಸಿ ಯನ್ನು ನೋಡಿದ್ದೇನೆ.

ಯಸ್ಯಾಂ ಮೃತಾಃ ಕೀಟಪತಂಗಭೃಂಗಾಃ
ಪಶ್ವಾದಯೋ ವಾ ಸುರಯೋನಯೋ ವಾ ।
ಸ್ವಕರ್ಮಸಂಭೋಗಸುಖಂ ವಿಹಾಯ
ಗಚ್ಛಂತಿ ಕೈಲಾಸಮತೀತದುಃಖಾಃ ॥ ೭೫ ॥

ಮಣಿಕರ್ಣೀ ಯತ್ರ ತೀರ್ಥಂ ಯಸ್ಯಾಮುತ್ತರವಾಹಿನೀ ।
ಕರೋತಿ ಸಂಸೃತೇರ್ಬಂಧಚ್ಛೇದಂ ಪಾಪಕೃತಾಮಪಿ ॥ ೭೬ ॥

ಕಪರ್ದಿನಃ ಕುಂಡಲಿನಃ ಸರ್ವಭೂಷಾಧರಾ ವರಾಃ ।
ಗಜಚರ್ಮಪರೀಧಾನಾ ವಸಂತಿ ಗತದುಃಖಕಾಃ ॥ ೭೭ ॥

ಕಾಲಭೈರವನಾಮಾತ್ರ ಕರೋತಿ ಯಮಶಾಸನಂ ।
ನ ಕರೋತಿ ನೃಣಾಂ ವಾರ್ತಾಂ ಯಮೋ ದಂಡಧರಃ ಪ್ರಭುಃ ॥ ೭೮ ॥

ಏತಾದೃಶೀ ಮಯಾ ದೃಷ್ಟಾ ಕಾಶೀ ವಿಶ್ವೇಶ್ವರಾಂಕಿತಾ ।
ಅನೇಕಾನ್ಯಪಿ ತೀರ್ಥಾನಿ ಮಯಾ ದೃಷ್ಟಾನಿ ಭೂಮಿಪ ॥ ೭೯ ॥

---

೭೫. ಆ ಪಟ್ಟಣದಲ್ಲಿ ಮೃತವಾದ ಹುಳುಗಳೂ, ಕೂಡ ತಮ್ಮ ಪುಣ್ಯಪಾಪಗಳನ್ನು ಬಿಟ್ಟು, ದುಃಖಸುಖಗಳನ್ನು ಬಿಟ್ಟು, ಕೈಲಾಸವನ್ನು ಹೊಂದುತ್ತವೆ.

೭೬. ಗಂಗೆಯು ಉತ್ತರವಾಹಿನಿಯಾಗಿ ಹರಿಯುವ ಮಣಿಕರ್ಣಿಕಾತೀರ್ಥವು ಪಾಪಿಗಳಿಗೆ ಬಂಧನದ ನಾಶವನ್ನುಂಟುಮಾಡುತ್ತದೆ.

೭೭. ಆ ಕೈಲಾಸದಲ್ಲಿ ಜಟೆ ಧರಿಸಿ, ಕುಂಡಲವನ್ನು ಹಾಕಿಕೊಂಡು ಒಡವೆಗಳನ್ನು ತೊಟ್ಟು ಗಜಚರ್ಮಧಾರಿಗಳಾಗಿ ದುಃಖವನ್ನು ಕಳೆದು ಸುಖದಿಂದಿರುತ್ತಾರೆ.

೭೮. ಅಲ್ಲಿ ಕಾಲಭೈರವನೆಂಬುವನು ಯಮನಂತೆ ನ್ಯಾಯವನ್ನು ವಿಮರ್ಶಿಸುತ್ತಾನೆ. ಅಲ್ಲಿರುವ ಮನುಷ್ಯರ ವಿಷಯವನ್ನು ಯಮನು ಎತ್ತುವುದಿಲ್ಲ.

೭೯. ಈ ರೀತಿಯಾದ ವಿಶ್ವೇಶ್ವರನಿರುವ ಕಾಶಿಯನ್ನು ನೋಡಿದ್ದೇನೆ. ಅಲ್ಲಿ ಮತ್ತೂ ಅನೇಕ ತೀರ್ಥಗಳನ್ನು ನೋಡಿದ್ದೇನೆ.

**ಪರಮಾಶ್ಚರ್ಯ ಮಹಚ್ಚಿತ್ರಂ ಯದ್ದೃಷ್ಟಂ ನೀಲಪರ್ವತೇ ।**
**ಪುರುಷೋತ್ತಮಸಾಂನಿಧ್ಯೇ ತನ್ನ ಕಾಪ್ಯಕ್ಷಿಗೋಚರಂ　　　　॥ ೮೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಬ್ರಾಹ್ಮಣಸಮಾಗಮನಂ ನಾಮ ಸಪ್ತದಶೋಽಧ್ಯಾಯಃ**

---

೮೦. ಆದರೆ ನೀಲಪರ್ವತದಲ್ಲಿ ಅತ್ಯಾಶ್ಚರ್ಯ ವಿಷಯಗಳನ್ನು ನೋಡಿದ್ದೇನೆ. ಅಲ್ಲಿ ಪುರುಷೋತ್ತಮನ ಸಾನ್ನಿಧ್ಯದಲ್ಲಿ ಎಲ್ಲೂ ನೋಡದ ವಿಷಯವನ್ನು ನೋಡಿದ್ದೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ. ರಾಮಾಶ್ವಮೇಧದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಾದಶೋಽಧ್ಯಾಯಃ

॥ ಬ್ರಾಹ್ಮಣ ಉವಾಚ ॥

ರಾಜಂಸ್ತ್ವಂ ಶೃಣು ಯದ್ವೃತ್ತಂ ನೀಲೇ ಪರ್ವತಸತ್ತಮೇ ।
ಯಚ್ಛ್ರದ್ಧಧಾನಾಃ ಪುರುಷಾಃ ಯಾಂತಿ ಬ್ರಹ್ಮ ಸನಾತನಂ ॥ ೧ ॥

ಮಯಾ ಪರ್ಯಟಿತಾ ತತ್ರ ಗತಂ ನೀಲಾಭಿಧೇ ಗಿರೌ ।
ಗಂಗಾಸಾಗರತೋಯೇನ ಕ್ಷಾಳಿತಪ್ರಾಂಗಣೇ ಮುಹುಃ ॥ ೨ ॥

ತತ್ರ ಭಿಲ್ಲಾ ಮಯಾ ದೃಷ್ಟಾಃ ಪರ್ವತಾಗ್ರೇ ಧನುರ್ಭೃತಃ ।
ಚತುರ್ಭುಜಾ ಮೂಲಫಲೈರ್ಭಕ್ಷ್ಯೈರ್ನಿರ್ವಾಹಿತಕ್ಲಮಾಃ ॥ ೩ ॥

---

## ಹದಿನೆಂಟನೆಯ ಅಧ್ಯಾಯವು

೧. ಬ್ರಾಹ್ಮಣನು ಹೇಳಿದನು:--ಎಲೈ! ರಾಜನೇ, ಆ ನೀಲಪರ್ವತದಲ್ಲಿ ನಡೆದ ವಿಷಯವನ್ನು ಕೇಳು. ಅದನ್ನು ನಂಬಿದರೇನೇ ಅವರು ಬ್ರಹ್ಮನಲ್ಲಿ ಲೀನರಾಗುತ್ತಾರೆ.

೨. ನಾನು ಸಂಚಾರಮಾಡುತ್ತಿರುವಾಗ ಗಂಗೆಯ ನೀರಿನಿಂದ ಪರಿಶುದ್ಧವಾದ ನೀಲಪರ್ವತಕ್ಕೆ ಹೋದೆನು.

೩. ಅಲ್ಲಿ ಭಿಲ್ಲರನ್ನು ನೋಡಿದೆನು. ಅವರು ಧನುಸ್ಸನ್ನು ಧರಿಸಿದ್ದರು. ನಾಲ್ಕು ಭುಜಗಳಿದ್ದುವು. ಕಂದಮೂಲಗಳಿಂದ ತೃಪ್ತರಾಗಿದ್ದರು.

ತದಾ ಮೇ ಮನಸಿ ಕ್ಷಿಪ್ರಂ ಸಂಶಯಸ್ಸುಮಹಾನಭೂತ್ ।
ಚತುರ್ಭುಜಾಃ ಕಿಮೇತೇ ವೈ ಧನುರ್ಬಾಣಧರಾ ನರಾಃ ॥ ೪ ॥

ವೈಕುಂಠವಾಸಿನಾಂ ರೂಪಂ ದೃಶ್ಯತೇ ವಿಜಿತಾತ್ಮನಾಂ ।
ಕಥಮೇತೈರುಪಾಲಬ್ಧಂ ಬ್ರಹ್ಮಾದ್ಯೈರಪಿ ದುರ್ಲಭಂ ॥ ೫ ॥

ಶಂಖಚಕ್ರಗದಾಶಾರ್ಙ್ಗಪದ್ಮೋಲ್ಲಸಿತಪಾಣಯಃ ।
ವನಮಾಲಾಪರೀತಾಂಗಾ ವಿಷ್ಣುಭಕ್ತಾ ಇವಾಂತಿಕೇ ॥ ೬ ॥

ಸಂಶಯಾವಿಷ್ಟಚಿತ್ತೇನ ಮಯಾ ಪೃಷ್ಟಂ ತದಾ ನೃಪ ।
ಯೂಯಂ ಕೇ ಬತ ಯುಷ್ಮಾಭಿರ್ಲಬ್ಧಂ ಚಾತುರ್ಭುಜಂ ಕಥಂ ॥ ೭ ॥

ತದಾ ತೈರ್ಬಹು ಹಾಸ್ಯಂ ತು ಕೃತ್ವಾ ಮಾಂ ಪ್ರತಿ ಭಾಷಿತಂ ।
ಬ್ರಾಹ್ಮಣೋಽಯಂ ನ ಜಾನಾತಿ ಪಿಂಡಮಾಹಾತ್ಮ್ಯಮದ್ಭುತಂ ॥ ೮ ॥

---

೪. ಆಗ ನನ್ನ ಮನಸ್ಸಿನಲ್ಲಿ ದೊಡ್ಡ ಸಂಶಯವುಂಟಾಯಿತು. ಇದೇನು, ಇವರಿಗೆ ಚತುರ್ಭುಜವೆಲ್ಲಿಯದು ? ಧನುರ್ಬಾಣಗಳೇತಕ್ಕೆ ?

೫. ಇವರ ರೂಪವೂ ವೈಕುಂಠದಲ್ಲಿ ವಾಸಮಾಡುವ ಯೋಗಿಗಳ ರೂಪದಂತಿದೆಯಲ್ಲ ? ಬ್ರಹ್ಮಾದಿಗಳಿಗೂ ಸಿಕ್ಕದ ಈ ರೂಪವು ಹೇಗೆ ಸಿಕ್ಕಿತು ?

೬. ಶಂಖ, ಚಕ್ರ, ಗದಾ, ಶಾರ್ಙ್ಗ, ಪದ್ಮಗಳನ್ನೂ ವನಮಾಲೆಯನ್ನೂ ಧರಿಸಿ ಇರುವ ವಿಷ್ಣುಭಕ್ತರಂತಿದ್ದಾರಲ್ಲ ! ಎಂದು ಸಂಶಯಗೊಂಡು ಆಗ ಅವರನ್ನು ಕೇಳಿದನು.

೭. ನೀವು ಯಾರು ? ನೀವು ಹೇಗೆ ನಾಲ್ಕು ಭುಜಗಳನ್ನು ಹೊಂದಿದಿರಿ ?

೮. ಆಗ ಅವರು ಬಹಳವಾಗಿ ನಕ್ಕು ನನ್ನನ್ನು ಕುರಿತು ಹೇಳಿದರು. ಇವನು ಬ್ರಾಹ್ಮಣನಾದರೂ ಕೂಡ ಅದ್ಭುತವಾದ ಪಿಂಡದ ಮಹಿಮೆಯನ್ನು ಕೇಳಿ ತಿಳಿದಿಲ್ಲವಲ್ಲ !

ಇತಿ ಶ್ರುತ್ವಾವದಂ ಚಾಹಂ ಕಃ ಪಿಂಡಃ ಕಸ್ಯ ದೀಯತೇ ।
ತನ್ಮಮ ಬ್ರೂತ ಧರ್ಮಿಷ್ಠಾಶ್ಚತುರ್ಭುಜಶರೀರಿಣಃ ॥ ೯ ॥

ತದಾ ಮದ್ವಾಕ್ಯಮಾಕರ್ಣ್ಯ ಕಥಿತಂ ತೈರ್ಮಹಾತ್ಮಭಿಃ ।
ಸರ್ವಂ ತಸ್ಯ ತು ಯದ್ವೃತ್ತಂ ಚತುರ್ಭುಜಭವಾದಿಕಂ ॥ ೧೦ ॥

॥ ಕಿರಾತಾ ಊಚುಃ ॥

ಶೃಣು ಬ್ರಾಹ್ಮಣ ವೃತ್ತಾಂತಮಸ್ಮಾಕಂ ಪ್ರೋಕಶ್ಶಿಶುಃ ।
ನಿತ್ಯಂ ಜಂಬೂಫಲಾದೀನಿ ಭಕ್ಷಯನ್ ಕ್ರೀಡಯಾ ಚರನ್ ॥ ೧೧ ॥

ಏಕದಾ ರಮಮಾಣಸ್ತು ಗಿರಿಶೃಂಗಂ ಮನೋರಮಂ ।
ಸಮಾರುರೋಹ ಶಿಶುಭಿಃ ಸಮಂತಾತ್ಪರಿವಾರತಃ ॥ ೧೨ ॥

ತದಾ ತತ್ರ ದದರ್ಶಾಥ ದೇವಾಯತನಮದ್ಭುತಂ ।
ಗಾರುತ್ಮದಾದಿಮಣಿಭಿಃ ಖಚಿತಂ ಸ್ವರ್ಣಭಿತ್ತಿಕಂ ॥ ೧೩ ॥

ಸುಕಾಂತ್ಯಾ ತಿಮಿರಶ್ರೇಣೀಂ ದಾರಯದ್ರವಿವದ್ಭೃಶಂ ।
ದೃಷ್ಟ್ವಾ ವಿಸ್ಮಯಮಾಪೇದೇ ಕಿಮಿದಂ ಕಸ್ಯ ವೈ ಗೃಹಂ ॥ ೧೪ ॥

---

೯. ಇದನ್ನು ಕೇಳಿ ಯಾವ ಪಿಂಡ? ಯಾರಿಗೆ ಕೊಡಬೇಕು? ಎಲೈ! ಚತುರ್ಭುಜರೇ, ಹೇಳಿರಿ. ಎಂದೆನು.

೧೦. ಆಗ ನನ್ನ ಮಾತನ್ನು ಕೇಳಿ ಅವರು ಅಲ್ಲಿ ಉಂಟಾದ ನಾಲ್ಕು ತೋಳನ್ನು ಹೊಂದುವಿಕೆಯು ಮುಂತಾದುವನ್ನು ಹೇಳಿದರು.

೧೧-೧೨. ಕಿರಾತರು ಹೇಳಿದರು:—ಎಲೈ! ಬ್ರಾಹ್ಮಣನೇ, ಕೇಳು, ನಮ್ಮ ಒಬ್ಬ ಹುಡುಗನು ದಿನವೂ ನೇರಳೆಹಣ್ಣುಗಳನ್ನು ತಿನ್ನುತ್ತ ಆಟವಾಡುತ್ತಿದ್ದು ಒಂದು ದಿನ ಅದೇ ಆಟದಿಂದ ಮಿಕ್ಕ ಹುಡುಗರೊಡನೆ ಬೆಟ್ಟಕ್ಕೆ ಹತ್ತಿದನು.

೧೩. ಅಲ್ಲಿ ಮರಕತವೇ ಮೊದಲಾದ ಮಣಿಗಳಿಂದ ಕಟ್ಟಿದ್ದ ಒಂದು ಆಶ್ಚರ್ಯಕರವಾದ ದೇವಸ್ಥಾನವನ್ನು ಕಂಡನು.

೧೪. ಅದು ತನ್ನ ಕಾಂತಿಯಿಂದ ಸೂರ್ಯನಂತೆ ಕತ್ತಲೆಯನ್ನು ನಾಶಮಾಡುತ್ತಿರುವುದನ್ನು ನೋಡಿ ಆಶ್ಚರ್ಯಹೊಂದಿ, ಇದೇನು? ಯಾರಮನೆ?

**ಗತ್ವಾ ವಿಲೋಕಯಾಮೀತಿ ಕಿಮಿದಂ ಮಹತಾಂ ಪದಂ ।**
**ಇತಿ ಸಂಚಿಂತ್ಯ ಗೇಹಾಂತರ್ಜಗಾಮ ಬಹುಭಾಗ್ಯತಃ** ॥ ೧೫ ॥

**ದದರ್ಶ ತತ್ರ ದೇವೇಶಂ ಸುರಾಸುರನಮಸ್ಕೃತಂ ।**
**ಕಿರೀಟಹಾರಕೇಯೂರಗ್ರೈವೇಯಾದ್ಯೈರ್ವಿರಾಜಿತಂ** ॥ ೧೬ ॥

**ಅವತಂಸೇ ಮನೋಜ್ಞೇ ತು ಧಾರಯಂತಂ ಸುನಿರ್ಮಲೇ ।**
**ಪಾದಪದ್ಮೇ ತುಳಸಿಕಾಗಂಧಮತ್ತಷಡಂಘ್ರಿಕೇ** ॥ ೧೭ ॥

**ಶಂಖಚಕ್ರಗದಾಶಾಂರ್ಙ್ಗಪದ್ಮಾದ್ಯೈರ್ಮೂರ್ತಿಸಂಯುತೈಃ ।**
**ಉಪಾಸಿತಾಂಘ್ರಿಂ ಶ್ರೀಮೂರ್ತಿಂ ನಾರದಾದ್ಯೈಸ್ಸುಸೇವಿತಂ** ॥ ೧೮ ॥

**ಕೇಚಿದ್ಗಾಯಂತಿ ನೃತ್ಯಂತಿ ಹಸಂತಿ ಪರಮಾದ್ಭುತಂ ।**
**ಪ್ರೀಣಯಂತಿ ಮಹಾರಾಜಂ ಸರ್ವಲೋಕೈಕವಂದಿತಂ** ॥ ೧೯ ॥

**ಹರಿಂ ವೀಕ್ಷ್ಯ ಮದೀಯೋರ್ಭಸ್ತತ್ರ ಸಂಜಗ್ಮಿವಾನ್ಮುನೇ ।**
**ದೇವಾಸ್ತತ್ರ ವಿಧಾಯೋಚ್ಚೈಃ ಪೂಜಾಂ ಧೂಪಾದಿಕಂ ಪುನಃ** ॥ ೨೦ ॥

---

೧೫. ಇದು ಯಾವ ದೇವರ ಮನೆಯು? ನೋಡೋಣವೆಂದು ಯೋಚಿಸಿ ಭಾಗ್ಯದಿಂದ ಒಳಕ್ಕೆ ಹೋದನು.

೧೬. ಅಲ್ಲಿ ಕಿರೀಟ, ಹಾರ, ಭುಜಕೀರ್ತಿ, ಕತ್ತಿನ ಒಡವೆ ಮುಂತಾದುವುಗಳಿಂದ ಪ್ರಕಾಶಿಸುತ್ತ ಸುರಾಸುರರಿಂದ ನಮಸ್ಕರಿಸಲ್ಪಟ್ಟ ವಿಷ್ಣುವನ್ನು ನೋಡಿದನು

೧೭-೧೮. ಚನ್ನಾಗಿರುವ ಕುಂಡಲಗಳನ್ನು ಧರಿಸಿ ಪಾದಗಳಲ್ಲಿ ತುಳಸಿಯನ್ನು ಪೂಜಿಸಿಕೊಂಡು ಶಂಖಚಕ್ರಗದಾಶಾಂರ್ಙ್ಗಗಳು ಮೂರ್ತಿಮತ್ತಾಗಿ ಸೇವಿಸುವ ನಾರದಾದಿಗಳಿಂದ ಸೇವಿತವಾದ ವಿಷ್ಣುವನ್ನು ನೋಡಿದನು.

೧೯. ಆ ಸ್ವಾಮಿಯನ್ನು ಕುರಿತು ಕೆಲವರು ಗಾನಮಾಡುತ್ತಾರೆ. ಕುಣಿಯುತ್ತಾರೆ. ಆ ಅದ್ಭುತವನ್ನು ನೋಡಿ ಕೆಲವರು ನಗುತ್ತಾರೆ. ನಾನಾ ಬಗೆಗಳಿಂದ ಆ ಸ್ವಾಮಿಯನ್ನು ಸಂತೋಷಪಡಿಸುತ್ತಾರೆ.

೨೦-೨೧. ಹರಿಯನ್ನು ನೋಡಿ ನಮ್ಮ ಹುಡುಗನು ಅಲ್ಲಿಗೆ ಹೋದನು. ದೇವತೆಗಳು ಪೂಜೆಮಾಡಿ ಧೂಪದೀಪಾದಿಗಳನ್ನೆತ್ತಿ ನೈವೇದ್ಯಮಾಡಿ, ಮಂಗಳಾರತಿ